# ದಕ್ಷಿಣ ಕನ್ನಡದಲ್ಲಿ ಸಹಕಾರ ಚಳುವಳಿ: ಒಂದು ಐತಿಹಾಸಿಕ ಅಧ್ಯಯನ

ಹಂಪಿ ಕನ್ನಡ ವಿಶ್ವ ವಿದ್ಯಾಲಯದ ಎಂ.ಫಿಲ್ ಪದವಿ
(ಸಮಾಜ ವಿಜ್ಞಾನ ನಿಕಾಯ) ಗಾಗಿ ಸಲ್ಲಿಸುತ್ತಿರುವ ಸಂಪ್ರಬಂಧ

ಸಂಶೋಧಕಿ
ಇಂದಿರಾ ಭಂಡಾರಿ ಕೆ.ಎಂ.

ಮಾರ್ಗದರ್ಶಕರು
ಡಾ। ಪೀಟರ್ ವಿಲ್ಸನ್ ಪ್ರಭಾಕರ್

೨೦೦೯

ಕರ್ನಾಟಕ ತಿಯೋಲಾಜಿಕಲ್ ಸಂಶೋಧನ ಕೇಂದ್ರ
ಹಂಪಿ ವಿಶ್ವ ವಿದ್ಯಾಲಯದ ಮಾನ್ಯತಾ ಕೇಂದ್ರ
ಬಲ್ಮಠ ಮಂಗಳೂರು - ೫೭೫ ೦೦೧

# ದಕ್ಷಿಣ ಕನ್ನಡದಲ್ಲಿ ಸಹಕಾರ ಚಳುವಳಿ: ಒಂದು ಐತಿಹಾಸಿಕ ಅಧ್ಯಯನ

ಹಂಪಿ ಕನ್ನಡ ವಿಶ್ವ ವಿದ್ಯಾಲಯದ ಎಂ.ಫಿಲ್ ಪದವಿ
(ಸಮೂಜ ವಿಜ್ಞಾನ ನಿಕಾಯ) ಗಾಗಿ ಸಲ್ಲಿಸುತ್ತಿರುವ ಸಂಪ್ರಬಂಧ

ಸಂಶೋಧಕಿ
ಇಂದಿರಾ ಭಂಡಾರಿ ಕೆ.ಎಂ.



ಮಾರ್ಗದರ್ಶಕರು
ಡಾ। ಪೀಟರ್ ವಿಲ್ಸನ್ ಪ್ರಭಾಕರ್

೨೦೦೯

ಕರ್ನಾಟಕ ತಿಯೋಲಾಜಿಕಲ್ ಸಂಶೋಧನ ಕೇಂದ್ರ
ಹಂಪಿ ವಿಶ್ವ ವಿದ್ಯಾಲಯದ ಮಾನ್ಯತಾ ಕೇಂದ್ರ
ಬಲ್ಮಠ ಮಂಗಳೂರು – ೫೭೫ ೦೦೧

## ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಸಾದರ ಪಡಿಸಿದ ದಕ್ಷಿಣ ಕನ್ನಡದಲ್ಲಿ ಸಹಕಾರ ಚಳುವಳಿ – ಒಂದು ಐತಿಹಾಸಿಕ ಅಧ್ಯಯನ ಶೀರ್ಷಿಕೆಯ ಈ ಸಂಪ್ರಬಂಧವು ನನ್ನ ಸ್ವತಂತ್ರ ಕೃತಿಯಾಗಿದ್ದು ವಿಶ್ಲೇಷಣೆ ಮತ್ತು ಅಧ್ಯಯನದ ಫಲೋದಯವಾಗಿದೆ. ಮಂಗಳೂರಿನ ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರದಲ್ಲಿ ಡಾ.ಪೀಟರ್ ವಿಲ್ಸನ್ ಪ್ರಭಾಕರ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಈ ಸಂಪ್ರಬಂಧವನ್ನು ಬೇರಾವುದೇ ಪದವಿ, ಡಿಪ್ಲೋಮಾ ಅಥವಾ ತತ್ಸಮಾನ ಉಪಾಧಿಗಳ ಪ್ರಾಪ್ತಿಗಾಗಿ ಅಥವಾ ಲಾಭಕ್ಕಾಗಿ ಇಡಿಯಾಗಿ ಅಥವಾ ಬಿಡಿಯಾಗಿ ಬಳಸಿಕೊಂಡಿಲ್ಲವೆಂದು ನಾನು ಈ ಮೂಲಕ ದೃಢಪಡಿಸುತ್ತೇನೆ.

K.M. Indira Bhandary

ಕರ್ನಾಟಕ ತಿಯೋಲಾಜಿಕಲ್ ಸಂಶೋಧನ ಕೇಂದ್ರ
ಬಲ್ಮಠ ಮಂಗಳೂರು – ೫೭೫೦೦೧
ದಿನಾಂಕ: ೧೭ -೦೬ - ೨೦೦೬

ಇಂದಿರಾ ಭಂಡಾರಿ ಕೆ.ಎಂ
ಸಂಶೋಧಕಿ

## ಯೋಗ್ಯತಾ ಪತ್ರ

ಇಂದಿರಾ ಭಂಡಾರಿ ಕೆ.ಎಂ. ಅವರು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ 'ದಕ್ಷಿಣ ಕನ್ನಡದಲ್ಲಿ ಸಹಕಾರ ಚಳುವಳಿ – ಒಂದು ಐತಿಹಾಸಿಕ ಅಧ್ಯಯನ' ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಎಂ.ಫಿಲ್ ಪದವಿ ಪ್ರಾಪ್ತಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಬೇಕೆಂದು ಸಿದ್ಧಪಡಿಸಿದ್ದಾರೆ. ಈ ಸಂಪ್ರಬಂಧವು ಸಂಶೋಧಕರ ಸ್ವಂತ ಪರಿಶ್ರಮ, ವಿಶ್ಲೇಷಣೆ, ಅಭಿಪ್ರಾಯ ಸಂಗ್ರಹ, ಸಂದರ್ಶನ ಮತ್ತು ಸಂಶೋಧನೆಯ ಫಲಸ್ವರೂಪವಾಗಿದೆ. ಇವರು ಸಂಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಿಗಾಗಿಯಾಗಲಿ ಬಳಸಿಕೊಂಡಿಲ್ಲ.

ಡಾ. ಪೀಟರ್ ವಿಲ್ಸನ್ ಪ್ರಭಾಕರ್
ಸಂಶೋಧನ ಮಾರ್ಗದರ್ಶಕರು

ಕರ್ನಾಟಕ ತಿಯೋಲಾಜಿಕಲ್ ಸಂಶೋಧನ ಕೇಂದ್ರ
ಬಲ್ಮಠ ಮಂಗಳೂರು – ೫೭೫೦೦೧
ದಿನಾಂಕ: ೧೭-೦೮-೨೦೦೮

# ನೆನಕೆ

'ದಕ್ಷಿಣ ಕನ್ನಡದಲ್ಲಿ ಸಹಕಾರ ಚಳುವಳಿ – ಒಂದು ಐತಿಹಾಸಿಕ ಅಧ್ಯಯನ' ಮಂಗಳೂರಿನ ಕರ್ನಾಟಕ ತಿಯೋಲಾಜಿಕಲ್ ಕೇಂದ್ರದಡಿಯಲ್ಲಿ ನಡೆಸಿದ ಕಾಲಬದ್ಧ ಸಂಶೋಧನೆ. ಈ ಸಂಶೋಧನ ಕಾರ್ಯಕ್ಕೆ ಎಲ್ಲ ಬಗೆಯ ವ್ಯವಸ್ಥಾಪನ ನೆರವು ನೀಡಿದ ಹಂಪಿ ಕನ್ನಡ ವಿಶ್ವವಿದ್ಯಾಲಯ ಹಾಗೂ ಕರ್ನಾಟಕ ತಿಯೋಲಾಜಿಕಲ್ ಸಂಶೋಧನ ಕೇಂದ್ರಗಳನ್ನು ಕೃತಜ್ಞತಾಪೂರ್ವಕವಾಗಿ ನೆನೆಯುತ್ತೇನೆ.

ಈ ಸಂಪ್ರಬಂಧದ ರಚನೆಗೆ ನನಗೆ ಸೂಕ್ತ ಸಲಹೆ ಸೂಚನೆ ನೀಡಿ ನನ್ನನ್ನು ಪ್ರೋತ್ಸಾಹಿಸಿದ ನನ್ನ ಮಾರ್ಗದರ್ಶಕರಾದ ಕರ್ನಾಟಕ ತಿಯೋಲಾಜಿಕಲ್ ಸಂಶೋಧನ ಕೇಂದ್ರದ ಪ್ರಾಧ್ಯಾಪಕ ಡಾ.ಪೀಟರ್ ವಿಲ್ಸನ್ ಪ್ರಭಾಕರ್‌ರವರಿಗೆ ನನ್ನ ವಿಶೇಷ ವಂದನೆಗಳು. ಆಡಳಿತಾತ್ಮಕ ಸಹಕಾರ ನೀಡಿ ನನ್ನ ಸಂಶೋಧನೆಗೆ ಪೂರ್ಣ ಬೆಂಬಲ ನೀಡಿದ ಕರ್ನಾಟಕ ತಿಯೋಲಾಜಿಕಲ್ ಸಂಶೋಧನ ಕೇಂದ್ರದ ಪ್ರಾಧ್ಯಾಪಕರಾದ ಡಾ.ಎ.ವಿ.ನಾವಡ, ಕರ್ನಾಟಕ ತಿಯೋಲಾಜಿಕಲ್ ಕಾಲೇಜಿನ ಪ್ರಾಂಶುಪಾಲರಾಗಿದ್ದು ಪ್ರಸ್ತುತ ಸಿ.ಎಸ್.ಐ., ಕೆ.ಎಸ್.ಡಿ. ಯ ಬಿಷಪ್‌ರಾಗಿರುವ ರೈಟ್/ರೆವೆ/ಡಾ/ಜೆ.ಎಸ್. ಸದಾನಂದ ಹಾಗೂ ಕರ್ನಾಟಕ ತಿಯೋಲಾಜಿಕಲ್ ಸಂಶೋಧನ ಕೇಂದ್ರದ ನಿರ್ದೇಶಕರಾದ ರೆವೆ/ಡಾ. ರತ್ನಾಕರ್ ಸದಾನಂದರವರಿಗೆ ನನ್ನ ಹೃತ್ಪೂರ್ವಕ ನಮನಗಳು.

ನನ್ನ ಸಂಶೋಧನ ಪ್ರಬಂಧ ರಚನೆಗೆ ಅಗತ್ಯ ಇರುವ ಮಾಹಿತಿಗಳನ್ನು ಒದಗಿಸಿಕೊಟ್ಟು ನನಗೆ ನೆರವಾದ ಹಿರಿಯ ಸಹಕಾರಿ ನೇತಾರ ಪೇರಾಜೆ ಶ್ರೀನಿವಾಸರಾಯರು, ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕಿನ ನಿರ್ದೇಶಕರಾದ ಜೀವನ್ ಭಂಡಾರಿ, ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕಿನ ಆಡಳಿತ ನಿರ್ದೇಶಕರಾದ ನಾರಾಯಣ ಕಾಮತ್, ದಕ್ಷಿಣ ಕನ್ನಡ ಜಿಲ್ಲಾ ಸಹಕಾರಿ ಯೂನಿಯನ್‌ನ ಕಾರ್ಯ ನಿರ್ವಹಣಾಧಿಕಾರಿ ಸಾವಿತ್ರಿ ರೈ ಮತ್ತು ಸಿಬ್ಬಂದಿ ವರ್ಗ, ಪುತ್ತೂರು ಕೋ-ಓಪರೇಟಿವ್ ಟೌನ್ ಬ್ಯಾಂಕ್‌ನ ಅಧ್ಯಕ್ಷರು ಹಾಗೂ ಆಡಳಿತ ನಿರ್ದೇಶಕರು, ಜಿಲ್ಲೆಯ ವಿವಿಧ ಸಹಕಾರ ಸಂಘಗಳ ಅಧ್ಯಕ್ಷರು ಹಾಗೂ ಸಿಬ್ಬಂದಿ ವರ್ಗ, ಬೆಸೆಂಟ್ ಮಹಿಳಾ ಪದವಿ ಕಾಲೇಜು ಮಂಗಳೂರಿನ ವಾಣಿಜ್ಯ ಶಾಸ್ತ್ರ ಉಪನ್ಯಾಸಕಿ ಡಾ. ಸುಧಾ ರಾಜಾರಾಂ ಇವರುಗಳನ್ನು ನಮ್ರತೆಯಿಂದ ಸ್ಮರಿಸುತ್ತೇನೆ.

ನನ್ನ ಅಧಯನಕ್ಕೆ ಅಗತ್ಯವಾದ  ಗ್ರಂಥಗಳನ್ನು ತಮ್ಮ ಕಾಲೇಜಿನ ಗ್ರಂಥಾಲಯದಿಂದ ಒದಗಿಸಿಕೊಟ್ಟು ಸಹಕರಿಸಿದ ವಿವೇಕಾನಂದ ಕಾಲೇಜು ಪುತ್ತೂರು ಇದರ ಪ್ರಾಂಶುಪಾಲರಾದ ಪ್ರೊ. ವೇದವ್ಯಾಸ ಹಾಗೂ ಗ್ರಂಥಾಲಯದ ಸಿಬ್ಬಂದಿ ಮತ್ತು ಕರ್ನಾಟಕ ಇನ್‌ಸ್ಟಿಟ್ಯೂಟ್ ಆಫ್ ಕೋ-ಓಪರೇಟಿವ್ ಮ್ಯಾನೇಜ್‌ಮೆಂಟ್ ಮೂಡಬಿದ್ರೆ ಇದರ ಪ್ರಾಂಶುಪಾಲರಾದ ಪುಟ್ಟ ಸ್ವಾಮಿಯವರಿಗೆ

ನನ್ನ ಹೃತ್ಪೂರ್ವಕ ಕೃತಜ್ಞತೆಗಳು. ಈ ಸಂಶೋಧನೆಯನ್ನು ಕೈಗೆತ್ತಿಕೊಳ್ಳಲು ನನ್ನನ್ನು ಹುರಿದುಂಬಿಸಿ ಪ್ರೇರಣೆ ನೀಡಿದ ವಿವೇಕಾನಂದ ಕಾಲೇಜಿನ ಅರ್ಥಶಾಸ್ತ್ರ ಪ್ರಾಧ್ಯಾಪಕರಾದ ಡಾ. ವಿಘ್ನೇಶ್ವರ ವರ್ಮುಡಿಯವರಿಗೆ ನನ್ನ ವಿಶೇಷ ವಂದನೆಗಳು.

ನನ್ನ ಸಂಶೋಧನೆಯ ಕೆಲಸ ಕಾರ್ಯಗಳಿಗೆ ಸಂಪೂರ್ಣ ಸಹಕಾರ ನೀಡಿದ ನನ್ನ ಪತಿ ರಾಧಾಕೃಷ್ಣ ಆಳ್ವ, ತಂದೆ ಕೃಷ್ಣ ಪ್ರಸಾದ್ ಭಂಡಾರಿ, ತಾಯಿ ಚಂದ್ರಾ ಕೆ.ಪಿ. ಭಂಡಾರಿ, ಸಹೋದರಿ ಅನುರಾಧ ಪಿ. ಶೆಟ್ಟಿ, ಚಿಕ್ಕಪ್ಪ ಸುಧಾಕರ್ ಭಂಡಾರಿ, ಸಂಶೋಧನ ಮಾಹಿತಿಗಳನ್ನು ಜೋಡಿಸಲು ನೆರವಾದ ಮಗ ಸೋಹನ್ ಆಳ್ವ ಹಾಗೂ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಸಹಕರಿಸಿದ ಪ್ರತಿಯೊಬ್ಬರಿಗೂ ನನ್ನ ನೆನಕೆಗಳು.

ಕರ್ನಾಟಕ ತಿಯೋಲಾಜಿಕಲ್ ಸಂಶೋಧನ ಕೇಂದ್ರ
ಬಲ್ಮಠ ಮಂಗಳೂರು – ೫೭೫೦೦೧

ಇಂದಿರಾ ಭಂಡಾರಿ ಕೆ.ಎಂ
ಸಂಶೋಧಕಿ

# ದಕ್ಷಿಣ ಕನ್ನಡದಲ್ಲಿ ಸಹಕಾರ ಚಳುವಳಿ – ಒಂದು ಐತಿಹಾಸಿಕ ಅಧ್ಯಯನ

## ಅಧ್ಯಾಯಗಳ ವಿವರ

# ಅಧ್ಯಾಯ ೧

# ಅಧ್ಯಯನದ ಪರಿಗ್ರಹಿಕೆ

೧.೧ : ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವಿಧಾನಗಳು

೧.೨ : ಆಕರ ಸಾಮಾಗ್ರಿಗಳು

೧.೩ : ಅಧ್ಯಯನದ ವಿನ್ಯಾಸ

೧.೪ : ದಕ್ಷಿಣ ಕನ್ನಡದ ಸಹಕಾರ ಚಳುವಳಿಯ ಅಧ್ಯಯನದ ಅಗತ್ಯತೆ.

# ಅಧ್ಯಾಯ ೧

# ಅಧ್ಯಯನದ ಪರಿಗ್ರಹಿಕೆ

ಸಹಕಾರ ಜೀವಿಗಳಿಗೆ ಅವಶ್ಯವಾಗಿ ಬೇಕಾಗಿರುವ ಪ್ರವೃತ್ತಿ. ಜೀವಿಗಳಲ್ಲಿ ಬದುಕಿಗಾಗಿ ಪರಸ್ಪರ ಅವಲಂಬನೆ ಮತ್ತು ಪರಸ್ಪರ ಕೊಡುಕೊಳ್ಳುವಿಕೆ ಪ್ರಕೃತಿಯಲ್ಲಿ ನಿರಂತರವಾಗಿ ನಡೆಯುವ ಪ್ರಕ್ರಿಯೆ ಸಂಘಜೀವಿ ಮತ್ತು ಸಮಾಜಜೀವಿಯಾದ ಮಾನವನಿಗೆ ಸಾಮಾಜಿಕ ಹಾಗೂ ಆರ್ಥಿಕ ಜೀವನದ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಸಹಕಾರ ಅತ್ಯುತ್ತಮ ಮಾರ್ಗ. ಇತಿಹಾಸ ಪೂರ್ವಕಾಲದಿಂದ ವರ್ತಮಾನ ಕಾಲದವರೆಗೆ ಜೀವನದ ಪ್ರತಿಯೊಂದು ಕ್ಷೇತ್ರದಲ್ಲಿ ಮಾನವ ಜನಾಂಗದ ಅಭಿವೃದ್ಧಿಯಲ್ಲಿ ಸಹಕಾರ ಮಹತ್ವದ ಪಾತ್ರವಹಿಸಿದೆ. ಸಹಕಾರವು ***"ಪ್ರತಿಯೊಬ್ಬ ವ್ಯಕ್ತಿಯು ಸಮಾಜಕ್ಕಾಗಿ ಮತ್ತು ಸಮಾಜವು ಪ್ರತಿಯೊಬ್ಬ ವ್ಯಕ್ತಿಗಾಗಿ"*** ಎಂಬ ತತ್ವದ ಭದ್ರ ತಳಹದಿಯ ಮೇಲೆ ನಿಂತಿದೆ[೧].

"ಕೋ– ಒಪರೇಶನ್" (ಸಹಕಾರ) ಎಂಬ ಪದ ಲ್ಯಾಟಿನ್ 'ಕೋ' ಮತ್ತು 'ಒಪರರಿ' ಎಂಬ ಪದಗಳಿಂದ ಬಂದಿದೆ. 'ಕೋ' ಎಂದರೆ ಒಟ್ಟಾಗಿ ಮತ್ತು 'ಒಪರರಿ' ಅಂದರೆ ಕೆಲಸ ಮಾಡುವುದು ಎಂದರ್ಥ. ಒಂದು ಸಾಮಾನ್ಯ ಉದ್ದೇಶಕ್ಕಾಗಿ ಮತ್ತು ಪರಸ್ಪರ ಲಾಭಕ್ಕಾಗಿ ಒಟ್ಟಾಗಿ ಕೆಲಸ ಮಾಡುವುದು ಎಂಬುದು ಇದರ ಸಾಮಾನ್ಯ ಅರ್ಥ. ಜನರು ಸ್ವ ಸಂತೋಷದಿಂದ ಸಮಾನತೆಯ ತತ್ವದ ಆಧಾರದ ಮೇಲೆ ಆರ್ಥಿಕ ಶೋಷಣೆಯನ್ನು ನಿವಾರಿಸಲು ಮತ್ತು ತಮ್ಮ ಆರ್ಥಿಕ ಅಗತ್ಯತೆಗಳನ್ನು ಪೂರೈಸಿಕೊಳ್ಳಲು ಸಂಘಟಿತರಾಗುವುದು ಎಂಬುದು ಅದರ ವಿಶೇಷಾರ್ಥ[೨]. ಸಹಕಾರ ಎಂಬ ಪದವನ್ನು ನಿರ್ದಿಷ್ಟವಾಗಿ ವ್ಯಾಖ್ಯಾನಿಸುವುದು ಸಾಧ್ಯವಿಲ್ಲ. ಅರ್ಥಶಾಸ್ತ್ರಜ್ಞರು, ಸಹಕಾರಿಗಳು ಸಹಕಾರ ಹಾಗೂ ಸಹಕಾರ ಸಂಘಗಳ ಬಗ್ಗೆ ವಿಭಿನ್ನ ವ್ಯಾಖ್ಯೆಗಳನ್ನು ನೀಡಿದ್ದಾರೆ. ಪಿ. ಹೆಚ್. ಕ್ಯಾಸೆಲ್‌ಮೆನ್‌ರವರ ಪ್ರಕಾರ "ಸಹಕಾರ ಸಾಮಾಜಿಕ ಅಂಶಗಳನ್ನು ಒಳಗೊಂಡ ಆರ್ಥಿಕ ಪದ್ಧತಿ". "ಸದಸ್ಯರ ಆರ್ಥಿಕ ಹಿತಾಸಕ್ತಿಗಳ ಬೆಳವಣಿಗೆಗಾಗಿ ಸಮಾನತೆಯ ತಳಹದಿಯ ಮೇಲೆ ಮಾನವೀಯತೆಯ ದೃಷ್ಟಿಯಿಂದ, ಸ್ವಸಂತೋಷದಿಂದ ವ್ಯಕ್ತಿಗಳು ಸೇರಿಕೊಂಡಿರುವಂತಹ ಒಂದು ಬಗೆಯ ಸಂಸ್ಥೆಯೇ ಸಹಕಾರ ಸಂಘ" ಎಂಬುದು ಹೆಚ್.ಕ್ಯಾಲ್ವರ್ಟ್‌ರವರ ಅಭಿಪ್ರಾಯ.[೩]

ಪ್ರೊ. ಪೌಲ್ ಲ್ಯಾಂಬರ್ಟ್‌ರ ಪ್ರಕಾರ "ಸಹಕಾರ ಸಂಘವು ಪ್ರಜಾಸತ್ತಾತ್ಮಕ ನಿಯಮಗಳನ್ನು ಬಳಸಿಕೊಂಡು ತನ್ನ ಸದಸ್ಯರ ಮತ್ತು ಸಮಾಜದ ಸೇವೆಯನ್ನೇ ಗುರಿಯಾಗಿಟ್ಟುಕೊಂಡು ಸದಸ್ಯರಿಂದ ರಚಿಸಲ್ಪಟ್ಟು ನಿರ್ದೇಶಿಸಲ್ಪಡುವ ಒಂದು ಸಂಘಟನೆ." "ದುರ್ಬಲ ವರ್ಗದವರು ಒಂದು ಗೂಡಿ ಸಾಮೂಹಿಕ ವ್ಯವಹಾರಕ್ಕಾಗಿ ಕಟ್ಟಿಕೊಂಡ ಸಂಸ್ಥೆಯೇ ಸಹಕಾರ ಸಂಘ" ಎನ್ನುವುದು

ಸಿ.ಆರ್.ಫೇಯವರ ಅಭಿಮತ. ಸರ್. ಹಾರೆಸ್ ಪ್ಲಾಕೆಂಟ್‌ರ ಪ್ರಕಾರ ಸಹಕಾರದ ಮೂರು ಸೂತ್ರಗಳು "ಉತ್ತಮ ವ್ಯವಸಾಯ, ಉತ್ತಮ ವ್ಯವಹಾರ ಮತ್ತು ಉತ್ತಮ ಜೀವನ", "ಸಮಾನ ಹಕ್ಕು ಭಾಧ್ಯತೆಯುಳ್ಳ ಜನರು ಸ್ವಯಂ ಇಚ್ಛೆಯಿಂದ ತಮ್ಮ ಆರ್ಥಿಕ ಜೀವನಕ್ಕೆ ನಿಕಟವಾಗಿ ಸಂಬಂಧಿಸಿದ ಉದ್ಯೋಗಗಳ ಸಾಫಲ್ಯಕ್ಕಾಗಿ ಮತ್ತು ಅವುಗಳಿಂದ ಪ್ರಾಪ್ತವಾಗುವ ಲಾಭವನ್ನು ಎಲ್ಲರೂ ಸೇರಿ ಸಮವಾಗಿ ಹಂಚಿಕೊಳ್ಳುವುದಕ್ಕಾಗಿ ಸಂಘಟಿತರಾಗುವುದೇ ಸಹಕಾರ"[೪] ಎಂದು ಮದ್ರಾಸ್ ಕೋ ಓಪರೇಟಿವ್ ಮ್ಯಾನ್ಯುವಲ್‌ನಲ್ಲಿ ಹೇಳಲಾಗಿದೆ.

ಮೇಲಿನ ವ್ಯಾಖ್ಯೆಗಳಲ್ಲಿ ಸಹಕಾರವನ್ನು ಒಂದು ಆರ್ಥಿಕ ಪರಿಕಲ್ಪನೆಯಾಗಿ ಪರಿಗಣಿಸಲಾಗಿದೆ. ಸಹಕಾರವನ್ನು ಬಂಡವಾಳವಾದ ಮತ್ತು ಸಮಾಜವಾದಗಳ ಸಮನ್ವಯ ಎಂದು ಪರಿಗಣಿಸಲಾಗಿದೆ. ಯಾಕೆಂದರೆ ಸಹಕಾರವು ಎರಡೂ ಪದ್ಧತಿಗಳ ಗುಣಗಳನ್ನು ಹೊಂದಿದೆ, ಎರಡೂ ಪದ್ಧತಿಗಳ ದೋಷಗಳನ್ನು ತೊಡೆದು ಹಾಕಲು ಪ್ರಯತ್ನಿಸುತ್ತದೆ[೫]. ಜೊತೆಗೆ ಅದು ಪ್ರಜಾಪ್ರಭುತ್ವದ ಲಕ್ಷಣಗಳನ್ನೂ ಒಳಗೊಂಡಿದೆ.

ಸಹಕಾರ ಚಳುವಳಿ ೧೯ನೆಯ ಶತಮಾನದ ಮಧ್ಯಭಾಗದಲ್ಲಿ ಇಂಗ್ಲೆಂಡಿನಲ್ಲಿ ಮಾರುಕಟ್ಟೆ ಆರ್ಥಿಕತೆ ಮತ್ತು ಕೈಗಾರಿಕಾ ಕ್ರಾಂತಿಗೆ ಶಾಂತಿಯುತ ಪ್ರತಿಕ್ರಿಯೆಯಾಗಿ ಆರಂಭಗೊಂಡಿತು[೬]. ಆರ್ಥಿಕ ಬದಲಾವಣೆಗಳಿಂದ ಉಂಟಾದ ಸಾಮಾಜಿಕ ಮತ್ತು ಆರ್ಥಿಕ ಅಸಮತೋಲನ ಇಂಗ್ಲೆಂಡಿನಲ್ಲಿ ಸಹಕಾರಿ ಚಳುವಳಿ ಹುಟ್ಟಿಕೊಳ್ಳುವುದಕ್ಕೆ ಕಾರಣವಾಯಿತು[೭]. ಹದಿನೆಂಟನೆಯ ಶತಮಾನದಲ್ಲಿ ಇಂಗ್ಲೆಂಡಿನಲ್ಲಾದ ಕೈಗಾರಿಕಾ ಕ್ರಾಂತಿಯ ಪರಿಣಾಮವಾಗಿ ಅಲ್ಲಿ ಬಂಡವಾಳಶಾಹಿ ವರ್ಗ ಮತ್ತು ಕಾರ್ಮಿಕ ವರ್ಗಗಳು ಹುಟ್ಟಿಕೊಂಡವು. ಬಂಡವಾಳಶಾಹಿ ವರ್ಗದ ಉದಯ ಕಾರ್ಮಿಕರ ಶೋಷಣೆಗೆ ಕಾರಣವಾಯಿತು. ಕಾರ್ಮಿಕರ ಶೋಷಣೆಯನ್ನು ತಪ್ಪಿಸಲು ಮತ್ತು ಅವರ ಸ್ಥಿತಿಗತಿಗಳನ್ನು ಸುಧಾರಿಸಲು ಇಂಗ್ಲೆಂಡಿನ ಕೆಲವು ಉದಾರವಾದಿಗಳು ಪ್ರಯತ್ನಗಳನ್ನು ಮಾಡಿದರು. ಸಹಕಾರ ತತ್ವಗಳನ್ನು ಅನುಸರಿಸಿ ಕಾರ್ಮಿಕರ ಸುಧಾರಣೆಗೆ ಪ್ರಯತ್ನಿಸಿದವರಲ್ಲಿ ರಾಬರ್ಟ್ ಓವನ್ ಪ್ರಮುಖನಾಗಿದ್ದಾನೆ. ಆದರೆ ಆತನ ಸಹಕಾರಿ ಪ್ರಯೋಗಗಳು ನಿರೀಕ್ಷಿತ ಯಶಸ್ಸು ಗಳಿಸಲಿಲ್ಲ[೮].

ಸಹಕಾರಿ ಆಂದೋಲನಕ್ಕೆ ನಿರ್ಧಿಷ್ಟ ನೀತಿ ನಿಯಮಗಳನ್ನು ಹಾಕಿ ಕೊಟ್ಟ ಶ್ರೇಯಸ್ಸು ರಾಕ್‌ಡೇಲ್ ಪಯೋನಿಯರ್ಸ್‌ಗೆ ಸಲ್ಲುತ್ತದೆ[೯]. ರಾಕ್‌ಡೇಲ್ ಪಯೋನಿಯರ್ಸ್ ರೂಪಿಸಿದ ಕೆಲತತ್ವಗಳು ಸಹಕಾರಿ ತತ್ವಗಳಾಗಿ ಪ್ರಪಂಚದಾದ್ಯಂತ ಸ್ವೀಕರಿಸಲ್ಪಟ್ಟಿವೆ. ರಾಕ್‌ಡೇಲ್ ಸಹಕಾರ ಪದ್ಧತಿ ಮುಖ್ಯವಾಗಿ ಗ್ರಾಹಕ ಸಂಘಗಳಿಗೆ ಸಂಬಂಧಿಸಿದ ಸಹಕಾರ ಪದ್ಧತಿ. ಹೀಗೆ ಗ್ರಾಹಕ ಸಹಕಾರ ಚಳುವಳಿ ಮೊದಲು ಇಂಗ್ಲೆಂಡಿನಲ್ಲಿ ಆರಂಭಗೊಂಡಿದ್ದರಿಂದ ಇಂಗ್ಲೆಂಡನ್ನು ಗ್ರಾಹಕರ ಸಹಕಾರ ಚಳುವಳಿಯ ಜನ್ಮಭೂಮಿ ಎಂದು ಕರೆಯಲಾಗುತ್ತದೆ[೧೦].

ಸಹಕಾರಿ ಕ್ರೆಡಿಟ್ ಚಳುವಳಿ (Co-operative Credit Movement) ಮತ್ತು ವ್ಯಾಪಾರಿಗಳಿಗೆ ಸಂಬಂಧಿಸಿದ ಸಹಕಾರ ಚಳುವಳಿ (Schulze Detilizch Movement) ಆರಂಭವಾದುದು ಜರ್ಮನಿಯಲ್ಲಿ[೧೧]. ಹೀಗೆ ಯುರೋಪಿನ ದೇಶಗಳಲ್ಲಿ ಹುಟ್ಟಿಕೊಂಡ ಸಹಕಾರ ಚಳುವಳಿ ಮುಂದೆ ಇತರ ದೇಶಗಳಿಗೂ ಪಸರಿಸಿತು.

ಇಂಗ್ಲೆಂಡಿನ ವಸಾಹತಾಗಿದ್ದ ಭಾರತದಲ್ಲಿ ಸಹಕಾರಿ ಪದ್ಧತಿ ಪ್ರಾಚೀನ ಕಾಲದಿಂದಲೂ ಪ್ರಚಲಿತದಲ್ಲಿದ್ದರೂ, ಇಲ್ಲಿ ವ್ಯವಸ್ಥಿತ ಸಹಕಾರ ಚಳುವಳಿ ಆರಂಭವಾದುದು ೨೦ನೆಯ ಶತಮಾನದ ಆದಿಭಾಗದಲ್ಲಿ. ೧೯೦೪ರಲ್ಲಿ ಲಾರ್ಡ್ ಕರ್ಜನ್ ಜಾರಿಗೆ ತಂದ "ಸಹಕಾರಿ ಕ್ರೆಡಿಟ್ ಸೊಸೈಟಿಗಳ ಕಾಯಿದೆ" ಆಧುನಿಕ ಭಾರತದಲ್ಲಿ ಸಹಕಾರ ಚಳುವಳಿ ಆರಂಭಗೊಳ್ಳಲು ಕಾರಣವಾಯಿತು. ಭಾರತದ ಆಧುನಿಕ ಸಹಕಾರ ಪದ್ಧತಿ ದೇಶದ ರೈತರು ಪರಕೀಯ ಆಳ್ವಿಕೆ ಹಾಗೂ ಲೇವಾದೇವಿದಾರರ ಶೋಷಣೆಗೆ ಒಳಗಾಗಿ ಕಂಗೆಟ್ಟು ಪ್ರತಿಭಟಿಸಿದಾಗ ಎಚ್ಚೆತ್ತ ಬ್ರಿಟಿಷ್ ಸರಕಾರ ಬಡರೈತರಿಗೆ ಕೃಷಿ ಸಾಲವನ್ನು ಕಡಿಮೆ ಬಡ್ಡಿದರದಲ್ಲಿ ಒದಗಿಸುವ ಉದ್ದೇಶದಿಂದ ಜಾರಿಗೆ ತಂದ ವ್ಯವಸ್ಥೆ.

"ಕರ್ನಾಟಕವನ್ನು ಭಾರತೀಯ ಸಹಕಾರ ಆಂದೋಲನದ ತೊಟ್ಟಿಲು"[೧೨] ಎಂದು ಕರೆಯಲಾಗಿದೆ. ದೇಶದಲ್ಲೇ ಪ್ರಥಮ ಕೃಷಿ ಪತ್ತಿನ ಸಹಕಾರ ಸಂಘ ಆರಂಭವಾದುದು ಬಾಂಬೆ ಪ್ರೆಸಿಡೆನ್ಸಿಯ ಭಾಗವಾಗಿದ್ದ ಅಂದಿನ ಧಾರವಾಡ ಜಿಲ್ಲೆಯ ಗದಗ ತಾಲೂಕಿನ ಕಣಗಿನಹಾಳದಲ್ಲಿ (ಗದಗ ಈಗ ಪ್ರತ್ಯೇಕ ಜಿಲ್ಲೆಯಾಗಿದೆ). ಮದ್ರಾಸ್ ಪ್ರಾಂತ್ಯದ ಭಾಗವಾಗಿದ್ದ ಅಂದಿನ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯು ಕೂಡಾ ಸಹಕಾರ ಚಳುವಳಿಯಲ್ಲಿ ಪ್ರಮುಖ ಪಾತ್ರ ವಹಿಸಿದೆ.

## ೧.೧ ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವಿಧಾನಗಳು:

ದೇಶದ ಸಹಕಾರ ಚಳುವಳಿಯ ಇತಿಹಾಸದಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಗೆ ವಿಶಿಷ್ಟ ಸ್ಥಾನವಿದೆ. ಮದ್ರಾಸ್ ಪ್ರೆಸಿಡೆನ್ಸಿಯ ಭಾಗವಾಗಿದ್ದ ಅಂದಿನ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರಿನಲ್ಲಿ ಸಹಕಾರಿ ಚಳುವಳಿಯನ್ನು ಆರಂಭಿಸಿದವರು ಮೊಳಹಳ್ಳಿ ಶಿವರಾಯರು ಮತ್ತು ಅವರ ಸಹವರ್ತಿಗಳು. ಮೊಳಹಳ್ಳಿ ಶಿವರಾಯರು ಮತ್ತು ಅವರ ಸಹವರ್ತಿಗಳು ಜಿಲ್ಲೆಯಲ್ಲಿ ಹುಟ್ಟುಹಾಕಿದ ಸಹಕಾರ ವ್ಯವಸ್ಥೆಯು ಏಳುಬೀಳುಗಳೊಂದಿಗೆ ಶತಮಾನಗಳ ಕಾಲ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಮುಂದುವರಿಯುತ್ತಿದೆ. ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣಗಳು ಸಹಕಾರಿ ವ್ಯವಸ್ಥೆಗೆ ಸವಾಲು ಒಡ್ಡುತ್ತಿರುವ ಪ್ರಸ್ತುತ ಕಾಲಘಟ್ಟದಲ್ಲಿ ಸಹಕಾರ ಚಳುವಳಿ ತನ್ನ ಮೂಲ ಉದ್ದೇಶವನ್ನು ಈಡೇರಿಸಲು ಅಸಮರ್ಥವಾಗಿದೆಯೇ? ಎಂಬ ಸಂಶಯ ಕಾಡುತ್ತಿದೆ. ಈ ಹಿನ್ನೆಯಲ್ಲಿ ಸಹಕಾರ ಚಳುವಳಿ ಜಿಲ್ಲೆಯಲ್ಲಿ ಪ್ರಾರಂಭಿಸಲ್ಪಟ್ಟು ಪಸರಿಸಿದ ರೀತಿ, ಅದರ ಇತಿಹಾಸ, ಸಹಕಾರ

ಚಳುವಳಿಯ ಮೂಲಕ ದಾಖಲಿಸಲ್ಪಟ್ಟ ಸಾಧನೆಗಳು ಮತ್ತು ವೈಫಲ್ಯಗಳನ್ನು ಅಧ್ಯಯನ ನಡೆಸಿ ದಾಖಲಿಸುವುದು ಮತ್ತು ಸಹಕಾರ ಚಳುವಳಿಯ ವೈಫಲ್ಯಕ್ಕೆ ಕಾರಣವಾದ ಸಮಸ್ಯೆಗಳಿಗೆ ಪರಿಹಾರೋಪಯಗಳನ್ನು ಕಂಡು ಹಿಡಿಯುವುದು ಈ ಸಂಶೋಧನೆಯ ಉದ್ದೇಶ.

ಸಹಕಾರ ಚಳುವಳಿಯ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಆರ್ಥಿಕ ಜೀವನದಲ್ಲಿ ತನ್ನದೇ ಆದ ಪರಿಣಾಮ ಬೀರಿದೆ. ಅದರಿಂದಾಗಿ ಸಾಕಷ್ಟು ಸಾಮಾಜಿಕ ಪ್ರಯೋಜನಗಳಾಗಿವೆ. ಜಿಲ್ಲೆಯ ಗ್ರಾಮೀಣಾಭಿವೃದ್ಧಿಯಲ್ಲಿಯೂ ಕೂಡಾ ಅದು ಮಹತ್ವದ ಪಾತ್ರವಹಿಸಿದೆ. ದಕ್ಷಿಣ ಕನ್ನಡ ಜಿಲ್ಲೆಯ ಸಹಕಾರ ವ್ಯವಸ್ಥೆಯ ಬಗ್ಗೆ ಸಾಕಷ್ಟು ಅಧ್ಯಯನಗಳು ನಡೆದಿದ್ದರೂ, ಐತಿಹಾಸಿಕ ದೃಷ್ಟಿಕೋನದಿಂದ ಸಹಕಾರ ಚಳುವಳಿಯ ಬಗ್ಗೆ ನಡೆದಿರುವ ಅಧ್ಯಯನಗಳು ಕಡಿಮೆ. ಈ ಕಾರಣಕ್ಕಾಗಿ ಈ ಸಂಶೋಧನೆಯನ್ನು ಕೈಗೆತ್ತಿಕೊಳ್ಳಲಾಗಿದೆ. ರಾಷ್ಟ್ರವ್ಯಾಪಿಯಾಗಿ ಹಬ್ಬಿದ ಸಹಕಾರ ಚಳುವಳಿಯ ಇತಿಹಾಸವನ್ನು ಸ್ಥಳೀಯ ನೆಲೆಯಿಂದ ಅಧ್ಯಯನ ಮಾಡುವ ಪ್ರಯತ್ನ ಇದು.

## ೧.೨ ಆಕರ ಸಾಮಾಗ್ರಿಗಳು:

ಭಾರತದ ಸಹಕಾರ ಚಳುವಳಿಯ ಇತಿಹಾಸದ ಮೇಲೆ ಬೆಳಕು ಚೆಲ್ಲುವ ಹಲವು ಕೃತಿಗಳಿದ್ದು ಅವು ದೇಶದಲ್ಲಿ ಸಹಕಾರ ಚಳುವಳಿಯ ಬೆಳವಣಿಗೆಯನ್ನು ತಿಳಿದುಕೊಳ್ಳಲು ಉಪಯುಕ್ತವಾಗಿವೆ. ಹೆನ್ರಿ ಡಬ್ಲ್ಯೂ. ವೋಲ್ಫ್‌ರವರ "ಕೋ–ಓಪರೇಶನ್ ಇನ್ ಇಂಡಿಯಾ" ಕೆ. ಆರ್. ಕುಲಕರ್ಣಿಯವರ "ಥಿಯರಿ ಆ್ಯಂಡ್ ಪ್ರಾಕ್ಟೀಸ್ ಆಫ್ ಕೋ–ಓಪರೇಶನ್ ಇನ್ ಇಂಡಿಯಾ ಆ್ಯಂಡ್ ಆಬ್ರಾಡ್", ಆರ್.ಬಿ. ತ್ಯಾಗಿಯವರ "ದ ರೀಸೆಂಟ್ ಟ್ರೆಂಡ್ಸ್ ಇನ್ ಕೋ–ಓಪರೇಟಿವ್ ಮೂವ್‌ಮೆಂಟ್", ಬಿ.ಎಸ್. ಮಾಥುರ್‌ರವರ "ಕೋ–ಓಪರೇಶನ್ ಇನ್ ಇಂಡಿಯಾ" ಮುಂತಾದ ಕೃತಿಗಳು ಭಾರತದಲ್ಲಿ ಸಹಕಾರ ಚಳುವಳಿಯ ಬೆಳವಣಿಗೆಯನ್ನು ತಿಳಿಯಲು ಹೆಚ್ಚು ಉಪಯುಕ್ತವಾಗಿವೆ. ಸೂರ್ಯನಾಥ ಕಾಮತ್‌ರವರು ಸಂಪಾದಿಸಿರುವ "ಕರ್ನಾಟಕ ಸ್ಟೇಟ್ ಗಝೆಟಿಯರ್", ಹೆಚ್. ಚಿತ್ತರಂಜನ್ ಸಂಪಾದಿಸಿರುವ "ಎ ಹ್ಯಾಂಡ್ ಬುಕ್ ಆಫ್ ಕರ್ನಾಟಕ" ಬಿ.ಜಿ. ಬಣಕಾರರವರ "ಸಹಕಾರ ಚಿಂತನ" ಮುಂತಾದ ಕೃತಿಗಳು ಕರ್ನಾಟಕದ ಸಹಕಾರ ಚಳುವಳಿಯ ಇತಿಹಾಸದ ಬಗ್ಗೆ ಮಾಹಿತಿ ನೀಡುತ್ತವೆ.

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಹಕಾರ ಚಳುವಳಿಯ ಬೆಳವಣಿಗೆಯ ಬಗ್ಗೆ ಅಭಿಶಂಕರ್.ಕೆ ಸಂಪಾದಿಸಿರುವ "ಸೌತ್ ಕೆನರಾ ಡಿಸ್ಟ್ರಿಕ್ಟ್ ಗಝೆಟಿಯರ್", "ಕನ್ನಡ ಸಹಕಾರಿ" ಮತ್ತು "ದಕ್ಷಿಣ ಕನ್ನಡ ಸಹಕಾರಿ ಪತ್ರಿಕೆ"ಗಳು "ಶತಕಾಭರಣ", "ಚೈತನ್ಯ", "ಅಮೃತ ವಿಭವ" ಮುಂತಾದ

ಸ್ಮರಣ ಸಂಚಿಕೆಗಳು ಬೆಳಕು ಚೆಲ್ಲುತ್ತವೆ. ಲಭ್ಯವಿರುವ ಈ ಎಲ್ಲಾ ಮಾಹಿತಿಗಳನ್ನು ಬಳಸಿಕೊಂಡು ನಾನು ನನ್ನ ಸಂಶೋಧನಾ ಪ್ರಬಂಧವನ್ನು ರಚಿಸಿರುತ್ತೇನೆ.

## ೧.೩. ಅಧ್ಯಯನದ ವಿನ್ಯಾಸ:

ಈ ಸಂಶೋಧನಾ ಪ್ರಬಂಧದಲ್ಲಿ ಒಟ್ಟು ಏಳು ಅಧ್ಯಾಯಗಳಿವೆ. ಮೊದಲ ಅಧ್ಯಾಯದಲ್ಲಿ ಸಹಕಾರ ಅರ್ಥ ಮತ್ತು ವ್ಯಾಖ್ಯೆ ಇಂಗ್ಲೆಂಡಿನಲ್ಲಿ ಸಹಕಾರ ಚಳುವಳಿಯ ಹುಟ್ಟು ಮತ್ತು ಭಾರತದಲ್ಲಿ ಸಹಕಾರ ಚಳುವಳಿ ಆರಂಭವಾದ ರೀತಿಯ ಬಗ್ಗೆ ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಜೊತೆಗೆ ಅಧ್ಯಯನದ ಉದ್ದೇಶ, ಅದರ ಸ್ವರೂಪ ಮತ್ತು ವಿಧಾನಗಳ ಬಗ್ಗೆ ತಿಳಿಸಲಾಗಿದೆ. ಪ್ರಾಚೀನ ಭಾರತದಲ್ಲಿದ್ದ ಸಹಕಾರ ಪದ್ಧತಿ, ಆಧುನಿಕ ಭಾರತದಲ್ಲಿ ಸಹಕಾರ ಚಳುವಳಿಯ ಆರಂಭವಾದ ಹಿನ್ನೆಲೆ, ಆಧುನಿಕ ಭಾರತದಲ್ಲಿ ಸಹಕಾರಿ ಪದ್ಧತಿಯ ಅನುಷ್ಠಾನಕ್ಕಾಗಿ ನಡೆದ ಆರಂಭಿಕ ಪ್ರಯತ್ನಗಳು, ಬ್ರಿಟೀಷ್ ಸರಕಾರ ಜಾರಿಗೆ ತಂದ ೧೯೦೪ ಮತ್ತು ೧೯೧೨ರ ಸಹಕಾರಿ ಕಾಯಿದೆಗಳು ಮತ್ತು ಅವುಗಳ ಮುಖ್ಯಾಂಶಗಳು, ಭಾರತದಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿ ಮತ್ತು ನಂತರದಲ್ಲಿ ಸಹಕಾರ ಚಳುವಳಿಯ ಬೆಳವಣಿಗೆ ಮತ್ತು ಕರ್ನಾಟಕದಲ್ಲಿ ಸಹಕಾರ ಚಳುವಳಿ ಬೆಳೆದು ಬಂದ ರೀತಿಯನ್ನು ಎರಡನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅಸ್ಥಿತ್ವದಲ್ಲಿದ್ದ ಸ್ಥಳೀಯ ಸಹಕಾರ ಪದ್ಧತಿ, ಜಿಲ್ಲೆಯಲ್ಲಿ ಆಧುನಿಕ ಸಹಕಾರ ಚಳುವಳಿ ಆರಂಭವಾದ ಹಿನ್ನೆಲೆ, ಸ್ವಾತಂತ್ರ್ಯ ಪೂರ್ವದಲ್ಲಿ ಸಹಕಾರ ಚಳುವಳಿ ಬೆಳೆದು ಬಂದ ರೀತಿ, ಸ್ವಾತಂತ್ರ್ಯಾ ನಂತರದ ಅವಧಿಯಲ್ಲಿ ಸಹಕಾರ ಚಳುವಳಿ ಸಾಗಿ ಬಂದ ರೀತಿ, ಸಹಕಾರ ಚಳುವಳಿಯ ಮೇಲೆ ಸ್ವಾತಂತ್ರ್ಯ ಹೋರಾಟದ ಪ್ರಭಾವ ಮುಂತಾದ ಅಂಶಗಳನ್ನು ಕುರಿತು ಅಧ್ಯಯನ ನಡೆಸಲಾಗಿದೆ. ದಕ್ಷಿಣ ಕನ್ನಡದ ಕೆಲವು ಪ್ರಮುಖ ಐತಿಹಾಸಿಕ ಸಹಕಾರ ಸಂಘಗಳು, ಇತ್ತೀಚಿನ ದಶಕಗಳಲ್ಲಿ ಆರಂಭಗೊಂಡ ಕೆಲವು ಪ್ರಮುಖ ಸಹಕಾರ ಸಂಘಗಳು ಮತ್ತು ಅವುಗಳ ಚಟುವಟಿಕೆಗಳ ಕುರಿತು ನಾಲ್ಕನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಐದನೆಯ ಅಧ್ಯಾಯ ಜಿಲ್ಲೆಯ ಹಿರಿಯ ಸಹಕಾರಿ ನೇತಾರರಾದ ಮೊಳಹಳ್ಳಿ ಶಿವರಾಯರು ಮತ್ತು ಇತರ ಪ್ರಮುಖ ಸಹಕಾರ ನೇತಾರರು ಹಾಗೂ ಮಹಿಳಾ ಸಹಕಾರಿಗಳು ಹಾಗೂ ಸಹಕಾರಿ ರಂಗದಲ್ಲಿ ಅವರ ಪಾತ್ರದ ಕುರಿತು ವಿವರಣೆ ನೀಡುತ್ತದೆ. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆ ಸಹಕಾರಿ ರಂಗ ಜಿಲ್ಲೆಯ ಶೈಕ್ಷಣಿಕ ಮತ್ತು ಸಾಮಾಜಿಕ ಪರಿವರ್ತನೆಯಲ್ಲಿ ವಹಿಸಿದ ಪಾತ್ರ ಜಿಲ್ಲೆಯ ಆರ್ಥಿಕ

ಅಭಿವೃದ್ಧಿಗೆ ಮತ್ತು ಗ್ರಾಮೀಣಾಭಿವೃದ್ಧಿಗೆ ಅದು ನೀಡಿರುವ ಕೊಡುಗೆಗಳ ಬಗ್ಗೆ ಆರನೆಯ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

## ೧.೪. ದಕ್ಷಿಣ ಕನ್ನಡದ ಸಹಕಾರ ಚಳುವಳಿಯ ಅಧ್ಯಯನದ ಅಗತ್ಯತೆ:

ಸಹಕಾರ ಚಳುವಳಿ ಪ್ರಸ್ತುತ ಜಗತ್ತಿಗೆ ಅತೀ ಅಗತ್ಯವಾಗಿ ಬೇಕಾದ ಚಳುವಳಿಯಾಗಿದೆ. ಅರ್ಥ ವ್ಯವಸ್ಥೆಯು ಜಾಗತೀಕರಣ, ಉದಾರೀಕರಣ, ಮತ್ತು ಖಾಸಗೀಕರಣದ ಕಡೆ ದಾಪುಗಾಲು ಹಾಕುತ್ತಿರುವ ಈ ಕಾಲಘಟ್ಟದಲ್ಲಿ ಗ್ರಾಮೀಣ ಅಭಿವೃದ್ಧಿಗೆ ಸಹಕಾರವೊಂದೇ ಅತ್ಯುತ್ತಮ ಮಾರ್ಗ. ಜಗತ್ತಿನ ವಿವಿಧ ರಾಷ್ಟ್ರಗಳು ಆರ್ಥಿಕ ಕುಸಿತದ ಬಿಸಿ ಅನುಭವಿಸುತ್ತಿದ್ದರೂ ಜಿಲ್ಲೆಯ ಅರ್ಥವ್ಯವಸ್ಥೆ ಸುದೃಢವಾಗಿರುವುದಕ್ಕೆ ಇಲ್ಲಿಯ ಸಹಕಾರಿ ರಂಗ ಬಲಿಷ್ಠವಾಗಿರುವುದೇ ಕಾರಣ. ಜಿಲ್ಲೆಯಲ್ಲಿ ಪ್ರಸ್ತುತ ೮೦೧ ಸಹಕಾರ ಸಂಘಗಳಿದ್ದು ಅವುಗಳಲ್ಲಿ ೭೫೪ ಸಹಕಾರ ಸಂಘಗಳು ಲಾಭದಲ್ಲಿ ನಡೆಯುತ್ತಿರುವುದು ಜಿಲ್ಲೆಯ ಸಹಕಾರಿ ರಂಗ ಉತ್ತಮವಾಗಿ ಬೆಳೆದಿರುವುದನ್ನು ಸೂಚಿಸುತ್ತದೆ[೧೩]. ಜಿಲ್ಲೆಯ ಸಹಕಾರ ಸಂಘಗಳು ವಾಣಿಜ್ಯ ಬ್ಯಾಂಕುಗಳೊಂದಿಗೆ ಆರೋಗ್ಯಕರ ಪೈಪೋಟಿಯ ಹಾದಿಯಲ್ಲಿ ಸಾಗುತ್ತಿವೆ. ಸಹಕಾರಿ ರಂಗವನ್ನು ಇನ್ನಷ್ಟು ಬಲಪಡಿಸುವ ನಿಟ್ಟಿನಲ್ಲಿ ಸಹಕಾರ ಚಳುವಳಿಯ ಇತಿಹಾಸವನ್ನು ಅಧ್ಯಯನ ಮಾಡುವುದು ಅತೀ ಅವಶ್ಯಕವಾಗಿದೆ. ಯಾಕೆಂದರೆ ಸಹಕಾರ ಚಳುವಳಿಯ ಇತಿಹಾಸದ ಅಧ್ಯಯನ ಜಿಲ್ಲೆಯ ಸಹಕಾರಿ ರಂಗ ಏನು ಸಾಧಿಸಿದೆ, ಎಲ್ಲಿ ಎಡವಿದೆ ಮತ್ತು ಏನನ್ನು ಸಾಧಿಸಲು ಉಳಿದಿದೆ ಎಂಬ ಅರಿವನ್ನು ನಿಡುತ್ತದೆ. ಮುಂದಿನ ಪೀಳಿಗೆಗೆ ಜಿಲ್ಲೆಯ ಸಹಕಾರಿ ರಂಗ ಬೆಳೆದು ಬಂದ ರೀತಿಯನ್ನು ತಿಳಿದುಕೊಳ್ಳಲು ಅನುಕೂಲವಾಗುತ್ತದೆ.

## ಕೊನೆ ಟಿಪ್ಪಣಿ

೧. ಕಾಮೋಜಿರಾವ್ ಪಿ.ಕೆ.

ಸಹಕಾರ ದರ್ಶನ, ಪ್ರ. ಮು. ೧೯೬೪ ದ್ವಿ. ಮು. ೧೯೮೨ ಪು.ಸಂ. ೩

೨. ಸಿನ್ಹಾ. ಬಿ.ಪಿ.

ಕೋ. ಓಪರೇಶನ್; ಇನ್‌ಸ್ಟ್ರುಮೆಂಟ್ ಫಾರ್ ಸೋಷಿಯೋ ಇಕಾನಮಿಕ್ ಜಸ್ಟೀಸ್. ೧೯೯೨ ಪು.ಸಂ.೧

೩. ಡಾ. ಬಿ.ಎಸ್. ಮಾಥುರ್

ಕೋ. ಓಪರೇಶನ್ ಇನ್ ಇಂಡಿಯಾ, ೧೯೭೭ ಪು. ಸಂ. ೮

೪. ಕಾಮೋಜಿರಾವ್ ಪಿ.ಕೆ.

ಸಹಕಾರ ದರ್ಶನ, ಪ್ರ. ಮು ೧೯೯೪, ದ್ವಿಮು. ೧೯೮೨ ಪು.ಸಂ. ೨

೫. ಶಾರದ ವಿ.

ಥಿಯಂ ಆಫ್ ಕೋ–ಓಪರೇಶನ್, ೧೯೮೬. ಪು.ಸಂ. ೫೮

೬. ಡಾ. ಬಿ.ಎಸ್. ಮಾಥುರ್

ಕೋ– ಓಪರೇಶನ್ ಇನ್ ಇಂಡಿಯಾ, ೧೯೭೭ ಪು. ಸಂ. ೩

೭. ಸೂರ್ಯನಾಥ ಕಾಮತ್ (ಪು.ಸಂ)

ಕರ್ನಾಟಕ ಸ್ಟೇಟ್ ಗಝೆಟಿಯರ್, ೧೯೮೨ ಪು.ಸಂ. ೯೫೬

೮. ಕಾಮೋಜಿರಾವ್ ಪಿ.ಕೆ.

ಸಹಕಾರ ದರ್ಶನ, ಪ್ರ. ಮು. ೧೯೬೪ ದ್ವಿ. ಮು. ೧೯೮೨

ಪು.ಸಂ. ೨೨, ೨೩

೯. ಕಾಮೋಜಿರಾವ್ ಪಿ.ಕೆ.

ಸಹಕಾರ ದರ್ಶನ, ಪ್ರ. ಮು. ೧೯೬೪ ದ್ವಿ. ಮು. ೧೯೮೨ ಪು.ಸಂ.೨೪

೧೦. ದಾಮನ್ ಪ್ರಕಾಶ್

ಕೋ– ಓಪರೇಟಿವ್ ಡೆಮಾಕ್ರಸಿ ವೈಸ್–ಆ–ವೈಸಾ (vis-a-vis) ಮೆಂಬರ್ಸ್ ಎಜುಕೇಶನ್, ಕೋ–ಓಪರೇಟಿವ್ ಟೈಮ್ಸ್, ೧೯೮೮ ಪು.ಸಂ.೪೪.

೧೧. ದಾಮನ್ ಪ್ರಕಾಶ್

ಕೋ– ಓಪರೇಟಿವ್ ಡೆಮಾಕ್ರಸಿ ವೈಸ್–ಆ–ವೈಸಾ (vis-a-vis) ಮೆಂಬರ್ಸ್ ಎಜುಕೇಶನ್, ಕೋ–ಓಪರೇಟಿವ್ ಟೈಮ್ಸ್, ೧೯೮೮ ಪು.ಸಂ. ೪೪

೧೨. ಡಾ.ಎಚ್.ಆರ್. ಕೃಷ್ಣಯ್ಯ ಗೌಡ

ಗ್ರಾಮೀಣಾಭಿವೃದ್ಧಿ, ೨೦೦೭ ಪು.ಸಂ. ೧೨೯

೧೩. ಈ ಮಾಹಿತಿಯನ್ನು ಸಹಕಾರಿ ಸಂಘಗಳ ಡೆಪ್ಯೂಟಿ ರಿಜಿಸ್ಟ್ರಾರ್‌ರ ಕಛೇರಿಯಿಂದ ಸಂಗ್ರಹಿಸಲಾಗಿದೆ.

********

# ಅಧ್ಯಾಯ ೨

# ಭಾರತದಲ್ಲಿ ಸಹಕಾರ ಚಳುವಳಿಯ ಹುಟ್ಟು ಮತ್ತು ಬೆಳವಣಿಗೆ

## ಅಧ್ಯಾಯ ೨

## ಭಾರತದಲ್ಲಿ ಸಹಕಾರ ಚಳುವಳಿಯ ಹುಟ್ಟು ಮತ್ತು ಬೆಳವಣಿಗೆ

ಸಹಕಾರ ಪದ್ಧತಿ ಪ್ರಾಚೀನ ಕಾಲದಿಂದಲೂ ಭಾರತದ ಜನಜೀವನದಲ್ಲಿ ಹಾಸುಹೊಕ್ಕಾಗಿರುವುದು ಕಂಡುಬಂದರೂ, ಕಾನೂನಿನ ಚೌಕಟ್ಟಿನೊಳಗೆ ಇಲ್ಲಿ ಸಹಕಾರ ಆಂದೋಲನ ಆರಂಭವಾದುದು ೨೦ನೆಯ ಶತನಮಾನದ ಆದಿಭಾಗದಲ್ಲಿ. ಪಾಶ್ಚಿಮಾತ್ಯ ಸಹಕಾರಿ ತತ್ವಗಳನ್ನು ಅನುಸರಿಸಿ ಸಹಕಾರ ಸಂಘಗಳನ್ನು ಸ್ಥಾಪಿಸಿಕೊಳ್ಳುವ ಮೂಲಕ ಭಾರತದಲ್ಲಿ ಸಹಕಾರ ಆಂದೋಲನ ಆರಂಭವಾಗಲು ಬ್ರಿಟಿಷ್ ಸರಕಾರ ಭಾರತದಲ್ಲಿ ಜಾರಿಗೆ ತಂದ ಸಹಕಾರಿ ಕಾಯಿದೆಗಳು ಕಾರಣವಾದವು. ಆದರೆ ಸಾಂಪ್ರದಾಯಿಕ ಸಹಕಾರ ಪದ್ಧತಿ ಪ್ರಾಚೀನ ಕಾಲದಿಂದಲೇ ಭಾರತದಲ್ಲಿ ಅಸ್ತಿತ್ವದಲ್ಲಿತ್ತು.

### ೨.೧. ಪ್ರಾಚೀನ ಭಾರತದಲ್ಲಿ ಸಹಕಾರ ಪದ್ಧತಿ:

ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಸಾಮಾಜಿಕ ಕೆಲಸ ಕಾರ್ಯಗಳಲ್ಲಿ, ಆರ್ಥಿಕ ಚಟುವಟಿಕೆಗಳಲ್ಲಿ, ಧಾರ್ಮಿಕ ಸಮಾರಂಭಗಳಲ್ಲಿ ಸಹಕಾರ ಮಹತ್ವದ ಪಾತ್ರವಹಿಸಿರುವುದನ್ನು ಕಾಣಬಹುದು. ಪ್ರಾಚೀನ ಭಾರತದ ಅವಿಭಕ್ತ ಕುಟುಂಬ ವ್ಯವಸ್ಥೆ ಸಹಕಾರ ಪದ್ಧತಿಗೆ ಒಂದು ಉತ್ತಮ ಉದಾಹರಣೆ. ಹಳ್ಳಿಗಳಲ್ಲಿ ಅಸ್ತಿತ್ವದಲ್ಲಿದ್ದ ಪಂಚಾಯತ್‌ಗಳು ಸಹಕಾರದ ತಳಹದಿಯ ಮೇಲೆ ಕಾರ್ಯನಿರ್ವಹಿಸುತ್ತಿದ್ದವು[೧]. ಕ್ರಿ.ಪೂ. ೬ನೆಯ ಶತಮಾನದಲ್ಲಿ ಉತ್ತರ ಭಾರತದಲ್ಲಿ ಕೃಷಿಯಲ್ಲಿ ವಿಸ್ತರಣೆಯಾದಾಗ ಕೃಷಿ ಮತ್ತು ಕೃಷಿ ಸಂಬಂಧಿತ ಕೆಲಸಗಳು ಜನರ ಪರಸ್ಪರ ಸಹಕಾರದಿಂದ ನಡೆಸಲ್ಪಡುತ್ತಿದ್ದವು. ಕೃಷಿಗೆ ಬೇಕಾದ ನೀರಾವರಿ ವ್ಯವಸ್ಥೆಯನ್ನು ಒದಗಿಸಿಕೊಳ್ಳಲು ರೈತರೆಲ್ಲ ಒಟ್ಟು ಸೇರಿ ನಡೆಸುತ್ತಿದ್ದ "ಜ್ಯೊಂಟ್ ಇರಿಗೇಶನ್" ಮತ್ತು ಕೃಷಿ ಭೂಮಿಯಲ್ಲಿರುವ ಬೆಳೆಗಳನ್ನು ರಕ್ಷಿಸಲು ಮಾಡಿಕೊಳ್ಳುತ್ತಿದ್ದ "ಜ್ಯೊಂಟ್ ಫೆನ್‌ಸಿಂಗ್" ಪದ್ಧತಿಗಳು ಪ್ರಾಚೀನ ಭಾರತದಲ್ಲಿ ಸಹಕಾರ ಪದ್ಧತಿ ಅಸ್ತಿತ್ವದಲ್ಲಿತ್ತು ಎನ್ನುವುದಕ್ಕೆ ಸಾಕ್ಷಿ[೨].

ದಕ್ಷಿಣ ಭಾರತದಲ್ಲಿ ಮುಖ್ಯವಾಗಿ ಮದರಾಸು ಪ್ರಾಂತ್ಯದಲ್ಲಿ ಅಸ್ತಿತ್ವದಲ್ಲಿದ್ದ "ನಿಧಿ" ಎಂಬ ಸಂಸ್ಥೆಗಳು ವಿವಿಧ ಕಸುಬಿನವರು ತಮಗೆ ಬೇಕಾದ ಬಂಡವಾಳವನ್ನು ಸಾಮೂಹಿಕವಾಗಿ ಕೂಡಿಸಿಕೊಳ್ಳಲು ಮಾಡಿಕೊಂಡಿದ್ದ ವ್ಯವಸ್ಥೆ. ಇವು ಸಹಕಾರ ತತ್ವದ ತಳಹದಿಯ ಮೇಲೆ ಕಾರ್ಯ ನಿರ್ವಹಿಸುತ್ತಿದ್ದವು. "ಚಿಟ್‌ಫಂಡ್"ಗಳು ಕೂಡಾ ಸಹಕಾರ ಪದ್ಧತಿಗೆ ಉತ್ತಮ ಉದಾಹರಣೆ.

ಪ್ರಾಚೀನ ಭಾರತದಲ್ಲಿ ಸಹಕಾರ ಮಾನವನ ಜೀವನದ ಅವಿಭಾಜ್ಯ ಅಂಗವಾಗಿತ್ತು. ಆಗ ಸಹಕಾರ ಪದ್ಧತಿ ಒಂದು ಆರ್ಥಿಕ ಪರಿಕಲ್ಪನೆಯಾಗಿರದೆ ಒಂದು ಜೀವನ ಮಾರ್ಗವಾಗಿತ್ತು.

## ೨.೨. ಆಧುನಿಕ ಭಾರತದಲ್ಲಿ ಸಹಕಾರ ಚಳುವಳಿಯ ಆರಂಭ

ಸಹಕಾರ ಒಂದು ಆರ್ಥಿಕ ಪರಿಕಲ್ಪನೆಯಾಗಿ ಮತ್ತು ಸಹಕಾರಿ ಸಂಘಗಳ ಸ್ಥಾಪನೆಯ ಮೂಲಕ ಆಧುನಿಕ ಸಹಕಾರ ಪದ್ಧತಿ ಭಾರತದಲ್ಲಿ ಆರಂಭವಾದುದು ೨೦ನೆಯ ಶತಮಾನದ ಆದಿಭಾಗದಲ್ಲಿ. ಲಾರ್ಡ್ ಕರ್ಜನ್ ೧೯೦೪ರಲ್ಲಿ ಜಾರಿಗೆ ತಂದ "ಸಹಕಾರಿ ಕ್ರೆಡಿಟ್ ಸೊಸ್ಯಾಟಿಗಳ ಕಾಯಿದೆ" ಭಾರತದಲ್ಲಿ ಸಹಕಾರಿ ಆಂದೋಲನ ಅಧಿಕೃತವಾಗಿ ಆರಂಭಗೊಳ್ಳಲು ಕಾರಣವಾಯಿತು.

**ಸಹಕಾರ ಚಳುವಳಿ ಆರಂಭವಾದ ಹಿನ್ನೆಲೆ:**

ಇಂಗ್ಲೆಂಡಿನಲ್ಲಿ ಆರಂಭಗೊಂಡ ಕೈಗಾರಿಕಾ ಕ್ರಾಂತಿಯ ನೇರ ಪರಿಣಾಮವಾಗಿ ಭಾರತದಲ್ಲಿ ಕಾಣಿಸಿಕೊಂಡ ಅವ್ಯವಸ್ಥೆ, ಅಶಾಂತಿ ಮತ್ತು ಅಸಮಾಧಾನಗಳು ಭಾರತದಲ್ಲಿ ವ್ಯವಸ್ಥಿತ ಸಹಕಾರ ಚಳುವಳಿ ಆರಂಭಗೊಳ್ಳಲು ಕಾರಣವಾಯಿತು[೩]. ಕೃಷಿಯೇ ಪ್ರಧಾನ ಕಸುಬಾಗಿದ್ದ ಭಾರತದಲ್ಲಿ ಬ್ರಿಟಿಷ್ ಆಳ್ವಿಕೆ ಮತ್ತು ಬ್ರಿಟಿಷ್ ಕಂದಾಯ ನೀತಿಗಳು ದೇಶದ ಆರ್ಥಿಕತೆಗೆ ಬಲವಾದ ಹೊಡೆತ ನೀಡಿದ್ದವು. ಸಣ್ಣ ಹಿಡುವಳಿಗಳು, ಅಸಮರ್ಪಕ ನೀರಾವರಿ ಸೌಲಭ್ಯಗಳು, ಬೆಳೆ ನಾಶ ಮುಂತಾದ ಕಾರಣಗಳಿಂದ ಭಾರತದ ರೈತನ ಆದಾಯ ಅತೀ ಕಡಿಮೆಯಾಗಿತ್ತು. ಇದರಿಂದಾಗಿ ಹೆಚ್ಚಿನ ರೈತರು ಸಾಲದ ಹೊರೆಯಲ್ಲಿ ನಲುಗಿ ಹೋಗಿದ್ದರು. ಬ್ರಿಟನ್ನಿನಲ್ಲಾದ ಕೈಗಾರಿಕಾ ಕ್ರಾಂತಿಯ ಪರಿಣಾಮವಾಗಿ ಭಾರತದ ಗುಡಿ ಕೈಗಾರಿಕೆಗಳ ನಾಶ ಮತ್ತು ಕೃಷಿ ಕ್ಷೇತ್ರದ ಮೇಲೆ ಹೆಚ್ಚಿದ ಒತ್ತಡ ಹಳ್ಳಿಗಳಿಂದ ಪಟ್ಟಣಗಳಿಗೆ ಸ್ಥಿತಿವಂತರ ವಲಸೆ ಮತ್ತು ಪಟ್ಟಣಗಳಲ್ಲಿ ಹೊಸ ಕ್ಷೇತ್ರಗಳಲ್ಲಿ ಹಣದ ಹೂಡಿಕೆ, ಮಧ್ಯವರ್ತಿಗಳ ಹಾವಳಿ, ವಸ್ತುರೂಪದ ಬದಲು ಹಣದ ರೂಪದಲ್ಲಿ ಭೂಕಂದಾಯ ಕೊಡಬೇಕಾದ ಅನಿವಾರ್ಯತೆಯಿಂದಾಗಿ ಲೇವಾದೇವಿದಾರರ ಕೈಗೆ ಸಿಲುಕಿ ಸಂಕಷ್ಟಕ್ಕೀಡಾದ ರೈತ ಇತ್ಯಾದಿ ಕಾರಣಗಳಿಂದಾಗಿ ಹಳ್ಳಿಯ ಸ್ವಯಂ ಆಧರಿತ ಆರ್ಥಿಕತೆಯ ಪೂರ್ತಿಯಾಗಿ ನಾಶಗೊಂಡಿತು. ಇದರೊಂದಿಗೆ ನಿರಂತರವಾಗಿ ಕಾಡಿದ ಬರಗಾಲ ರೈತನ ಬವಣೆಯನ್ನು ಮತ್ತು ಸಾಲದ ಹೊರೆಯನ್ನು ಇನ್ನಷ್ಟು ಹೆಚ್ಚಿಸಿತು[೪]. "ದೇಶ ಮಹಾಜನರ (ಸಾಹುಕಾರ) ಹಿಡಿತದಲ್ಲಿದೆ" ಎಂದು ಸರ್‌ಜಾರ್ಜ್ ಡೇನಿಯಲ್[೫] ಹೇಳಿರುವ ಮಾತುಗಳು ಗ್ರಾಮೀಣ ಪ್ರದೇಶದಲ್ಲಿ ಋಣಬದ್ಧತೆ (Rural indebtedness) ಹೆಚ್ಚಾಗಿದ್ದದ್ದನ್ನು ಸೂಚಿಸುತ್ತದೆ. ಬ್ರಿಟಿಷ್ ಸರಕಾರವು ರೈತನ ಬವಣೆ ನೀಗಿಸಲು ಹೆಚ್ಚಿನ ಆಸಕ್ತಿ ವಹಿಸಲಿಲ್ಲ. ಶೋಷಣೆಯಿಂದಾಗಿ ಉಂಟಾದ ಅತೃಪ್ತಿ ಹತ್ತೊಂಬತ್ತನೆಯ ಶತಮಾನದಲ್ಲಿ

ರೈತರ ಚಳುವಳಿಗಳು ಹುಟ್ಟಿಕೊಳ್ಳಲು ಕಾರಣವಾಯಿತು. ಬ್ರಿಟಿಷ್ ಸರಕಾರದ ವಿರುದ್ಧ ಲೇವಾದೇವಿದಾರರ ವಿರುದ್ಧ ದೇಶದ ಪ್ರಮುಖ ಭಾಗಗಳಲ್ಲಿ ರೈತರ ದಂಗೆಗಳು ಕಾಣಿಸಿಕೊಂಡವು. ದಖನ್ ರೈತರ ದಂಗೆ ಅವುಗಳಲ್ಲಿ ಪ್ರಮುಖವಾದುದು.

ದೇಶದ ಕೆಲಭಾಗಗಳಲ್ಲಿ ರೈತರ ದಂಗೆ ಹಿಂಸಾತ್ಮಕ ಸ್ವರೂಪ ತಾಳಿತು. ರೊಚ್ಚಿಗೆದ್ದ ರೈತರು ಸಾಹುಕಾರರ ಆಸ್ತಿಗಳನ್ನು ದೋಚಿದರು ಮತ್ತು ಅವರ ಬಳಿಯಿದ್ದ ಕಾಗದ ಪತ್ರಗಳನ್ನು ಸುಟ್ಟು ಹಾಕಿದರು. ಆಗ ಎಚ್ಚೆತ್ತುಕೊಂಡು ಬ್ರಿಟಿಷ್ ಸರಕಾರ ರೈತರ ಹಿತಕ್ಕಾಗಿ ಕೆಲವು ಕಾಯಿದೆಗಳನ್ನು ಜಾರಿಗೆ ತರಲು ಮತ್ತು ರೈತರ ಪರಿಸ್ಥಿತಿಯನ್ನು ಅಧ್ಯಯನ ಮಾಡಲು ವಿಚಾರಣಾ ಸಮಿತಿಗಳನ್ನು ನೇಮಿಸಲು ನಿರ್ಧರಿಸಿತು. ೧೮೭೯ರಲ್ಲಿ ಜಾರಿಗೆ ಬಂದ "ಡೆಕ್ಕನ್ ಅಗ್ರಿಕಲ್ಚರಿಸ್ಟ್ ರಿಲೀಫ್ ಆ್ಯಕ್ಟ್", ೧೮೮೩ರಲ್ಲಿ ಜಾರಿಗೆ ಬಂದ "ದ ಲ್ಯಾಂಡ್ ಇಪ್ರೂವ್‌ಮೆಂಟ್ ಆ್ಯಕ್ಟ್", ೧೮೮೪ರಲ್ಲಿ ಜಾರಿಗೆ ಬಂದ "ದ ಎಗ್ರಿಕಲ್ಚರಿಸ್ಟ್ ಲೋನ್ಸ್ ಆ್ಯಕ್ಟ್" ಮುಂತಾದ ಕಾಯಿದೆಗಳನ್ನು ಬ್ರಿಟಿಷ್ ಸರಕಾರ ರೈತನ ಹಿತಕ್ಕಾಗಿ ಜಾರಿಗೆ ತಂದರೂ, ಈ ಕಾಯಿದೆಗಳಿಂದ ರೈತರ ಸಮಸ್ಯೆಗಳು ಬಗೆಹರಿಯಲಿಲ್ಲ. ಅಂತಹ ಪರಿಸ್ಥಿತಿಯಲ್ಲಿ ಯೂರೋಪಿನ ಸಹಕಾರ ಚಳುವಳಿಯನ್ನು ಅಧ್ಯಯನ ಮಾಡಿ ಭಾರತದಲ್ಲಿ ಅದನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಬ್ರಿಟಿಷ್ ಸರಕಾರ ಪ್ರಯತ್ನ ಪಟ್ಟಿತು[೬]. ಆ ಪ್ರಯತ್ನದ ಫಲವಾಗಿ ಭಾರತದಲ್ಲಿ ಸಹಕಾರ ಚಳುವಳಿ ಹುಟ್ಟಿಕೊಂಡಿತು.

**ಆಧುನಿಕ ಭಾರತದಲ್ಲಿ ಸಹಕಾರಿ ಪದ್ಧತಿಯ ಅನುಷ್ಠಾನಕ್ಕಾಗಿ ನಡೆದ ಆರಂಭಿಕ ಪ್ರಯತ್ನಗಳು:**

ಯೂರೋಪಿನ ಮಾದರಿಯ ಸಹಕಾರ ಚಳುವಳಿ ಅಧಿಕೃತವಾಗಿ ಭಾರತದಲ್ಲಿ ಆರಂಭಗೊಳ್ಳುವ ಮೊದಲು ಸಹಕಾರ ಸಂಘಗಳ ಮಾದರಿಯ ಸಂಸ್ಥೆಗಳನ್ನು ಸ್ಥಾಪಿಸಿಕೊಳ್ಳುವ ಪ್ರಯತ್ನಗಳು ಸ್ಥಳೀಯವಾಗಿ ನಡೆದವು. ಪಂಜಾಬ್‌ನಲ್ಲಿ ೧೮೯೨ರಲ್ಲಿ ಸ್ಥಾಪಿಸಲ್ಪಟ್ಟ ಪಂಜಾವಾರ್ (Panjawar) ಸೊಸ್ಯಾಟಿ, ೧೮೮೨ ಪೂನಾದಲ್ಲಿ ಸರ್ ವಿಲಿಯಂ ವೆಡರ್‌ಬರ್ನ್ (Wedderburn) ಸ್ಥಾಪಿಸಿದ ಕೃಷಿ ಬ್ಯಾಂಕ್, ೧೮೯೪ರಲ್ಲಿ ಮೈಸೂರಿನಲ್ಲಿ ಭೂಮಾಲಿಕರಿಂದ ಸ್ಥಾಪಿಸಲ್ಪಟ್ಟ ಸಂಘ ಮುಂತಾದ ಸಂಸ್ಥೆಗಳು ಸ್ಥಾಪಿಸಲ್ಪಟ್ಟವು. ಇದಲ್ಲದೆ ಉತ್ತರ ಪ್ರದೇಶ ಮತ್ತು ಬಂಗಾಳಗಳಲ್ಲಿ 'ನಿಧಿ'ಗಳೆಂದು ಕರೆಯಲ್ಪಡುವ ೨೦೦ ಸಂಘಗಳು ಅಸ್ಥಿತ್ವದಲ್ಲಿದ್ದು ೧೯೦೧ರ ಹೊತ್ತಿಗೆ ಅವುಗಳ ಸದಸ್ಯತ್ವ ೩೬,೦೦೦ದಷ್ಟಿದ್ದು ಪಾಲು ಬಂಡವಾಳ ೨ ಕೋಟಿಯಷ್ಟಿತ್ತು. ಇಂತಹ ಸಂಘಗಳು ಅಸ್ಥಿತ್ವದಲ್ಲಿದ್ದು ಮತ್ತು ಅವುಗಳಲ್ಲಿ ಕೆಲವು ತಕ್ಕ ಮಟ್ಟಿಗೆ ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತಿದ್ದುದು ಭಾರತದಲ್ಲಿ ಆಧುನಿಕ ಸಹಕಾರ ಪದ್ಧತಿಯನ್ನು ಪರಿಚಯಿಸಬಹುದಾದ ಸಾಧ್ಯತೆಗಳನ್ನು ತೋರಿಸಿಕೊಟ್ಟವು[೭].

ಭಾರತದ ಗ್ರಾಮೀಣ ಪ್ರದೇಶದ ರೈತರ ಸಮಸ್ಯೆಗಳನ್ನು ಸಹಕಾರ ಪದ್ಧತಿಯ ಮೂಲಕ ಬಗೆಹರಿಸುವ ನಿಟ್ಟಿನಲ್ಲಿ ಮೊದಲು ಪ್ರಯತ್ನ ಮಾಡಿದ್ದು ಅಂದಿನ ಮದ್ರಾಸ್ ಸರಕಾರ. ಮದ್ರಾಸ್ ಸರಕಾರ ೧೮೯೨ರಲ್ಲಿ ಸರ್. ಫ್ರೆಡ್‌ರಿಕ್ ನಿಕೋಲಸನ್ ಎಂಬ ಅಧಿಕಾರಿಯನ್ನು ಐರೋಪ್ಯ ರಾಷ್ಟ್ರಗಳ ಸಹಕಾರ ಚಳುವಳಿಯನ್ನು ಅಧ್ಯಯನ ಮಾಡಿ ವರದಿ ಸಲ್ಲಿಸಲು ಕಳುಹಿಸಿತು. ಅವನು ಯೂರೋಪ್‌ನ ರಾಷ್ಟ್ರಗಳ ಪ್ರವಾಸ ಕೈಗೊಂಡನು. ಪ್ರವಾಸದ ಸಂದರ್ಭದಲ್ಲಿ ಜರ್ಮನಿಗೆ ಭೇಟಿ ನೀಡಿದ್ದ ನಿಕೋಲಸನ್‌ಗೆ ಜರ್ಮನಿಯಲ್ಲಿದ್ದ ರೈಫಿಸೆನ್ (Raiffeisen) ಮಾದರಿಯ ಸಹಕಾರ ಸಂಸ್ಥೆಗಳು ಹೆಚ್ಚು ಆಕರ್ಷಕವಾಗಿ ಕಂಡವು. ಅಲ್ಲಿ ಸ್ಥಾಪಿತವಾಗಿದ್ದ ರೈಫಿಸೆನ್ ಮಾದರಿಯ ಸಹಕಾರ ಸಂಸ್ಥೆಗಳು ರೈತರ ಸಮಸ್ಯೆಗಳನ್ನು ನಿವಾರಿಸುವಲ್ಲಿ ಯಶಸ್ವಿಯಾಗಿದ್ದವು. ಯೂರೋಪ್ ಪ್ರವಾಸದಿಂದ ಹಿಂತಿರುಗಿದ ಮೇಲೆ ನಿಕೋಲಸನ್ ತನ್ನ ವರದಿಯನ್ನು ಮದ್ರಾಸ್ ಸರಕಾರಕ್ಕೆ ಸಲ್ಲಿಸಿದನು. ಅವನ ವರದಿ ೧೮೮೫ ಮತ್ತು ೧೮೮೭ರಲ್ಲಿ ಪ್ರಕಟಗೊಂಡಿತು. ತನ್ನ ವರದಿಯಲ್ಲಿ ನಿಕೋಲಸನ್ ಭಾರತದಲ್ಲಿ ಅದರಲ್ಲೂ ಮದ್ರಾಸ್ ಪ್ರಾಂತ್ಯದಲ್ಲಿ ರೈತರ ಏಳಿಗೆಗಾಗಿ ರೈಫಿಸೆನ್ ಮಾದರಿಯ ಸಹಕಾರ ಸಂಘಗಳನ್ನು ಸ್ಥಾಪಿಸಬೇಕೆಂದು ಸಲಹೆ ಮಾಡಿದನು. ಈ ವರದಿಯಲ್ಲಿನ ವಿವರಗಳನ್ನು ಭಾರತ ಸರಕಾರದ ಗಮನಕ್ಕೂ ತರಲಾಯಿತು[೮].

ಅದೇ ಸಮಯದಲ್ಲಿ ಸಂಯುಕ್ತ ಪ್ರಾಂತ್ಯ ಸರಕಾರ ಸ್ಥಳೀಯ ಪರಿಸ್ಥಿತಿಗಳನ್ನು ಪರಿಶೀಲಿಸಿ ಕೃಷಿ ಬ್ಯಾಂಕುಗಳನ್ನು ಸ್ಥಾಪಿಸಬಹುದಾದ ಸಾಧ್ಯತೆಯನ್ನು ಪರಿಶೀಲಿಸಲು ಐ.ಸಿ.ಎಸ್. ಅಧಿಕಾರಿಯಾಗಿದ್ದ ಡ್ಯೂಪರ್ನೇ (ಡ್ಯೂಪರ್ನೆಕ್ಸ್ Dupernex) ಎಂಬವನನ್ನು ನೇಮಿಸಿತು. ಅವನು ತನ್ನ ವರದಿಯನ್ನು "ಪೀಪಲ್ಸ್ ಬ್ಯಾಂಕ್ಸ್ ಫಾರ್ ನಾರ್ದನ್ ಇಂಡಿಯಾ" ಎಂಬ ಪುಸ್ತಕ ರೂಪದಲ್ಲಿ ಪ್ರಕಟಿಸಿದ[೯]. ಇವೆರಡೂ ವರದಿಗಳು ಕೇಂದ್ರ ಸರಕಾರದ ಪರಿಶೀಲನೆಯಲ್ಲಿದ್ದವು.

ನಿಕೋಲಸ್ ಮತ್ತು ಡೂಪರ್ನೇಯ ವರದಿಗಳನ್ನು ಚರ್ಚಿಸಿ ಪರಿಶೀಲಿಸಲು ಆಗ ಭಾರತದ ವೈಸ್‌ರಾಯಿಯಾಗಿದ್ದ ಲಾರ್ಡ್ ಕರ್ಜನ್, ಸರ್ ಎಡ್ವರ್ಡ್ ಲಾ ನ ನೇತೃತ್ವದಲ್ಲಿ ಸಮಿತಿಯೊಂದನ್ನು ನೇಮಿಸಿದ. ಎಡ್ವರ್ಡ್ ಲಾ ಸಮಿತಿ ಸಹಕಾರ ಸಂಘಗಳನ್ನು ದೀರ್ಘಕಾಲದ ಪ್ರಯೋಗಾರ್ಥವಾಗಿ ಎಲ್ಲಾ ರೀತಿಗಳಿಂದಲೂ ಪ್ರೋತ್ಸಾಹಿಸಬಹುದೆಂದು ಶಿಫಾರಸು ಮಾಡಿತು ಮತ್ತು ರೈಫಿಸೆನ್ ಮಾದರಿಯ ಸಹಕಾರ ಸಂಘಗಳ ರಚನೆಗೆ ಒತ್ತು ನೀಡಿತು[೧೦]. ಎಲ್ಲಾ ತಜ್ಞರ ಅಭಿಪ್ರಾಯಗಳು ಹಾಗೂ ವರದಿಗಳು ಲೇವಾದೇವಿ (ಪತ್ತಿನ) ಸಹಕಾರ ಸಂಘಗಳ ರಚನೆಗೆ ಬೆಂಬಲ ಸೂಚಿಸಿದುದರಿಂದ ಸರಕಾರ ಆ ನಿಟ್ಟಿನಲ್ಲಿ ಕಾರ್ಯ ಪ್ರವೃತ್ತವಾಯಿತು. ಇದು ೧೯೦೪ರಲ್ಲಿ ಸಹಕಾರ ಸಂಘಗಳ ಪ್ರಥಮ ಕಾಯಿದೆ ಜಾರಿಗೆ ಬರಲು ಕಾರಣವಾಯಿತು.

## ೨.೩ ಬ್ರಿಟಿಷರು ಜಾರಿಗೆ ತಂದ ಸಹಕಾರಿ ಕಾಯಿದೆಗಳು

**೧೯೦೪ರ ಕಾಯಿದೆ:** ಎಡ್ವರ್ಡ್ ಲಾ ಸಮಿತಿಯ ಶಿಫಾರಸ್ಸಿನ ಮೇರೆಗೆ ಸರ್. ಡೆಂಝಿಲ್ ಇಬೇಟ್ಸನ್ (Sir Denzil Ibbetson) ಎಂಬವನು ಸೆಂಟ್ರಲ್ ಲೆಜಿಸ್ಲೇಟಿವ್ ಕೌನ್ಸಿಲ್‌ನಲ್ಲಿ ಕಾಯಿದೆಯ ಕರಡನ್ನು ಮಂಡಿಸಿದ. ಅದನ್ನು ಸೆಂಟ್ರಲ್ ಲೆಜಿಸ್ಲೇಟಿವ್ ಕೌನ್ಸಿಲ್ ಅಂಗೀಕರಿಸಿತು ಮತ್ತು ಲಾರ್ಡ್ ಕರ್ಜನ್ ಅದಕ್ಕೆ ಒಪ್ಪಿಗೆ ಸೂಚಿಸಿ ಸಹಿ ಮಾಡಿದ. ಹೀಗೆ ಮಾರ್ಚ್ ೨೫, ೧೯೦೪ ರಂದು "ಕೋ ಓಪರೇಟಿವ್ ಕ್ರೆಡಿಟ್ ಸೊಸ್ಯಾಟಿಗಳ ಕಾಯಿದೆ" ಜಾರಿಗೆ ಬಂದಿತು. ಈ ಕಾಯಿದೆ ಜಾರಿಗೊಳ್ಳುವುದರೊಂದಿಗೆ ಭಾರತದಲ್ಲಿ ಸಹಕಾರ ಚಳುವಳಿ ಅಧಿಕೃತವಾಗಿ ಆರಂಭಗೊಂಡಿತು. ಅದರ ಪೀಠಿಕೆಯಲ್ಲಿ (preamble) ಸೂಚಿಸಿರುವಂತೆ ಈ ಕಾಯಿದೆಯ ಉದ್ದೇಶ ಕೃಷಿಕರು, ಕರಕುಶಲಕರ್ಮಿಗಳು ಮತ್ತು ಸೀಮಿತ ಸಂಪಾದನೆ (limited means) ಇರುವ ವ್ಯಕ್ತಿಗಳಲ್ಲಿ ಮಿತವ್ಯಯ, ಸ್ವಸಹಾಯ ಮತ್ತು ಸಹಕಾರವನ್ನು ಪ್ರೋತ್ಸಾಹಿಸುವುದಾಗಿತ್ತು[೧೧]. ಸಹಕಾರ ಕಾಯಿದೆಯ ಕೆಲವು ಮುಖ್ಯಾಂಶಗಳು ಈ ಕೆಳಗಿನಂತಿವೆ:

೧. ಹಳ್ಳಿ ಅಥವಾ ಪಟ್ಟಣಗಳಲ್ಲಿ ಒಂದೇ ಪ್ರದೇಶದಲ್ಲಿ ಹತ್ತು ಅಥವಾ ಅದಕ್ಕಿಂತ ಹೆಚ್ಚು ಜನರು ವಾಸಿಸುತ್ತಿದ್ದಲ್ಲಿ, ಅವರು ತಮ್ಮ ಮಧ್ಯೆ ಸ್ವಯಂ ಸಹಾಯಕ್ಕಾಗಿ ಸಹಕಾರ ಸಂಘಗಳನ್ನು ಸ್ಥಾಪಿಸಿಕೊಳ್ಳಬಹುದು.

೨. ಈ ಕಾಯಿದೆಯ ಪ್ರಕಾರ ಸಹಕಾರ ಸಂಘಗಳನ್ನು ಗ್ರಾಮೀಣ ಮತ್ತು ಪಟ್ಟಣ ಸಹಕಾರ ಸಂಘಗಳೆಂದು ವರ್ಗೀಕರಿಸಲಾಗಿತ್ತು. ಗ್ರಾಮೀಣ ಸಂಘಗಳು ಅಮಿತ ಜವಾಬ್ದಾರಿಯದ್ದಾಗಿರಬೇಕಿತ್ತು (unlimited liability). ಆದರೆ ಪಟ್ಟಣ ಸಹಕಾರ ಸಂಘಗಳು ಮಿತ ಅಥವಾ ಅಮಿತ ಜವಾಬ್ದಾರಿಯದ್ದಾಗಿರಬಹುದಾಗಿತ್ತು (unlimited or unlimited liability). ಸಹಕಾರ ಸಂಘಗಳ ಒಟ್ಟು ಸದಸ್ಯತ್ವದಲ್ಲಿ ಶೇ.೮೦ರಷ್ಟು ಕೃಷಿಕರಿದ್ದರೆ ಅದನ್ನು ಗ್ರಾಮೀಣ ಸಹಕಾರ ಸಂಘವೆಂದೂ, ಒಟ್ಟು ಸದಸ್ಯತ್ವದಲ್ಲಿ ಶೇ.೮೦ರಷ್ಟು ಕೃಷಿಕರಲ್ಲದವರಾಗಿದ್ದರೆ ಅದನ್ನು ಪಟ್ಟಣ ಸಹಕಾರ ಸಂಘವೆಂದು ಪರಿಗಣಿಸಲಾಗುತ್ತಿತ್ತು[೧೨].

೩. ಸಹಕಾರ ಸಂಘಗಳ ಕಾರ್ಯವ್ಯಾಪ್ತಿ ಮಿತಗೊಳಿಸಲ್ಪಟ್ಟಿತ್ತು. ಸಹಕಾರ ಸಂಘಗಳು ಸದಸ್ಯರಿಗೆ ಮಾತ್ರ ವೈಯಕ್ತಿಕ ಭದ್ರತೆಯ ಆಧಾರದ ಮೇಲೆ ಸಾಲ ಕೊಡಬಹುದಾಗಿತ್ತು.

೪. ಓರ್ವ ಸದಸ್ಯನಿಗೆ ಪಾಲು ಬಂಡವಾಳದ ಮೇಲೆ ನೀಡಬಹುದಾದ ಬಡ್ಡಿ ಮಿತಗೊಳಿಸಲ್ಪಟ್ಟಿತ್ತು. ಓರ್ವ ಸದಸ್ಯ ರೂ. ೧೦೦೦ಕ್ಕಿಂತ ಹೆಚ್ಚಿನ ಷೇರನ್ನು ಹೊಂದಿರಬಾರದಾಗಿತ್ತು.

೫. ಈ ಕಾಯಿದೆ ಪ್ರತಿಯೊಂದು ಪ್ರಾಂತ್ಯದಲ್ಲಿಯೂ ಸಹಕಾರ ಸಂಘಗಳ ರಿಜಿಸ್ಟ್ರಾರರ ನೇಮಕಕ್ಕೆ ಅವಕಾಶ ಮಾಡಿಕೊಟ್ಟಿತ್ತು. ಪ್ರಾಂತ್ಯದ ಸಹಕಾರ ಸಂಘಗಳು ಆ ಪ್ರಾಂತ್ಯದ ರಿಜಿಸ್ಟ್ರಾರ್‌ನ ಅಧೀನಕೊಳ್ಳಪಟ್ಟಿದ್ದವು.

೬. ಈ ಕಾಯಿದೆಯ ಪ್ರಕಾರ ಸಹಕಾರ ಸಂಘಗಳಿಗೆ ಆದಾಯ ತೆರಿಗೆ, ಸ್ಟಾಂಪ್ ಡ್ಯೂಟಿ ಮತ್ತು ನೋಂದಣಿ ಶುಲ್ಕದಿಂದ ವಿನಾಯಿತಿ ಇತ್ತು[೧೩].

೭. ಗ್ರಾಮೀಣ ಪ್ರದೇಶದ ಸಹಕಾರ ಸಂಘಗಳು ಪಾಲು ಮುನಾಫೆಯನ್ನು ಸದಸ್ಯರಿಗೆ ನೀಡಬಾರದು. ಹೆಚ್ಚುವರಿ ಹಣವನ್ನು ಸಂಚಿತ ನಿಧಿಯಲ್ಲಿಡಬೇಕು. ಆ ನಿಧಿಯಲ್ಲಿ ಸೇರಿದ ಒಟ್ಟು ಮೊತ್ತವು ಕಾಯಿದೆಯಲ್ಲಿ ಹೇಳಿರುವ ಮೊತ್ತಕ್ಕಿಂತ ಹೆಚ್ಚಾದಾಗ ಸದಸ್ಯರಿಗೆ ಬೋನಸ್ಸು ನೀಡಬಹುದು.

೮. ಪಟ್ಟಣಗಳ ಸಹಕಾರ ಸಂಘಗಳಲ್ಲಿ ಒಟ್ಟು ಲಾಭಾಂಶದ ೧/೪ ಭಾಗವನ್ನು ಸಂಚಿತ ನಿಧಿಗೆ ಸೇರಿಸುವ ತನಕ ಸದಸ್ಯರಿಗೆ ಪಾಲು ಮುನಾಫೆ ನೀಡಬಾರದು[೧೪].

**೧೯೧೨ರ ಪರಿಷ್ಕೃತ ಸಹಕಾರ ಕಾಯಿದೆ:**

೧೯೧೨ರ ಸಹಕಾರ ಕಾಯಿದೆಯಲ್ಲಿ ಕಂಡುಬಂದ ನ್ಯೂನತೆಗಳನ್ನು ಸರಿಪಡಿಸಲು ೧೬೧೨ರ ಸಹಕಾರ ಕಾಯಿದೆ ಜಾರಿಗೆ ಬಂತು. ಈ ಕಾಯಿದೆ ೧೬೦೪ರ ಸಹಕಾರ ಕಾಯಿದೆಯ ಪರಿಷ್ಕೃತ ರೂಪವಾಗಿತ್ತು. ಈ ಕಾಯಿದೆ ವಿಭಿನ್ನ ರೀತಿಯ ಸಹಕಾರ ಸಂಘಗಳ ಸ್ಥಾಪನೆಗೆ ಅವಕಾಶ ಮಾಡಿಕೊಟ್ಟಿತು. ಈ ಕಾಯಿದೆಯ ಮುಖ್ಯಾಂಶಗಳು ಈ ಕೆಳಗಿನಂತಿವೆ.

೧. ಈ ಕಾಯಿದೆಯ ಪ್ರಕಾರ ತನ್ನ ಸದಸ್ಯರುಗಳ ಆರ್ಥಿಕ ಹಿತಾಸಕ್ತಿಗಳನ್ನು ಸಹಕಾರ ತತ್ವಗಳಿಗನುಗುಣವಾಗಿ ಉತ್ತೇಜಿಸುವ ಉದ್ದೇಶ ಹೊಂದಿರುವ ಯಾವುದೇ ಪತ್ತಿನ ಅಥವಾ ಇತರ ಸಂಘಗಳನ್ನು ನೋಂದಣಿ ಮಾಡಬಹುದು.

೨. ಈ ಕಾಯಿದೆಯಲ್ಲಿ ಕೇಂದ್ರ ಬ್ಯಾಂಕುಗಳ ನೋಂದಾವಣೆಗೆ ಕೂಡಾ ಅವಕಾಶ ಕಲ್ಪಿಸಲಾಯಿತು.

೩. ಈ ಕಾಯಿದೆಯ ಪ್ರಕಾರ ಕೇಂದ್ರ ಸಂಘಗಳು ಮಿತ ಜವಾಬ್ದಾರಿಯನ್ನು ಮತ್ತು ಗ್ರಾಮೀಣ ಪತ್ತಿನ ಸಹಕಾರ ಸಂಘಗಳು ಅಮಿತ ಜವಾಬ್ದಾರಿಯನ್ನು ಹೊಂದಿರಬೇಕಾಗಿತ್ತು.

೪. ಮಿತ ಜವಾಬ್ದಾರಿಯ ಸಂಘಗಳಲ್ಲಿ ಯಾವನೇ ಒಬ್ಬ ಸದಸ್ಯ ರೂ. ೧೦೦೦ಕ್ಕಿಂತ ಷೇರನ್ನು ಹೊಂದಿರಬಾರದು.

೫. ಒಂದು ಸಹಕಾರ ಸಂಘದ ಒಟ್ಟು ಲಾಭಾಂಶದ ೧/೪ ಭಾಗವನ್ನು ಆ ಸಂಘದ ಸಂಚಿತ ನಿಧಿಗೆ ಸೇರಿಸಬೇಕು[೧೫].

೬. ಸಹಕಾರ ಸಂಘಗಳಿಗೆ ಸದಸ್ಯರಲ್ಲದವರಿಂದ ಕೂಡಾ ಠೇವಣಿಯನ್ನು ಪಡೆದುಕೊಳ್ಳಲು ಅವಕಾಶ ನೀಡಲಾಯಿತು.

೭. ಸಂಘಗಳ ರಚನೆ, ಕಾರ್ಯ ನಿರ್ವಹಣೆ ಮತ್ತು ಆರ್ಥಿಕ ಪರಿಸ್ಥಿತಿಗಳ ಬಗ್ಗೆ ತನಿಖೆ ನಡೆಸಲು ರಿಜಿಸ್ಟ್ರಾರ್‌ನಿಗೆ ಹೆಚ್ಚಿನ ಅಧಿಕಾರ ನೀಡಲಾಯಿತು.

೮. ಸಂಘಗಳನ್ನು ಮುಚ್ಚುವ ವಿಷಯದಲ್ಲೂ ಕೂಡಾ ರಿಜಿಸ್ಟ್ರಾರನಿಗೆ ಹೆಚ್ಚಿನ ಅಧಿಕಾರ ನೀಡಲಾಯಿತು.

೯. ಸಾಲಗಾರನ ಕೋರಿಕೆಯ ಮೇರೆಗೆ ಸಂಘವನ್ನು ಪರಿವೀಕ್ಷಿಸುವ (inspection) ಅವಕಾಶವನ್ನು ಕೂಡಾ ರಿಜಿಸ್ಟ್ರಾರ್‌ನಿಗೆ ನೀಡಲಾಯಿತು.

೧೯೧೨ರ ತಿದ್ದುಪಡಿಗೊಂಡ ಸಹಕಾರ ಕಾಯಿದೆ ಸಹಕಾರ ಚಳುವಳಿಯ ಬೆಳವಣಿಗೆಗೆ ಉತ್ತೇಜನ ನೀಡಿತು.

**ಇತರ ಸಹಕಾರ ಕಾಯಿದೆಗಳು:**

೧೯೧೯ರ ಗವರ್ನ್‌ಮೆಂಟ್ ಆಫ್ ಇಂಡಿಯಾ ಆಕ್ಟ್‌ನ ಪ್ರಕಾರ ಸಹಕಾರವನ್ನು ಒಂದು ಪ್ರಾಂತೀಯ ವಿಷಯವನ್ನಾಗಿ ಪರಿಗಣಿಸಿ ಅದನ್ನು ರಾಜ್ಯ ಸರಕಾರದ ಹೊಣೆಗಾರಿಕೆಗೆ ಒಪ್ಪಿಸಲಾಯಿತು. ೧೯೨೫ರಲ್ಲಿ ಮುಂಬಯಿ ಸರಕಾರವು ಮುಂಬಯಿ ಸಹಕಾರ ಸಂಘಗಳ ಕಾಯಿದೆಯನ್ನು ಜಾರಿಗೆ ತಂದಿತು. ಮುಂದೆ ಮದರಾಸು, ಬಿಹಾರ, ಒರಿಸ್ಸಾ, ಬಂಗಾಳ, ಕೊಡಗು, ಹೈದರಾಬಾದ್ ಪ್ರಾಂತ್ಯಗಳಲ್ಲಿ ಸ್ಥಳೀಯ ಸಹಕಾರಿ ಕಾಯಿದೆಗಳು ಜಾರಿಗೆ ಬಂದವು[೧೬].

**ಸಹಕಾರ ಚಳುವಳಿಯ ಬೆಳವಣಿಗೆ:**

ಭಾರತದ ಸಹಕಾರ ಚಳುವಳಿಯನ್ನು ಸ್ವಾತಂತ್ರ್ಯ ಪೂರ್ವದ ಸಹಕಾರ ಚಳುವಳಿ ಮತ್ತು ಸ್ವಾತಂತ್ರ್ಯಾ ನಂತರದ ಸಹಕಾರ ಚಳುವಳಿ ಎಂದು ಎರಡು ಭಾಗಗಳಾಗಿ ವಿಂಗಡಿಸಬಹುದು.

**ಸ್ವಾತಂತ್ರ್ಯ ಪೂರ್ವದಲ್ಲಿ ಸಹಕಾರ ಚಳುವಳಿಯ ಬೆಳವಣಿಗೆ:**

ಸ್ವಾತಂತ್ರ್ಯ ಪೂರ್ವದಲ್ಲಿ ಸಹಕಾರ ಚಳುವಳಿ ಕೆಳಗೆ ತಿಳಿಸಿರುವ ಐದು ಹಂತಗಳಲ್ಲಿ ಬೆಳೆದು ಬಂದಿದೆ.

**೧. ಆರಂಭಿಕ ಹಂತ ( ೧೯೦೪ – ೧೯೧೧):**

ಈ ಹಂತದಲ್ಲಿ ಪ್ರಥಮ ಸಹಕಾರ ಕಾಯಿದೆ ಜಾರಿಗೆ ಬಂದು ದೇಶದಲ್ಲಿ ಸಹಕಾರ ಚಳುವಳಿಗೆ ಅಧಿಕೃತ ಚಾಲನೆ ದೊರೆಯಿತು. "೧೬೦೪ ಸಹಕಾರಿ ಕ್ರೆಡಿಟ್ ಸೊಸ್ಯಾಟಿಗಳ ಕಾಯಿದೆ ಜಾರಿಗೆ ಬಂದುದು ಭಾರತದ ಆರ್ಥಿಕ ಮತ್ತು ಸಾಮಾಜಿಕ ಇತಿಹಾಸದಲ್ಲಿ ಬದಲಾವಣೆಯ ಸನ್ನಿವೇಶ"

ಎಂದು ಹೇಳುತ್ತಾರೆ ಹೆನ್ರಿ. ಡಬ್ಲ್ಯೂ. ವೋಲ್ಫ್[೧೭]. ೧೯೦೪ರ ಸಹಕಾರ ಕಾಯಿದೆಯ ಪ್ರಕಾರ ಕೇವಲ ಕೃಷಿ ಪತ್ತಿನ ಸಹಕಾರ ಸಂಘಗಳನ್ನು ಮಾತ್ರ ಸ್ಥಾಪಿಸಲು ಅವಕಾಶವಿತ್ತು. ಈ ಕಾಯಿದೆಯ ಮೇರೆಗೆ ದೇಶದ ಮೊಟ್ಟ ಮೊದಲ ಕೃಷಿ ಪತ್ತಿನ ಸಹಕಾರ ಸಂಘ ಮೇ ೮, ೧೯೦೫ ರಂದು (ಮುಂಬೈ ಪ್ರಾಂತ್ರ್ಯದ) ಕರ್ನಾಟಕದ ಅಂದಿನ ಧಾರವಾಡ ಜಿಲ್ಲೆಯ ಗದಗ ತಾಲೂಕಿನ ಕಣಗಿನ ಹಾಳದಲ್ಲಿ ಸ್ಥಾಪಿಸಲ್ಪಟ್ಟಿತು (ಗದಗ ಈಗ ಪ್ರತ್ಯೇಕ ಜಿಲ್ಲೆಯಾಗಿದೆ). ಆ ನಂತರ ದೇಶದ ವಿವಿಧ ಭಾಗಗಳಲ್ಲಿ ಸಹಕಾರ ಸಂಘಗಳು ಆರಂಭಗೊಂಡವು. ೧೯೦೬-೦೭ರಲ್ಲಿ ೮೪೩ರಷ್ಟಿದ್ದ ಸಹಕಾರ ಸಂಘಗಳ ಸಂಖ್ಯೆ ೧೯೧೧ರ ವೇಳೆಗೆ ೫೩೨೧ಕ್ಕೇರಿತು[೧೮]. ಆದರೆ ೧೯೦೪ರ ಕಾಯಿದೆಯಲ್ಲಿದ್ದ ಕೆಲವು ನ್ಯೂನತೆಗಳಿಂದಾಗಿ ಈ ಹಂತದಲ್ಲಿ ಸಹಕಾರ ಚಳುವಳಿ ನಿರೀಕ್ಷಿತ ಯಶಸ್ಸು ಗಳಿಸಲಿಲ್ಲ.

**ತೀವ್ರ ಬೆಳವಣಿಗೆಯ ಹಂತ (೧೯೧೨-೧೯೧೮)**

ಈ ಹಂತದಲ್ಲಿ ೧೯೧೨ರಲ್ಲಿ ತಿದ್ದುಪಡಿಯಾದ ಸಹಕಾರ ಕಾಯಿದೆ ಜಾರಿಗೆ ಬಂತು. ಈ ಕಾಯಿದೆ ಸಹಕಾರ ಚಳುವಳಿಯ ಬೆಳವಣಿಗೆಗೆ ಉತ್ತೇಜನ ನೀಡಿತು. ಈ ಕಾಯಿದೆ ವಿವಿಧ ಬಗೆಯ ಸಹಕಾರ ಸಂಘಗಳ ಸ್ಥಾಪನೆಗೆ ಅವಕಾಶ ಮಾಡಿಕೊಟ್ಟಿತು. ಈ ಅವಧಿಯಲ್ಲಿ ಸಹಕಾರ ಚಳುವಳಿಯ ಅಭಿವೃದ್ಧಿಯ ಬಗ್ಗೆ ತಿಳಿಯಲು ಸರ್.ಎಡ್ವರ್ಡ್ ಮೆಕ್ಲಾಗನ್‌ನ (Sir Edward Maclagan)ನ ನೇತೃತ್ವದಲ್ಲಿ ಸಮಿತಿಯೊಂದನ್ನು ರಚಿಸಿತು. ಈ ಸಮಿತಿಯು ೧೯೧೫ರಲ್ಲಿ ಅದರ ವರದಿ ಸಲ್ಲಿಸಿ ಚಳುವಳಿಯ ಭವಿಷ್ಯದ ಬೆಳವಣಿಗೆಗೆ ಸಂಬಂಧಿಸಿದಂತೆ ಕೆಲವು ಮಹತ್ವಪೂರ್ಣವಾದ ಪ್ರಸ್ತಾವಗಳನ್ನು ಸರಕಾರದ ಮುಂದಿಟ್ಟಿತು. ೧೯೧೨-೧೮ರ ಅವಧಿಯಲ್ಲಿ ಸಹಕಾರ ಚಳುವಳಿ ಸಾಕಷ್ಟು ಪ್ರಗತಿಯನ್ನು ಸಾಧಿಸಿತು. ೧೯೧೧-೧೨ರಲ್ಲಿ ೮,೧೭೭ರಷ್ಟಿದ್ದ ಸಹಕಾರಿ ಸಂಘಗಳ ಸಂಖ್ಯೆ ೧೯೧೭-೧೮ರಲ್ಲಿ ೨೫,೯೨ಕ್ಕೇರಿದ್ದು ಸಹಕಾರ ಚಳುವಳಿಯಲ್ಲಾದ ಪ್ರಗತಿಯನ್ನು ಸೂಚಿಸುತ್ತದೆ. ೧೯೧೭-೧೮ರಲ್ಲಿ ದೇಶದಲ್ಲಿ ೨೩,೭೪೧ ಕೃಷಿ ಸಹಕಾರ ಸಂಘಗಳು ಮತ್ತು ೧೪೫೧ ಕೃಷಿಯೇತರ ಸಹಕಾರ ಸಂಘಗಳಿದ್ದು ಈ ಸಂಘಗಳು ೧೦.೯ ಲಕ್ಷದಷ್ಟು ಸದಸ್ಯರನ್ನು ಹೊಂದಿದ್ದವು[೧೯].

**ಅಯೋಜಿತ ವಿಸ್ತರಣೆಯ ಅವಧಿ (೧೯೧೯-೧೯೨೯)**

೧೯೧೯ರಲ್ಲಿ ಸಹಕಾರ ಪ್ರಾಂತೀಯ ಸರಕಾರಗಳ ಅಧಿಕಾರದ ಮಿತಿಗೆ ಬಂದಿತು. ಹಲವು ಪ್ರಾಂತ್ಯಗಳು ಸಮಿತಿಗಳನ್ನು ರಚಿಸಿಕೊಂಡು ಸಹಕಾರ ಕ್ಷೇತ್ರದ ಬೆಳವಣಿಗೆಗೆ ಕ್ರಮ ಕೈಗೊಂಡು ತಮ್ಮದೇ ಆದ ಕಾಯಿದೆಗಳನ್ನು ರಚಿಸಿಕೊಂಡವು. ೧೯೨೫ರಲ್ಲಿ ಮುಂಬೈ ಸರಕಾರ ತನ್ನದೇ ಆದ ಸಹಕಾರ ಕಾಯಿದೆಯನ್ನು ಜಾರಿಗೆ ತಂದಿತು. ಮದ್ರಾಸ್, ಬಿಹಾರ, ಒರಿಸ್ಸಾ, ಬಂಗಾಳಗಳು ಕೂಡಾ

ತಮ್ಮದೇ ಆದ ಸಹಕಾರಿ ಕಾಯಿದೆಗಳನ್ನು ರಚಿಸಿಕೊಂಡವು. ಈ ಹಂತದಲ್ಲಿ ಸಹಕಾರ ಚಳುವಳಿ ಶೀಘ್ರ ಬೆಳವಣಿಗೆಯನ್ನು ಕಂಡಿತು. ಪತ್ತಿನ ಮತ್ತು ಇತರ ಸಹಕಾರ ಸಂಘಗಳು ಹೆಚ್ಚಿನ ಸಂಖ್ಯೆಯಲ್ಲಿ ಸ್ಥಾಪಿಸಲ್ಪಟ್ಟವು. ೧೯೨೮-೨೯ರ ಅವಧಿಯಲ್ಲಿ ದೇಶದಲ್ಲಿ ಸಹಕಾರ ಸಂಘಗಳು ಹೆಚ್ಚಿನ ಸಂಖ್ಯೆಯಲ್ಲಿ ಸ್ಥಾಪಿಸಲ್ಪಟ್ಟವು. ೧೯೧೮-೧೯ರಲ್ಲಿ ೨೮,೭೭೭ರಷ್ಟು ಪತ್ತಿನ ಸಹಕಾರ ಸಂಘಗಳು ಮತ್ತು ೧೯೭೧ ಇತರ ಸಹಕಾರ ಸಂಘಗಳಿದ್ದರೆ. ೧೯೨೮-೨೯ರಲ್ಲಿ ೮೭,೯೯೧ ಪತ್ತಿನ ಸಹಕಾರ ಸಂಘಗಳು ಮತ್ತು ೯೭೬೧ ಇತರ ಸಹಕಾರ ಸಂಘಗಳು ಅಸ್ತಿತ್ವದಲ್ಲಿದ್ದವು[೨೦].

ಈ ಅವಧಿಯಲ್ಲಿ ಸಹಕಾರ ಚಳುವಳಿ ಬಹುಮುಖಿಯಾಗಿ ಬೆಳೆಯಿತು. ಪ್ರಾಂತ್ಯಗಳಲ್ಲಿ ಪ್ರತ್ಯೇಕ ಸಹಕಾರ ಇಲಾಖೆಗಳು ರಚಿಸಲ್ಪಟ್ಟಿದ್ದರಿಂದ ಆ ಇಲಾಖೆಯ ನೌಕರರು ಸಂಘಗಳ ವಿಸ್ತರಣೆಗೆ ಹೆಚ್ಚಿನ ಆಧ್ಯತೆ ನೀಡಿದರು. ಆದ್ದರಿಂದ ಸಹಕಾರ ಸಂಘಗಳು ಹೆಚ್ಚಿನ ಸಂಖ್ಯೆಯಲ್ಲಿ ಸ್ಥಾಪಿಸಲ್ಪಟ್ಟವು. ಆದರೆ ಸಂಘಗಳ ಗುಣಮಟ್ಟಕ್ಕೆ ಹೆಚ್ಚಿನ ಆಧ್ಯತೆ ದೊರೆಯಲಿಲ್ಲ. ಸಂಘಗಳ ಸಂಖ್ಯೆಯಲ್ಲಿ ಹೆಚ್ಚಳವಾದರೂ ಗ್ರಾಮೀಣ ಪ್ರದೇಶದಲ್ಲಿ ಸಹಕಾರ ಚಳುವಳಿಗೆ ಸೇರಿದವರ ಪ್ರಮಾಣ ಕಡಿಮೆಯಾಗಿತ್ತು. ಸಹಕಾರ ಸಂಘಗಳು "ಸರಕಾರಿ ಬ್ಯಾಂಕು"ಗಳೆಂಬ ಭಾವನೆ ಜನರ ಮನಸ್ಸಿನಲ್ಲಿ ಬೇರೂರಿದ್ದೇ ಅದಕ್ಕೆ ಕಾರಣ. ಜೊತೆಗೆ ಜನರಿಗೆ ಸಹಕಾರ ತತ್ವಗಳು ಸರಿಯಾಗಿ ಅರ್ಥವಾಗಿರಲಿಲ್ಲ. ಇದೇ ಅವಧಿಯಲ್ಲಿ ನೇಮಿಸಲ್ಪಟ್ಟ ರಾಯಲ್ ಕಮೀಶನ್ "ಸಾಕಷ್ಟು ಪ್ರಮಾಣದಲ್ಲಿ ಶಿಕ್ಷಣ ಇಲ್ಲದಿರುವುದು ಮತ್ತು ಮೇಲ್ವಿಚಾರಣೆ ಮತ್ತು ಮಾರ್ಗದರ್ಶನದ ಕೊರತೆ ಸಹಕಾರ ಚಳುವಳಿ ಸೋಲಲು ಕಾರಣ" ಎಂದು ವರದಿ ಮಾಡಿತು. ೧೯೧೯ರಿಂದ ೧೯೨೯ರ ಅವಧಿಯ ಸಹಕಾರ ಚಳವಳಿಯ ಬೆಳವಣಿಗೆಯನ್ನು ಶ್ರೀ ರಾಮದಾಸ ಪಂತಲು ಎಂಬ ಸಹಕಾರಿ "ಅಯೋಜಿತ ಬೆಳವಣಿಗೆ" ಎಂದು ಕರೆದಿದ್ದಾರೆ[೨೧].

**ಪುನರ್‌ಸಂಘಟನೆಯ ಅವಧಿ (೧೯೨೯-೧೯೩೮)**

ಈ ಅವಧಿಯಲ್ಲಿ ವಿಶ್ವ ಆರ್ಥಿಕ ಬಿಕ್ಕಟ್ಟಿನಿಂದಾಗಿ ಸಹಕಾರ ಚಳುವಳಿಯ ಬೆಳವಣಿಗೆ ಕುಂಠಿತಗೊಂಡಿತು. ಆರ್ಥಿಕ ಬಿಕ್ಕಟ್ಟಿನ ಪರಿಣಾಮವಾಗಿ ಕೃಷಿ ಉತ್ಪನ್ನಗಳ ಬೆಲೆ ಕುಸಿತ ಕೃಷಿಕರ ಆರ್ಥಿಕ ಪರಿಸ್ಥಿತಿಯ ಮೇಲೆ ವ್ಯತಿರಿಕ್ತ ಪರಿಣಾಮ ಬೀರಿತು. ರೈತರ ಸಾಲ ತೀರಿಸುವ ಶಕ್ತಿ ಇಲ್ಲದಂತಾಯಿತು ಮತ್ತು ಸಾಲದ ಬೇಡಿಕೆ ಹೆಚ್ಚಿತು. ಅನೇಕ ಸಹಕಾರ ಸಂಘಗಳು ಕೊಟ್ಟಿದ್ದ ಸಾಲವನ್ನು ವಸೂಲು ಮಾಡಲು ಸಾಧ್ಯವಾಗದೆ ಮುಚ್ಚಿ ಹೋದವು. ಬಿಹಾರ, ಬೇರಾರ್, ಒರಿಸ್ಸಾ ಮತ್ತು ಬಂಗಾಳ ಪ್ರಾಂತ್ಯಗಳಲ್ಲಿ ಸಹಕಾರ ಚಳುವಳಿಗೆ ತೀವ್ರ ಹಿನ್ನಡೆ ಉಂಟಾಯಿತು. ಕೆಲವು ಕೇಂದ್ರ ಸಹಕಾರಿ ಬ್ಯಾಂಕುಗಳು ಕೂಡಾ ಮುಚ್ಚಲ್ಪಟ್ಟವು. ಸಹಕಾರ ಚಳುವಳಿಯ ಇತಿಹಾಸದಲ್ಲಿಯೇ ಮೊದಲ ಬಾರಿಗೆ ಸಹಕಾರ ಸಂಘಗಳ ಸಂಖ್ಯೆಯಲ್ಲಿ ಇಳಿತ ಕಂಡು ಬಂತು. ೧೯೩೦-೩೧ರಲ್ಲಿ

೯೩.೫೧೨ರಷ್ಟಿದ್ದ ಪತ್ತಿನ ಸಹಕಾರ ಸಂಘಗಳ ಸಂಖ್ಯೆ ೧೯೩೩-೩೪ರಲ್ಲಿ ೯೨.೨೨೬ಕ್ಕೆ ಇಳಿದದ್ದು ಸಹಕಾರ ಚಳುವಳಿಯ ಬೆಳವಣಿಗೆ ಕುಂಠಿತಗೊಂಡದ್ದನ್ನು ಸೂಚಿಸುತ್ತದೆ. ಆದುದರಿಂದ ಈ ಹಂತದಲ್ಲಿ ಸಹಕಾರ ಚಳುವಳಿಯ ವಿಸ್ತರಣೆಗಿಂತ ಹೆಚ್ಚಾಗಿ ಆಗ ಅಸ್ಥಿತ್ವದಲ್ಲಿದ್ದ ಸಂಘಗಳ ಪುನರ್‌ಸಂಘಟನೆ ಮತ್ತು ಅವುಗಳ ಸಂಪನ್ಮೂಲ ಅಭಿವೃದ್ಧಿಪಡಿಸುವುದಕ್ಕೆ ಹೆಚ್ಚಿನ ಗಮನ ನೀಡಲಾಯಿತು. ಸಹಕಾರ ಚಳುವಳಿಗೆ ತೀವ್ರ ಹಿನ್ನಡೆ ಉಂಟಾಗಿದ್ದ ಪ್ರಾಂತ್ಯಗಳಲ್ಲಿ ಸಹಕಾರ ಸಂಘಗಳ ಬಾಕಿ ಇರುವ ಸಾಲವನ್ನು ವಸೂಲು ಮಾಡುವ ಕಡೆಗೆ ಹೆಚ್ಚು ಗಮನ ಹರಿಸಲಾಯಿತು. ೧೯೩೫ರಲ್ಲಿ ಭಾರತೀಯ ರಿಸರ್ವ್ ಬ್ಯಾಂಕ್‌ನ ಸ್ಥಾಪನೆಯಾದದ್ದು ಈ ಅವಧಿಯ ಪ್ರಮುಖ ಘಟನೆ. ಮದ್ರಾಸ್, ಮೈಸೂರು ಮುಂಬಯಿಗಳಲ್ಲಿ ಭೂ ಅಡಮಾನ ಬ್ಯಾಂಕುಗಳು ಆರಂಭಗೊಂಡವು. ೧೯೩೭ರಲ್ಲಿ ರಿಸರ್ವ್ ಬ್ಯಾಂಕ್ ವಿವಿದೋದ್ಧೇಶ ಸಹಕಾರ ಸಂಘಗಳನ್ನು ಸ್ಥಾಪಿಸಬೇಕಾದ ಅವಶ್ಯಕತೆಯನ್ನು ಒತ್ತಿ ಹೇಳಿತು[೨೨].

**ಪುನಶ್ಚೇತನದ ಹಂತ (೧೯೩೯-೧೯೪೬)**

ಈ ಹಂತದಲ್ಲಿ ಸಹಕಾರ ಚಳುವಳಿಯಲ್ಲಿ ಪುನಶ್ಚೇತನ ಕಂಡು ಬಂದಿತು. ಎರಡನೆಯ ಮಹಾಯುದ್ಧ ಸಹಕಾರ ಚಳುವಳಿಯ ಮೇಲೆ ಮಹತ್ವದ ಪರಿಣಾಮ ಬೀರಿತು. ಈ ಅವಧಿಯಲ್ಲಿ ಕೃಷಿ ಉತ್ಪನ್ನಗಳ ಬೆಲೆ ಏರಿಕೆಯಿಂದಾಗಿ ರೈತರ ಸಾಲ ಮರುಪಾವತಿಯ ಸಾಮರ್ಥ್ಯ ಹೆಚ್ಚಾಯಿತು ಮತ್ತು ಅವರು ತಮ್ಮ ಸಾಲಗಳನ್ನು ತೀರಿಸಲು ಕೂಡಾ ಸಮರ್ಥರಾದರು. ೧೯೩೮-೩೯ರ ಅವಧಿಯಲ್ಲಿ ೧೪.೦೫ ಕೋಟಿಯಷ್ಟಿದ್ದ ಬಾಕಿ ಸಾಲದ ಮೊತ್ತ ೧೯೪೫-೪೬ ರಲ್ಲಿ ೮.೫೨ ಕೋಟಿಗೆ ಇಳಿದದ್ದೇ ಇದಕ್ಕೆ ಸಾಕ್ಷಿ. ೧೯೩೮-೩೯ರ ಅವಧಿಯಲ್ಲಿ ೧,೨೨,೦೦೦ ದಷ್ಟಿದ್ದ ಸಹಕಾರ ಸಂಘಗಳ ಸಂಖ್ಯೆ ೧೯೪೫-೪೬ರಲ್ಲಿ ೧,೭೨,೦೦೦ ಕ್ಕೇರಿದ್ದು ಸಹಕಾರ ಚಳುವಳಿ ಆಗ ಅಭಿವೃದ್ಧಿ ಪಥದಲ್ಲಿ ಸಾಗುತ್ತಿತ್ತು ಎನ್ನುವುದನ್ನು ಸೂಚಿಸುತ್ತದೆ[೨೩].

ಈ ಅವಧಿಯಲ್ಲಾದ ಇನ್ನೊಂದು ಪ್ರಗತಿಯೆಂದರೆ ಸಹಕಾರ ಕ್ಷೇತ್ರದಲ್ಲಿ ಸಾಲೇತರ ಸಂಘಗಳಿಗೆ ಹೆಚ್ಚಿನ ಮಹತ್ವ ದೊರೆತು ಹೆಚ್ಚಿನ ಸಂಖ್ಯೆಯಲ್ಲಿ ಸಾಲೇತರ ಸಂಘಗಳು ಸಂಘಟನೆಯಾದವು. ಹೆಚ್ಚಿನ ಸಂಖ್ಯೆಯಲ್ಲಿ ಗ್ರಾಹಕರ ಸಂಘಗಳೂ ಕೂಡಾ ಸಂಘಟಿಸಲ್ಪಟ್ಟವು. ಮಾರಾಟ ಸಂಘಗಳು, ಕೈಗಾರಿಕಾ ಸಹಕಾರ ಸಂಘಗಳು, ವಸತಿ ನಿರ್ಮಾಣ ಸಹಕಾರ ಸಂಘಗಳು ಹೆಚ್ಚಿನ ಸಂಖ್ಯೆಯಲ್ಲಿ ಸ್ಥಾಪನೆಯಾದವು[೨೪].

೧೯೪೪ರಲ್ಲಿ ಭಾರತ ಸರಕಾರ ನೇಮಿಸಿದ ಗಾಡ್ಗಿಲ್ ಸಮಿತಿ ಮತ್ತು ೧೯೪೫ರಲ್ಲಿ ನೇಮಿಸಲ್ಪಟ್ಟ ಸಹಕಾರ ಯೋಜನಾ ಸಮಿತಿಗಳು (Co-operative Planning Committee,

ಸರಯ್ಯಾ ಕಮಿಟ) ಸಹಕಾರ ಚಳುವಳಿಯ ಬೆಳವಣಿಗೆಗೆ ಅಗತ್ಯವಾದ ಕೆಲವು ಶಿಫಾರಸುಗಳನ್ನು ಮಾಡಿದವು[೨೫]. ಹೀಗೆ ಸ್ವಾತಂತ್ರ್ಯ ಪೂರ್ವದಲ್ಲಿ ಸಹಕಾರ ಚಳುವಳಿ ಹಲವು ಹಂತಗಳಲ್ಲಿ ಬೆಳೆದು ಬಂದಿದೆ. ಈ ಹಂತದಲ್ಲಿ ಸಹಕಾರ ಚಳುವಳಿಯ ಬೆಳವಣಿಗೆ ಏಕರೂಪವಾಗಿರಲಿಲ್ಲ.

**ಸ್ವಾತಂತ್ರ್ಯಾ ನಂತರದ ಬೆಳವಣಿಗೆ:**

ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕಿದ ಮೇಲೆ ಸಹಕಾರ ಚಳುವಳಿ ಒಂದು ಹೊಸ ಆಯಾಮವನ್ನು ಪ್ರವೇಶಿಸಿತು. ಸ್ವಾತಂತ್ರ್ಯ ಸಿಕ್ಕಿದ ಆರಂಭದಲ್ಲಿ ದೇಶ ವಿಭಜನೆಯ ಫಲವಾಗಿ ನಿರಾಶ್ರಿತರ ಸಮಸ್ಯೆ ಉಂಟಾದಾಗ ಪ್ರತಿಯೊಂದು ರಾಜ್ಯದಲ್ಲಿಯೂ ಸಹಕಾರ ಸಂಘಗಳು ನಿರಾಶ್ರಿತರಿಗೆ ಪುನರ್ವಸತಿ ಕಲ್ಪಿಸುವಲ್ಲಿ ಪ್ರಮುಖ ಪಾತ್ರ ವಹಿಸಿದವು. ಯುದ್ಧದಲ್ಲಿ ಹೋರಾಡಿದ ಸೈನಿಕರ ಪುನರ್ವಸತಿಗೂ ಸಹಕಾರ ಸಂಘಗಳು ಸಹಕರಿಸಿದವು[೨೬].

ಸ್ವಾತಂತ್ರ್ಯಾ ನಂತರ ಸರಕಾರ ಯೋಜನಾಬದ್ಧ ಆರ್ಥಿಕ ಅಭಿವೃದ್ಧಿ ನೀತಿಯನ್ನು (Policy of Planned Economic Development) ಕೈಗೆತ್ತಿಕೊಂಡಿತು. ಆರ್ಥಿಕ ಯೋಜನೆಗಳ ಉದ್ದೇಶವನ್ನು ಪೂರೈಸಿಕೊಳ್ಳಲು ಸಹಕಾರ ಒಂದು ಪರಿಣಾಮಕಾರಿ ಮುಖ್ಯ ಸಾಧನವಾಗಿ ಪರಿಗಣಿಸಲ್ಪಟ್ಟಿತು[೨೭].

ಆಗ ಪ್ರಧಾನ ಮಂತ್ರಿಯಾಗಿದ್ದ ಪಂಡಿತ್ ಜವಹರಲಾಲ್ ನೆಹರೂರವರು ಸಹಕಾರವನ್ನು ಭಾರತೀಯ ಆರ್ಥಿಕ ಯೋಜನೆಗಳ ತಳಹದಿಯನ್ನಾಗಿ ಮಾಡುವ ಇಚ್ಛೆ ಹೊಂದಿದ್ದರು. ಅವರು ಈ ರೀತಿ ಹೇಳಿದ್ದಾರೆ. "ಭಾರತವನ್ನು ಸಹಕಾರ ಚಳುವಳಿಯೊಂದಿಗೆ ಇನ್ನೂ ಖಚಿತವಾಗಿ ಹೇಳಬೇಕೆಂದರೆ ಸಹಕಾರದೊಂದಿಗೆ ಮಿತಗೊಳಿಸಬೇಕೆಂದು ನನ್ನ ನಿರೀಕ್ಷೆಯಾಗಿದೆ. ಸ್ಥೂಲವಾಗಿ ಹೇಳುವುದಾದರೆ ಭಾರತದ ಪ್ರತಿಯೊಂದು ಹಳ್ಳಿಯಲ್ಲಿಯೂ ಅಂತೆಯೇ ಎಲ್ಲಾ ಕಡೆಯೂ ಅದು ಮುಖ್ಯ ಚಟುವಟಿಕೆಯಾಗಬೇಕು. ಸಹಕಾರ ಮಾರ್ಗವೆಂಬುದು ಭಾರತದ ಸಾಮಾನ್ಯ ಚಿಂತನೆಯಾಗಬೇಕು"[೨೮]. ೧೯೫೩ ರಿಂದ ಭಾರತದಲ್ಲಿ ಆಚರಣೆಗೆ ಬಂದ ಸಹಕಾರ ಸಪ್ತಾಹ ಆಚರಣೆಯನ್ನು ೧೯೭೬ರ ನಂತರ ನೆಹರೂರವರ ಹುಟ್ಟು ಹಬ್ಬದ ದಿನದಿಂದ ಒಂದು ವಾರಗಳ ಕಾಲ ಆಚರಿಸಲಾಗುತ್ತಿದೆ. ಪಂಚವಾರ್ಷಿಕ ಯೋಜನೆಗಳಲ್ಲಿ ಸಹಕಾರಿ ಕ್ಷೇತ್ರಕ್ಕೆ ಹೆಚ್ಚಿನ ಮಹತ್ವ ನೀಡಲಾಯಿತು. ಸಹಕಾರ ಚಳುವಳಿಯನ್ನು ಬಲಪಡಿಸಲು ಸಾಕಷ್ಟು ಅವಕಾಶ ಕಲ್ಪಿಸಿ ಅನುದಾನಗಳನ್ನು ಒದಗಿಸಲಾಯಿತು. ಸಹಕಾರ ಚಳುವಳಿ ಹಲವು ಎಡರು ತೊಡರುಗಳೊಂದಿಗೆ ಇಂದಿಗೂ ತನ್ನ ಅಸ್ಥಿತ್ವವನ್ನು ಉಳಿಸಿಕೊಂಡಿದೆ. ಪ್ರಸ್ತುತ ದೇಶದ ಸಹಕಾರಿ ರಂಗಕ್ಕೆ ಜಾಗತೀಕರಣ, ಉದಾರೀಕರಣ, ಖಾಸಗೀಕರಣಗಳು ಸವಾಲು ಒಡ್ಡುತ್ತಿವೆ. ರಾಜಕೀಯ ಹಸ್ತಕ್ಷೇಪ, ಸಹಕಾರ ಸಂಸ್ಥೆಗಳ ನಡುವೆ ಅಸಹಕಾರ, ರಾಷ್ಟ್ರೀಯ ಸಹಕಾರ ನೀತಿ ಇಲ್ಲದಿರುವಿಕೆ ಮುಂತಾದ ಹಲವಾರು

ಸಮಸ್ಯೆಗಳನ್ನು ಸಹಕಾರಿ ಕ್ಷೇತ್ರ ಎದುರಿಸುತ್ತಿದೆ. ಸಮಸ್ಯೆಗಳನ್ನು ನಿವಾರಿಸಿಕೊಂಡು ಸಹಕಾರಿ ಆಂದೋಲನವನ್ನು ಇನ್ನಷ್ಟು ಬಲಪಡಿಸುವ ಅಗತ್ಯವಿದೆ.

## ೨.೪ ಕರ್ನಾಟಕದಲ್ಲಿ ಸಹಕಾರ ಚಳುವಳಿ

ಭಾರತದಲ್ಲಿ ಸಹಕಾರ ಚಳುವಳಿಯ ಇತಿಹಾಸದಲ್ಲಿ ಕರ್ನಾಟಕಕ್ಕೆ ವಿಶಿಷ್ಠ ಸ್ಥಾನವಿದೆ. ಪ್ರಸ್ತುತ ಭಾರತದಲ್ಲಿರುವ ಅನೇಕ ಸಹಕಾರಿ ಸಂಸ್ಥೆಗಳನ್ನು ಪ್ರಾಯೋಗಿಕವಾಗಿ ಆರಂಭಿಸಿದ್ದು ಕರ್ನಾಟಕದಲ್ಲಿ. ಈ ಕಾರಣಕ್ಕಾಗಿಯೇ ಕರ್ನಾಟಕವನ್ನು "ಭಾರತೀಯ ಸಹಕಾರಿ ಆಂದೋಲನದ ತೊಟ್ಟಿಲು" ಎಂದು ಕರೆಯಲಾಗುತ್ತದೆ[೨೯]. ಭಾರತದಲ್ಲಿ ತನ್ನದೇ ಆದಂತಹ ಸ್ವತಂತ್ರ ಸಹಕಾರಿ ಸಂಘಗಳ ಕಾಯಿದೆಯನ್ನು ಮೊದಲ ಬಾರಿಗೆ ಜಾರಿಗೆ ತಂದದ್ದು ಅಂದಿನ ಮೈಸೂರು ಸಂಸ್ಥಾನ[೩೦]. ಸ್ವಾತಂತ್ರ್ಯ ಪೂರ್ವದಲ್ಲಿ ಕರ್ನಾಟಕದ ಅಂದಿನ ಮುಂಬೈ ಕರ್ನಾಟಕ, ಮೈಸೂರು ಸಂಸ್ಥಾನ, ಮದ್ರಾಸ್ ಕರ್ನಾಟಕ ಮತ್ತು ಕೊಡಗುಗಳಲ್ಲಿ ಸಹಕಾರ ಚಳುವಳಿ ಹೆಚ್ಚು ವ್ಯಾಪಕವಾಗಿ ಹರಡಿತ್ತು.

### ಮುಂಬೈ ಕರ್ನಾಟಕದಲ್ಲಿ ಸಹಕಾರ ಚಳುವಳಿ

ಸ್ವಾತಂತ್ರ್ಯ ಪೂರ್ವದಲ್ಲಿ ಮುಂಬೈ ಕರ್ನಾಟಕ ಭಾಗ ಸಹಕಾರ ಚಳುವಳಿಯಲ್ಲಿ ಪ್ರಮುಖ ಪಾತ್ರ ವಹಿಸಿತ್ತು. ದೇಶದಲ್ಲೇ ಪ್ರಥಮ ಕೃಷಿ ಪತ್ತಿನ ಸಹಕಾರ ಸಂಘ ಆರಂಭವಾದುದು ಮುಂಬೈ ಪ್ರಾಂತ್ಯದ ಭಾಗವಾಗಿದ್ದ ಧಾರವಾಡ ಜಿಲ್ಲೆಯ ಕಣಗಿನ ಹಾಳದಲ್ಲಿ (ಇಂದು ಗದಗ ಪ್ರತ್ಯೇಕ ಜಿಲ್ಲೆಯಾಗಿದೆ) ಈ ಸಹಕಾರ ಸಂಘವು ೮-೫-೧೯೦೫ರಲ್ಲಿ ಶ್ರೀ ಸಿದ್ಧನ ಗೌಡ ಸಣ್ಣರಾಮನ ಗೌಡ ಪಾಟೀಲರ ನೇತೃತ್ವದಲ್ಲಿ ಸ್ಥಾಪಿಸಲ್ಪಟ್ಟಿತು. ದೇಶದ ೨ನೇ ಕೃಷಿ ಪತ್ತಿನ ಸಹಕಾರ ಸಂಘ ಕೂಡಾ ಆರಂಭವಾದುದು ಗದಗ ತಾಲೂಕಿನ ಹುಲುಕೋಟಿಯಲ್ಲಿ. ೨೯-೧೦-೧೯೦೫ರಲ್ಲಿ ಗದಗ ತಾಲೂಕಿನ ಬೆಟಗೇರಿ ಗ್ರಾಮದಲ್ಲಿ ಆರಂಭಗೊಂಡ ಬೆಟಗೇರಿ ಕ್ರೆಡಿಟ್ ಕೋ ಓಪರೇಟಿವ್ ಸೊಸೈಟಿ ಭಾರತದ ಮೊಟ್ಟಮೊದಲ ಪಟ್ಟಣ ಸಹಕಾರ ಬ್ಯಾಂಕ್. ೧೯೧೫ರಲ್ಲಿ ಸ್ಥಾಪನೆಯಾದ ಗದಗ ಕೋ ಓಪರೇಟಿವ್ ಕಾಟನ್ ಸೇಲ್ಸ್ ಸೊಸೈಟಿ. ಲಿಮಿಟೆಡ್, ೧೯೪೬ರಲ್ಲಿ ಧಾರವಾಡದ ಸ್ಥಾಪನೆಯಾದ ಬರಹಗಾರರ ಸಹಕಾರ ಸಂಘ ಮುಂತಾದ ಸಂಘಗಳು ಮುಂಬೈ ಕರ್ನಾಟಕ ಭಾಗದಲ್ಲಿದ್ದ ಪ್ರಮುಖ ಸಹಕಾರ ಸಂಘಗಳು[೩೧]. ೧೯೨೦-೧೯೩೦ರ ಮಧ್ಯೆ ಮುಂಬೈ ಕರ್ನಾಟಕ ಪ್ರಾಂತ್ಯದಲ್ಲಿ ಸಹಕಾರ ಚಳುವಳಿಯನ್ನು ಪ್ರೋತ್ಸಾಹಿಸಲು ತಾಲೂಕು ಮತ್ತು ಜಿಲ್ಲಾ ಮಟ್ಟದ ಸಹಕಾರ ಸಮ್ಮೇಳನಗಳನ್ನು ಆಯೋಜಿಸಲಾಗಿತ್ತು. ಸಹಕಾರ ತತ್ವವನ್ನು ನಾಟಕಗಳ ಮೂಲಕ ಗ್ರಾಮೀಣ ಪ್ರದೇಶಗಳಲ್ಲಿ ಪ್ರಚಾರಪಡಿಸಲು ಧಾರವಾಡದ ಅಮ್ಮಿನಭಾವಿಯಲ್ಲಿ ಒಂದು ನಾಟಕ ತಂಡ ಪ್ರಯತ್ನ ಪಟ್ಟಿತ್ತು[೩೨].

**ಮೈಸೂರು ಸಂಸ್ಥಾನದಲ್ಲಿ ಸಹಕಾರ ಚಳುವಳಿ**

ಭಾರತದಲ್ಲಿ ಅಧಿಕೃತವಾಗಿ ಸಹಕಾರ ಚಳುವಳಿ ಆರಂಭಗೊಳ್ಳುವ ಮೊದಲೇ ಸಹಕಾರ ತತ್ವಗಳ ಆಧಾರದ ಮೇಲೆ ಮೈಸೂರು ಸಂಸ್ಥಾನದಲ್ಲಿ ವ್ಯವಸಾಯ ಸಹಕಾರಿ ಬ್ಯಾಂಕುಗಳು ೧೮೯೪ರಲ್ಲಿ ಸ್ಥಾಪಿಸಲ್ಪಟ್ಟವು. ೧೯೦೫ರಲ್ಲಿ ಜೂನ್ ತಿಂಗಳಲ್ಲಿ ಮೈಸೂರು ಸಂಸ್ಥಾನ "ಕೋ ಓಪರೇಟಿವ್ ರೆಗ್ಯುಲೇಶನ್ III" ನ್ನು ಜಾರಿಗೊಳಿಸುವ ಮೂಲಕ ಸಂಸ್ಥಾನದಲ್ಲಿ ಸಹಕಾರ ಚಳುವಳಿಗೆ ಅಧಿಕೃತ ಚಾಲನೆ ನೀಡಿತು. ೮-೧೨-೧೯೦೫ರಲ್ಲಿ ನೋಂದಾಯಿಸಲ್ಪಟ್ಟ "ಬೆಂಗಳೂರು ಸಿಟಿ ಕನ್‌ಸ್ಯೂಮರ್ಸ್ ಕೋ ಓಪರೇಟಿವ್ ಸೊಸ್ಯಾಟಿ" ಅಂದಿನ ಮೈಸೂರು ಸಂಸ್ಥಾನದಲ್ಲಿ ಆರಂಭಗೊಂಡ ಪ್ರಥಮ ಸಹಕಾರ ಸಂಘ. ಮೈಸೂರು ಸರಕಾರವು ಸಹಕಾರ ಚಳುವಳಿಯ ಬೆಳವಣಿಗೆಗೆ ಹೆಚ್ಚಿನ ಪ್ರೋತ್ಸಾಹ ನೀಡಿತು. ಮೈಸೂರು ಸರಕಾರವು ಯೂರೋಪ್ ಮತ್ತು ಇಂಗ್ಲೆಂಡಿನಲ್ಲಿ ಸಹಕಾರ ಆಂದೋಲನ ಸಾಧಿಸಿದ ಪ್ರಗತಿಯನ್ನು ಅಧ್ಯಯನ ಮಾಡಿ ಅದನ್ನು ರಾಜ್ಯದಲ್ಲಿ ಅಳವಡಿಸುವ ಉದ್ದೇಶಕ್ಕಾಗಿ ೧೯೦೮ರಲ್ಲಿ ಆರ್. ರಂಗರಾವ್ ಎಂಬವರನ್ನು ಅಧ್ಯಯನ ಪ್ರವಾಸಕ್ಕೆ ಕಳುಹಿಸಿಕೊಟ್ಟಿತು. ಮತ್ತು ಸಹಕಾರಿ ಸಂಸ್ಥೆಗಳನ್ನು ಮೇಲ್ವಿಚಾರಣೆ ಮಾಡಲು ಮೇಲ್ವಿಚಾರಕರನ್ನು ನೇಮಿಸಿ ಸಹಕಾರ ಚಳುವಳಿಗೆ ಪ್ರೋತ್ಸಾಹ ನೀಡಿತು[೩೩].

೧೯೦೫ರ ಸ್ವದೇಶ ಚಳುವಳಿಯ ಸಂದರ್ಭದಲ್ಲಿ ಮೈಸೂರು ಸಂಸ್ಥಾನದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಸಹಕಾರಿ ಸಂಘಗಳು ನೋಂದಾಯಿಸಲ್ಪಟ್ಟವು. ಆದರೆ ಅವುಗಳಲ್ಲಿ ಬಹುಪಾಲು ದೀರ್ಘಕಾಲ ಬಾಳಲಿಲ್ಲ. ಸಹಕಾರಿ ವಲಯದಲ್ಲಿ ಗೃಹ ನಿರ್ಮಾಣ ಸಂಘ ದೇಶದಲ್ಲಿಯೇ ಪ್ರಪ್ರಥಮವಾಗಿ ಆರಂಭವಾದುದು ಬೆಂಗಳೂರಿನಲ್ಲಿ. ೧೯೧೫ರಲ್ಲಿ ಬೆಂಗಳೂರಿನಲ್ಲಿ ರಾಜ್ಯವ್ಯಾಪ್ತಿಯ "ಮೈಸೂರು ಪ್ರೊವಿನ್ಷಿಯಲ್ ಕೋ ಓಪರೇಟಿವ್ ಬ್ಯಾಂಕ್" (Mysore Provincial Co-operative Bank) ಸ್ಥಾಪಿಸುವ ಮೂಲಕ ಸಹಕಾರಿ ಆಂದೋಲನಕ್ಕೆ ಆರ್ಥಿಕ ಭದ್ರತೆಯನ್ನು ಒದಗಿಸುವ ಪ್ರಯತ್ನ ಮಾಡಲಾಯಿತು. ಮುಂದೆ ಇದೇ ಬ್ಯಾಂಕಿನ ಹೆಸರನ್ನು "ಮೈಸೂರು ಸ್ಟೇಟ್ ಕೋ ಓಪರೇಟಿವ್ ಅಪೆಕ್ಸ್ ಬ್ಯಾಂಕ್" ಎಂದು ಬದಲಾಯಿಸಲಾಯಿತು[೩೪].

ಬೆಳೆಯುತ್ತಿರುವ ಸಹಕಾರ ಚಳುವಳಿಗೆ ಉತ್ತಮ ಮಾರ್ಗದರ್ಶನ ತರಬೇತಿ, ಶಿಕ್ಷಣ ಮತ್ತು ಪ್ರಚಾರ ನೀಡುವ ಉದ್ದೇಶದಿಂದ ಮೈಸೂರು ಸರಕಾರ ೧೯೨೪ರಲ್ಲಿ ಬೆಂಗಳೂರಿನಲ್ಲಿ ಸಹಕಾರ ಪ್ರಚಾರ ಸಂಘವನ್ನು (ಮೈಸೂರು ಪ್ರೊವಿನ್ಷಿಯಲ್ ಕೋ ಓಪರೇಟಿವ್ ಇನ್‌ಸ್ಟಿಟ್ಯೂಟ್ – ಈಗ ಅದು ಕರ್ನಾಟಕ ರಾಜ್ಯ ಸಹಕಾರ ಮಹಾ ಮಂಡಲವಾಗಿದೆ) ಪ್ರಾರಂಭಿಸಿತು[೩೫]. ಸಹಕಾರ ಚಳುವಳಿಯನ್ನು ಪ್ರಚಾರ ಪಡಿಸುವ ಸಲುವಾಗಿ ೧೯೨೫ರಲ್ಲಿ ಸಹಕಾರ ಪತ್ರಿಕೆಯನ್ನು ಕೂಡಾ ಆರಂಭಿಸಲಾಯಿತು. ೧೯೩೪ರ ನಂತರ ಅದು ಕನ್ನಡ ಹಾಗೂ ಆಂಗ್ಲ ಭಾಷೆಯಲ್ಲಿ ಪ್ರಕಟಗೊಳ್ಳಲು ಆರಂಭವಾಯಿತು[೩೬].

ಹೀಗೆ ಸ್ವಾತಂತ್ರ್ಯ ಪೂರ್ವದಲ್ಲಿ ಮೈಸೂರು ಸಂಸ್ಥಾನದಲ್ಲಿ ಸಹಕಾರ ಚಳುವಳಿ ಉತ್ತಮವಾಗಿ ಬೆಳೆದು ಬಂದಿರುವುದನ್ನು ನೋಡಬಹುದು.

ಮದ್ರಾಸ್ ಪ್ರಾಂತ್ಯದ ಭಾಗವಾಗಿದ್ದ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆ ಕೂಡಾ ಸಹಕಾರ ಚಳುವಳಿಯಲ್ಲಿ ಪ್ರಮುಖ ಪಾತ್ರ ವಹಿಸಿತ್ತು. (ಮೂರನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ)

**ನವ ಮೈಸೂರು ರಾಜ್ಯದಲ್ಲಿ ಸಹಕಾರ ಚಳುವಳಿ**

೧೯೫೬ರಲ್ಲಿ ನವ ಮೈಸೂರು ರಾಜ್ಯ ಅಸ್ಥಿತ್ವಕ್ಕೆ ಬಂದ ಮೇಲೆ ರಾಜ್ಯದಲ್ಲಿ ಸಹಕಾರ ಚಳುವಳಿ ಇನ್ನಷ್ಟು ವಿಸ್ತೃತಗೊಂಡಿತು. ಅಲ್ಲಿಯವರೆಗೆ ರಾಜ್ಯದಲ್ಲಿ ೫ ಬಗೆಯ ಸಹಕಾರಿ ಕಾನೂನುಗಳು ಅಸ್ಥಿತ್ವದಲ್ಲಿದ್ದವು.

೧) ೧೯೨೫ರ ಮುಂಬಯಿ ಸಹಕಾರಿ ಕಾಯಿದೆ ಮುಂಬಯಿ ಕರ್ನಾಟಕದಲ್ಲಿ

೨) ೧೯೪೮ರ ಮೈಸೂರು ಸಹಕಾರಿ ಕಾನೂನು ಹಳೆ ಮೈಸೂರಿನಲ್ಲಿ

೩) ೧೯೩೨ರ ಸಹಕಾರ ಕಾಯಿದೆ ಮದ್ರಾಸ್ ಕರ್ನಾಟಕದಲ್ಲಿ

೪) ೧೯೩೬ರ ಕೊಡಗು ಸಹಕಾರಿ ಕಾಯಿದೆ ಕೊಡಗಿನಲ್ಲಿ ಮತ್ತು

೫) ೧೯೫೨ರ ಹೈದರಾಬಾದ್ ಸಹಕಾರಿ ಕಾಯಿದೆ ಹೈದರಾಬಾದ್ ಕರ್ನಾಟಕದಲ್ಲೂ ಅಸ್ಥಿತ್ವದಲ್ಲಿದ್ದವು.

ಈ ಎಲ್ಲಾ ಕಾನೂನುಗಳನ್ನು ಕ್ರೋಢೀಕರಿಸಿ ೧೯೫೯ರಲ್ಲಿ ಕರ್ನಾಟಕ ಸಹಕಾರಿ ಕಾಯಿದೆಯನ್ನು ರೂಪಿಸಲಾಯಿತು[೩೭]. ಈ ಕಾಯಿದೆ ಹಲವು ಬಾರಿ ತಿದ್ದುಪಡಿಗೊಂಡು ಈಗಲೂ ಅಸ್ಥಿತ್ವದಲ್ಲಿದೆ. ಸರಕಾರದ ಹಸ್ತಕ್ಷೇಪವಿಲ್ಲದೆ ಸಹಕಾರಿ ಸಂಸ್ಥೆಗಳು ನಿಜವಾದ ಅರ್ಥದಲ್ಲಿ ಸ್ವತಂತ್ರವಾಗಿ ಕಾರ್ಯ ನಿರ್ವಹಿಸುವಂತೆ ಕೇಂದ್ರ ಸರಕಾರವು ೧೯೯೭ರಲ್ಲಿ ರೂಪಿಸಿದ ಸೌಹಾರ್ದ ಸಹಕಾರ ಕಾಯಿದೆಯನ್ನು ಅನುಸರಿಸಿ ಕರ್ನಾಟಕ ರಾಜ್ಯ ಸರಕಾರವು ಕೂಡಾ ಕರ್ನಾಟಕ ಸೌಹಾರ್ದ ಸಹಕಾರಿ ಕಾಯಿದೆಯನ್ನು ಜನವರಿ ೧, ೨೦೦೧ರಲ್ಲಿ ಜಾರಿಗೆ ತಂದಿತು[೩೮]. ಇಂದು ರಾಜ್ಯದಲ್ಲಿ ವಿವಿಧ ಬಗೆಯ ಸಹಕಾರ ಸಂಘಗಳು ಅಸ್ಥಿತ್ವದಲ್ಲಿದೆ. ಸಹಕಾರ ಚಳುವಳಿ ರಾಜ್ಯದ ಎಲ್ಲಾ ಭಾಗಗಳಿಗೂ ವ್ಯಾಪಿಸಿದೆ.

ಭಾರತದ ಸಹಕಾರ ಚಳುವಳಿಯ ಇತಿಹಾಸವನ್ನು ಗಮನಿಸಿದಾಗ ಪ್ರಾಚೀನ ಭಾರತದಲ್ಲಿಯೇ ಸಹಕಾರ ಪದ್ಧತಿ ಆಚರಣೆಯಲ್ಲಿರುವುದನ್ನು ನೋಡಬಹುದು. ಆಗ ಸಹಕಾರವೆಂಬುದು ಒಂದು ಆರ್ಥಿಕ ಪರಿಕಲ್ಪನೆಯಾಗಿರದೆ ಒಂದು ಜೀವನ ಮಾರ್ಗವಾಗಿತ್ತು. ಇದಕ್ಕೆ ಹೋಲಿಸಿದಾಗ ಭಾರತದಲ್ಲಿ ಬ್ರಿಟಿಷರು ಜಾರಿಗೊಳಿಸಿದ ಸಹಕಾರ ಪದ್ಧತಿ ಪ್ರಾಚೀನ ಭಾರತದಲ್ಲಿದ್ದ ಸಹಕಾರ ಪದ್ಧತಿಗಿಂತ ಭಿನ್ನವಾಗಿರುವುದನ್ನು ಕಾಣಬಹುದು. ಬ್ರಿಟಿಷ್ ಸರಕಾರ ಭಾರತದಲ್ಲಿ ಸಹಕಾರ ಪದ್ಧತಿಯನ್ನು

ಪಾಶ್ಚಿಮಾತ್ಯ ಸಹಕಾರ ತತ್ವಗಳಿಗನುಗುಣವಾಗಿ ಒಂದು ಆರ್ಥಿಕ ಪರಿಕಲ್ಪನೆಯಾಗಿ ಜಾರಿಗೊಳಿಸಿರುವುದನ್ನು ಕಾಣಬಹುದು.

ಸ್ವಾತಂತ್ರ್ಯ ಪೂರ್ವದಲ್ಲಿ ಬ್ರಿಟಿಷ್ ಭಾರತದಲ್ಲಿ ಸಹಕಾರ ಚಳುವಳಿ ಜನರು ಸ್ವಯಂ ಪೂರ್ತಿಯಿಂದ ಆರಂಭಿಸಿದ ಚಳುವಳಿಯಾಗಿರದೆ ಸರಕಾರ ನಿರ್ದೇಶಿಸಿ ನಡೆಸಿಕೊಂಡು ಬಂದಿರುವ ಚಳುವಳಿಯಾಗಿ ಕಂಡು ಬರುತ್ತದೆ. ಬ್ರಿಟಿಷ್ ಸರಕಾರ ಸಹಕಾರ ಪದ್ಧತಿಯ ಅನುಷ್ಠಾನಕ್ಕಾಗಿ ಕಾಯಿದೆಗಳನ್ನು ಜಾರಿಗೆ ತಂದು ಸಹಕಾರ ಚಳುವಳಿಗೆ ಚಾಲನೆ ನೀಡಿತೇ ಹೊರತು ಸಹಕಾರ ಕ್ಷೇತ್ರದ ಬೆಳವಣಿಗೆಗೆ ಹೆಚ್ಚಿನ ಹಣಕಾಸಿನ ನೆರವನ್ನು ಒದಗಿಸಿಕೊಡಲಿಲ್ಲ. ಸ್ವಾತಂತ್ರ್ಯ ಪೂರ್ವದಲ್ಲಿ ದೇಶದಾದ್ಯಂತ ಸಹಕಾರ ಚಳುವಳಿಯ ಬೆಳವಣಿಗೆಯೂ ಏಕರೂಪವಾಗಿರಲಿಲ್ಲ. ಬ್ರಿಟಿಷರ ಅಧೀನದಲ್ಲಿದ್ದ ಪ್ರಾಂತ್ಯಗಳಲ್ಲಿ ಸಹಕಾರ ಚಳುವಳಿ ಹೆಚ್ಚು ಪ್ರಬಲವಾಗಿತ್ತು. (ಮುಂಬೈ, ಮದರಾಸು, ಪಂಜಾಬ್, ಕೊಡಗು, ಮೈಸೂರು ಸಂಸ್ಥಾನ) ಉಳಿದ ಭಾಗಗಳಲ್ಲಿ ಸಹಕಾರ ಚಳುವಳಿ ಹೆಚ್ಚು ವ್ಯಾಪಕವಾಗಿ ಪಸರಿಸಿರಲಿಲ್ಲ.

ರಾಷ್ಟ್ರೀಯ ಚಳುವಳಿ ಮತ್ತು ಸಹಕಾರ ಚಳುವಳಿ ಜೊತೆ ಜೊತೆಗೆ ಸಾಗಿದ ಚಳುವಳಿಗಳಾಗಿದ್ದುದರಿಂದ ಸಹಜವಾಗಿ ರಾಷ್ಟ್ರೀಯ ಚಳುವಳಿಯ ಪ್ರಭಾವ ಸಹಕಾರ ಚಳುವಳಿಯ ಮೇಲಾಗಿರುವುದನ್ನು ನೋಡಬಹುದು. ದೇಶದಲ್ಲಿ ಸಹಕಾರ ತತ್ವಗಳು ಪರಿಚಯಿಸಲ್ಪಟ್ಟದ್ದು ರಾಷ್ಟ್ರೀಯ ಚಳುವಳಿಯಲ್ಲಿ ಜನರು ಸಂಘಟಿತರಾಗಿ ಭಾಗವಹಿಸಲು ಕಾರಣವಾಯಿತು ಎನ್ನಬಹುದು. ಮಹಾತ್ಮ ಗಾಂಧೀಜಿಯವರು ಕೂಡಾ ಸಹಕಾರ ಚಳುವಳಿಯ ಬಗ್ಗೆ ಈ ರೀತಿಯಾಗಿ ಹೇಳಿದ್ದಾರೆ "ಸಹಕಾರ ಚಳುವಳಿಯ ಯಶಸ್ಸನ್ನು ಸ್ಥಾಪನೆಯಾದ ಸಹಕಾರ ಸಂಘಗಳ ಸಂಖ್ಯೆಯಿಂದ ಅಳೆಯದೆ, ನೈತಿಕ ಮಟ್ಟದ ಒರೆಗಲ್ಲನ್ನು ಮುಂದಿಟ್ಟುಕೊಂಡು ಸಹಕಾರಿಗಳ ನೈತಿಕ ಪರಿಸ್ಥಿತಿಯಿಂದ ಅಳೆಯಬೇಕು"[೩೯]. ಗಾಂಧೀಜಿಯವರು ಸಹಕಾರಿ ಬೇಸಾಯ, ಹೈನುಗಾರಿಕೆ ಮತ್ತು ಇತರ ರೀತಿಯ ಉತ್ಪಾದಕರ ಸಂಘಗಳನ್ನು ಹೆಚ್ಚಿಸಲು ಕರೆ ನೀಡಿದ್ದರು. ಗಾಂಧೀಜಿಯವರ ಪ್ರಭಾವದಿಂದಾಗಿಯೇ ಹಿಂದುಳಿದ ವರ್ಗಗಳ ಸಹಕಾರ ಸಂಘಗಳು ಸ್ಥಾಪಿಸಲ್ಪಟ್ಟವು. ಗಾಂಧೀಜಿಯವರ ಸರ್ವೋದಯ ತತ್ವಗಳಲ್ಲಿಯೂ ಸಹಕಾರದ ಕಲ್ಪನೆ ಅಡಗಿರುವುದನ್ನು ನೋಡಬಹುದು. ನೆಹರೂರವರು ಸೇವಾ ಸಹಕಾರ ಸಂಘಗಳ ಪ್ರತಿಪಾದಕರಾಗಿದ್ದರು. ಸೇವಾ ಸಹಕಾರ ಸಂಘಗಳ ಬಗ್ಗೆ ಅವರು ಅಧಿಕೃತ ನೀತಿಯನ್ನು ನಾಗಪುರ ಕಾಂಗ್ರೆಸ್ ಅಧಿವೇಶನದಲ್ಲಿ ರೂಪಿಸಿದ್ದರು[೪೦].

ಹಲವು ಸಹಕಾರಿಗಳು ಸ್ವಾತಂತ್ರ್ಯ ಹೋರಾಟದಲ್ಲಿ ಕೂಡಾ ಸಕ್ರಿಯರಾಗಿದ್ದರು. ರಾಷ್ಟ್ರೀಯ ಚಳುವಳಿಯ ಪ್ರಭಾವ ಸಹಕಾರ ಚಳುವಳಿಯ ಮೇಲಾಗಿದ್ದರೂ ಸಹ ಸಹಕಾರ ಚಳುವಳಿಯಿಂದ ಸ್ವಾತಂತ್ರ್ಯ ಪೂರ್ವದಲ್ಲಿ ತೀರಾ ಬಡವರಿಗೆ ಹೆಚ್ಚಿನ ಪ್ರಯೋಜನಗಳಾದ ಹಾಗೇ ಕಾಣುವುದಿಲ್ಲ.

ಸಹಕಾರಿ ಚಳುವಳಿಯ ಹೆಚ್ಚಿನ ಲಾಭ ಪಡೆದುಕೊಂಡದ್ದು ಭೂಮಾಲೀಕರು ಮತ್ತು ಲೇವಾದೇವಿದಾರರು. ಸ್ವಾತಂತ್ರ್ಯ ಸಿಕ್ಕಿದ ನಂತರವು ಕೆಲವು ವರ್ಷಗಳ ಕಾಲ ಸಹಕಾರಿ ಸಂಘಗಳಿಂದ ಹೆಚ್ಚಿನ ಪ್ರಯೋಜನ ಪಡೆದುಕೊಂಡದ್ದು ಇದೇ ವರ್ಗ. ೧೯೫೮ – ೫೯ರಲ್ಲಿ ಭಾರತಕ್ಕೆ ಭೇಟಿಕೊಟ್ಟ ಫ್ರಾನ್ಸ್‌ನ ಡೇನಿಯಲ್ ಥಾರ್‌ನರ್, (Danial Thorner) ಭಾರತದಲ್ಲಿ ಸುಮಾರು ೧೧೭ ಸಹಕಾರಿ ಸಂಘಗಳನ್ನು ಸಂದರ್ಶಿಸಿದ್ದ. ಅವನ ಪ್ರಕಾರ ಬರೋಡಾ, ಹೈದರಾಬಾದ್, ಸೌರಾಷ್ಟ್ರ, ಮೈಸೂರು ನೆಲ್ಲೂರು, ಕಾಶ್ಮೀರಗಳಲ್ಲಿ ಸಹಕಾರ ಸಂಘಗಳಲ್ಲಿ ಸಾಹುಕಾರರು ಮತ್ತು ಭೂಮಾಲಿಕರೇ ಹೆಚ್ಚಿನ ಸಂಖ್ಯೆಯಲ್ಲಿ ಸದಸ್ಯರಾಗಿದ್ದರು. ಅವನು ದೇಶದ ಕೆಲವು ಭಾಗಗಳಲ್ಲಿ ಸರಕಾರಗಳು ಸಹಕಾರ ಸಂಸ್ಥೆಗಳಲ್ಲಿ ಹೆಚ್ಚು ಹಸ್ತಕ್ಷೇಪ ಮಾಡುತ್ತಿರುವುದನ್ನು ಕೂಡಾ ಗಮನಿಸಿದ್ದಾನೆ. ಆರ್ಥಿಕ ಪರಿಸ್ಥಿತಿ ಉತ್ತಮವಾಗಿಲ್ಲದೇ ಇರುವುದು ಸಾಮಾನ್ಯ ರೈತರು, ಕಾರ್ಮಿಕರು ಸಹಕಾರಿ ಚಳುವಳಿಯಿಂದ ಪ್ರಯೋಜನ ಪಡೆದುಕೊಳ್ಳಲು ಸಾಧ್ಯವಾಗದೇ ಇರುವುದಕ್ಕೆ ಪ್ರಮುಖ ಕಾರಣ ಎನ್ನುವುದು ಅವನ ಅಭಿಮತ[೪೧].

ಅಂದಿನ ಪರಿಸ್ಥಿತಿಗೆ ಹೋಲಿಸಿದರೆ ಇಂದು ಹೆಚ್ಚು ಸಂಖ್ಯೆಯಲ್ಲಿ ಸಾಮಾನ್ಯ ಜನರು ಈ ಚಳುವಳಿಯ ಭಾಗವಾಗಿದ್ದಾರೆ. ಕರ್ನಾಟಕದಲ್ಲೂ ಬ್ರಿಟಿಷರ ಅಧೀನಕ್ಕೆ ಒಳಪಟ್ಟ ಪ್ರಾಂತ್ಯಗಳಲ್ಲಿ ಸಹಕಾರ ಚಳುವಳಿ ಹೆಚ್ಚು ಪ್ರಬಲವಾಗಿರುವುದನ್ನು ಕಾಣಬಹುದು. ಮೈಸೂರು, ಮುಂಬೈ ಕರ್ನಾಟಕದ ಪ್ರದೇಶ, ಮದ್ರಾಸ್ ಕರ್ನಾಟಕದ ಪ್ರದೇಶ, ಕೊಡಗುಗಳಲ್ಲಿ ಸಹಕಾರ ಚಳುವಳಿ ಹೆಚ್ಚು ವ್ಯಾಪಿಸಿತ್ತು. ಈ ಎಲ್ಲಾ ಭಾಗಗಳಲ್ಲಿ ಬೇರೆ ಬೇರೆ ಸಹಕಾರಿ ಕಾನೂನುಗಳು ಕೂಡಾ ಅಸ್ಥಿತ್ವದಲ್ಲಿದ್ದವು. ೧೯೫೯ರಲ್ಲಿ ಕರ್ನಾಟಕ ಸಹಕಾರಿ ಕಾಯಿದೆ ರೂಪುಗೊಂಡ ಮೇಲೆ ಏಕರೂಪದ ಸಹಕಾರ ಕಾಯಿದೆ ಇಡೀ ರಾಜ್ಯದಲ್ಲಿ ಅಸ್ಥಿತ್ವಕ್ಕೆ ಬಂತು. ಪ್ರಸ್ತುತ ರಾಜ್ಯದಲ್ಲಿ ಸಹಕಾರ ಚಳುವಳಿ ವ್ಯಾಪಕವಾಗಿ ಪಸರಿಸಿದೆ. ಆದರೆ ರಾಜ್ಯದಲ್ಲಿ ಸಹಕಾರ ಚಳುವಳಿಯನ್ನು ಗುಣಾತ್ಮಕವಾಗಿ ಇನ್ನಷ್ಟು ಬೆಳೆಸುವ ಅವಶ್ಯಕತೆಯಿದೆ.

## ಕೊನೆ ಟಿಪ್ಪಣಿ

೧. ಕುಲಕರ್ಣಿ ಕೆ.ಆರ್.

ಥಿಯರಿ ಆ್ಯಂಡ್ ಪ್ರಾಕ್ಟೀಸ್ ಆಫ್ ಕೋ- ಓಪರೇಶನ್ ಇನ್ ಇಂಡಿಯಾ ಆ್ಯಂಡ್ ಅಬ್ರಾಡ್, ೧೯೫೮, ಪು.ಸಂ. ೧

೨. ಡಾ. ಪೀಟರ್ ವಿಲ್ಸನ್ ಪ್ರಭಾಕರ್

ನೂರರ ಮೊದಲು – "ಶತಕಾಭರಣ" ಸ್ಮರಣ ಸಂಚಿಕೆಯಲ್ಲಿ ಪ್ರಕಟಗೊಂಡ ಲೇಖನ, ೨೦೦೪ ಪು.ಸಂ. ೧

೩. ಅದೇ ಪುಟ ಸಂಖ್ಯೆ – ೨

೪. ಅದೇ ಪುಟ ಸಂಖ್ಯೆ – ೨

೫. ಹೆನ್ರಿ ಡಬ್ಲ್ಯೂ. ವೋಲ್ಫ್

ಕೋ–ಓಪರೇಶನ್ ಇನ್ ಇಂಡಿಯಾ, ೧೯೧೯, ಪು. ಸಂ. ೩

೬. ಡಾ. ಪೀಟರ್ ವಿಲ್ಸನ್ ಪ್ರಭಾಕರ್

ನೂರರ ಮೊದಲು – "ಶತಕಾಭರಣ" ಸ್ಮರಣ ಸಂಚಿಕೆಯಲ್ಲಿ ಪ್ರಕಟಗೊಂಡ ಲೇಖನ, ೨೦೦೪ ಪು.ಸಂ. ೨

೭. ಬೇಡಿ ಆರ್.ಡಿ.

ಥಿಯರಿ ಹಿಸ್ಟರಿ ಆ್ಯಂಡ್ ಪ್ರಾಕ್ಟೀಸ್ ಆಫ್ ಕೋ–ಓಪರೇಶನ್, ೧೯೭೪, ಪು.ಸಂ. ೧೨, ೧೫

೮. ಕುಲಕರ್ಣಿ ಕೆ.ಆರ್.

ಥಿಯರಿ ಆ್ಯಂಡ್ ಪ್ರಾಕ್ಟೀಸ್ ಆಫ್ ಕೋ- ಓಪರೇಶನ್ ಇನ್ ಇಂಡಿಯಾ ಆ್ಯಂಡ್ ಅಬ್ರಾಡ್, ೧೯೫೮, ಪು.ಸಂ. ೬, ೭

೯. ಅದೇ ಪುಟ ಸಂಖ್ಯೆ – ೯

೧೦. ಬೇಡಿ ಆರ್.ಡಿ.

ಥಿಯರಿ ಆ್ಯಂಡ್ ಪ್ರಾಕ್ಟೀಸ್ ಆಫ್ ಕೋ–ಓಪರೇಶನ್, ೧೯೫೮, ೧೯೭೪, ಪು.ಸಂ. ೧೫

೧೧. ಕುಲಕರ್ಣಿ ಕೆ.ಆರ್.

ಥಿಯರಿ ಆ್ಯಂಡ್ ಪ್ರಾಕ್ಟೀಸ್ ಆಫ್ ಕೋ- ಓಪರೇಶನ್ ಇನ್ ಇಂಡಿಯಾ ಆ್ಯಂಡ್ ಅಬ್ರಾಡ್, ೧೬೬೭, ಪು.ಸಂ. ೭

೧೨. ತ್ಯಾಗಿ ಆರ್.ಬಿ.

ದ ರೀಸೆಂಟ್ ಟ್ರೆಂಡ್ಸ್ ಇನ್ ಕೋ–ಓಪರೇಟಿವ್ ಮೂವ್‌ಮೆಂಟ್, ೧೯೬೭ ಪು.ಸಂ. ೯

೧೩. ಡಾ. ಬಿ.ಎಸ್. ಮಾಥುರ್

ಕೋ–ಓಪರೇಶನ್ ಇನ್ ಇಂಡಿಯಾ, ೧೯೭೭, ಪು.ಸಂ. ೬೪, ೬೭

೧೪. ಡಾ. ಪೀಟರ್ ವಿಲ್ಸನ್ ಪ್ರಭಾಕರ್

ನೂರರ ಮೊದಲು – "ಶತಕಾಭರಣ" ಸ್ಮರಣ ಸಂಚಿಕೆಯಲ್ಲಿ ಪ್ರಕಟಗೊಂಡ ಲೇಖನ, ೨೦೦೪ ಪು.ಸಂ. ೨

೧೫. ತ್ಯಾಗಿ ಆರ್.ಬಿ.

ದ ರೀಸೆಂಟ್ ಟ್ರೆಂಡ್ಸ್ ಇನ್ ಕೋ–ಓಪರೇಟಿವ್ ಮೂವ್‌ಮೆಂಟ್, ೧೯೬೭ ಪು.ಸಂ. ೧೦, ೧೧

೧೬. ಬಣಕಾರ

ಸಹಕಾರ ಚಿಂತನ, ೨೦೦೫, ಪು.ಸಂ. ೫

೧೭. ಹೆನ್ರಿ ಡಬ್ಲ್ಯೂ. ವೋಲ್ಫ್

ಕೋ–ಓಪರೇಶನ್ ಇನ್ ಇಂಡಿಯಾ, ೧೯೧೯, ಪು. ಸಂ. ೧

೧೮. ಡಾ. ಬಿ.ಎಸ್. ಮಾಥುರ್

ಕೋ–ಓಪರೇಶನ್ ಇನ್ ಇಂಡಿಯಾ, ೧೯೭೭, ಪು.ಸಂ. ೬೭

೧೯. ಅದೇ ಪುಟ ಸಂಖ್ಯೆ – ೬೮

೨೦. ದಾಮನ್ ಪ್ರಕಾಶ್

ಕೋ–ಓಪರೇಟಿವ್ ಡೆಮಾಕ್ರಸಿ ವೈಸ್–ಆ–ವೈಸಾ (Vis-a-vis) ಮೆಂಬರ್ಸ್ ಎಜುಕೇಶನ್, ಕೋ–ಓಪರೇಟಿವ್ ಟೈಮ್ಸ್, ೧೯೮೮, ಪು.ಸಂ. ೫೪

೨೧. ಡಾ. ಬಿ.ಎಸ್. ಮಾಥುರ್

ಕೋ–ಓಪರೇಶನ್ ಇನ್ ಇಂಡಿಯಾ, ೧೯೭೭, ಪು.ಸಂ. ೭೦

೨೨. ಅದೇ ಪುಟ ಸಂಖ್ಯೆ – ೭೨

೨೩. ಅದೇ ಪುಟ ಸಂಖ್ಯೆ – ೬೮

೨೪. ತ್ಯಾಗಿ ಆರ್.ಬಿ.

ದ ರೀಸೆಂಟ್ ಟ್ರೆಂಡ್ಸ್ ಇನ್ ಕೋ–ಓಪರೇಟಿವ್ ಮೂವ್‌ಮೆಂಟ್, ೧೯೬೭ ಪು.ಸಂ. ೧೪

೨೫. ಅದೇ ಪುಟ ಸಂಖ್ಯೆ –೧೪

೨೬. ಅದೇ ಪುಟ ಸಂಖ್ಯೆ – ೧೫

೨೭. ದಾಮನ್ ಪ್ರಕಾಶ್

ಕೋ–ಓಪರೇಟಿವ್ ಡೆಮಾಕ್ರಸಿ Vis-a-vis ಮೆಂಬರ್ಸ್ ಎಜುಕೇಶನ್, ಕೋ–ಓಪರೇಟಿವ್ ಟೈಮ್ಸ್, ೧೯೮೮, ಪು.ಸಂ.೫೬

೨೮. ಎಸ್. ಶ್ರೀನಿವಾಸ ಮತ್ತು ಚನ್ನ ಬಸಪ್ಪ ಪಾಟೀಲ್

ಸಹಕಾರ ಚಿಂತನೆಯ ಇತಿಹಾಸ (ಅನುವಾದಿತ ಕೃತಿ), ೧೯೮೪, ಪು.ಸಂ. ೯೬

೨೯. ಡಾ. ಎಚ್.ಆರ್. ಕೃಷ್ಣಯ್ಯ ಗೌಡ

ಗ್ರಾಮೀಣಾಭಿವೃದ್ಧಿ, ೨೦೦೯, ಪು.ಸಂ. ೧೨೯

೩೦. ಡಾ. ಸೂರ್ಯನಾಥ ಕಾಮತ್(ಸಂ)
ಕರ್ನಾಟಕ ಗಝೆಟಿಯರ್ ಭಾಗ ೧, ೧೯೮೨, ಪು.ಸಂ. ೧೨೦

೩೧. ಡಾ. ಎಚ್.ಆರ್. ಕೃಷ್ಣಯ್ಯ ಗೌಡ
ಗ್ರಾಮೀಣಾಭಿವೃದ್ಧಿ, ೨೦೦೯, ಪು.ಸಂ.೧೩೦

೩೨. ಹೆಚ್. ಚಿತ್ತರಂಜನ್
ಎ ಹ್ಯಾಂಡ್ ಬುಕ್ ಆಫ್ ಕರ್ನಾಟಕ, ೨೦೦೫, ಪು.ಸಂ.೧೮೦

೩೩. ಎಂ.ಬಿ. ಪಾಟೀಲ್
ಸಹಕಾರಿ ಚಳುವಳಿಯ ಸಮೀಕ್ಷೆ 'ಬೆಂಗಳೂರು ದರ್ಶನ' ಸಂಪುಟ ೧ರಲ್ಲಿ ಪ್ರಕಟಗೊಂಡ ಲೇಖನ,
ಉದಯ ಭಾನು ಕಲಾ ಸಂಘ, ಬೆಂಗಳೂರು ೨೦೦೫, ಪು.ಸಂ. ೪೦೩

೩೪. ಎಂ.ಬಿ. ಪಾಟೀಲ್
ಸಹಕಾರಿ ಚಳುವಳಿಯ ಸಮೀಕ್ಷೆ ಬೆಂಗಳೂರು ದರ್ಶನ ಸಂಪುಟ ೧ರಲ್ಲಿ ಪ್ರಕಟಗೊಂಡ ಲೇಖನ
೨೦೦೫, ಪು.ಸಂ. ೪೦೩

೩೫. ಅದೇ ಪುಟ ಸಂಖ್ಯೆ – ೧೫

೩೬. ಡಾ. ಎಚ್.ಆರ್. ಕೃಷ್ಣಯ್ಯ ಗೌಡ
ಗ್ರಾಮೀಣಾಭಿವೃದ್ಧಿ, ೨೦೦೯, ಪು.ಸಂ.೧೩೩

೩೭. ಬಿ.ಜಿ. ಬಣಕಾರ
ಸಹಕಾರ ಚಿಂತನ, ೨೦೦೫, ಪು.ಸಂ. ೬

೩೮. ಎಂ.ಬಿ. ಪಾಟೀಲ್
ಸಹಕಾರಿ ಚಳುವಳಿಯ ಸಮೀಕ್ಷೆ ಬೆಂಗಳೂರು ದರ್ಶನ ಸಂಪುಟ ೧ರಲ್ಲಿ ಪ್ರಕಟಗೊಂಡ ಲೇಖನ
ಬೆಂಗಳೂರು ೨೦೦೫, ಪು.ಸಂ. ೪೦೭

೩೯. ಸಿನ್ಹಾ ಬಿ.ಕೆ.
ಮಹಾತ್ಮ ಗಾಂಧಿ ಆ್ಯಂಡ್ ದಿ ಕೋ ಓಪರೇಟಿವ್ ಮೂವ್‌ಮೆಂಟ್, ೧೯೭೦ ಪು. ಸಂ. ೩೯

೪೦. ಎಸ್. ಶ್ರೀನಿವಾಸ ಮತ್ತು ಚನ್ನಬಸಪ್ಪ ಪಾಟೀಲ
ಸಹಕಾರ ಚಿಂತನೆಯ ಇತಿಹಾಸ (ಅನುವಾದಿತ ಕೃತಿ), ೧೯೮೪ ಪು.ಸಂ ೮೯, ೯೪.

೪೧. ಡೇನಿಯಲ್ ಥಾರ್ನರ್
ಅಗ್ರಿಕಲ್ಚರಲ್ ಕೋ – ಓಪರೇಟಿವ್ಸ್ ಇನ್ ಇಂಡಿಯಾ ಎ ಫೀಲ್ಡ್ ರಿಪೋರ್ಟ್, ೧೯೬೪,
ಪು. ಸಂ ೮, ೯, ೩೧


**********

# ಅಧ್ಯಾಯ ೩

# ದಕ್ಷಿಣ ಕನ್ನಡದಲ್ಲಿ ಸಹಕಾರ ಚಳುವಳಿ


ಕರ್ನಾಟಕ ರಾಜ್ಯದಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆ


ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆ
ಕುಂದಾಪುರ
ಉಡುಪಿ
ಕಾರ್ಕಳ
ಮಂಗಳೂರು
ಬೆಳ್ತಂಗಡಿ
ಬಂಟ್ವಾಳ
ಪುತ್ತೂರು
ಸುಳ್ಯ

# ಅಧ್ಯಾಯ ೩

# ದಕ್ಷಿಣ ಕನ್ನಡದಲ್ಲಿ ಸಹಕಾರ ಚಳುವಳಿ

ಭಾರತದ ಸಹಕಾರ ಚಳುವಳಿಯ ಇತಿಹಾಸದಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಗೆ ವಿಶಿಷ್ಟ ಸ್ಥಾನವಿದೆ. ಜಿಲ್ಲೆಯಲ್ಲಿ ಸಹಕಾರ ಚಳುವಳಿ ಮೊದಲು ಜನ್ಮ ತಾಳಿದ್ದು ಪುತ್ತೂರಿನಲ್ಲಿ. ಪುತ್ತೂರಿನಲ್ಲಿ ಸಹಕಾರ ಚಳುವಳಿಗೆ ಚಾಲನೆ ನೀಡಿದವರು ಮೊಳಹಳ್ಳಿ ಶಿವರಾಯರು. ಮೊಳಹಳ್ಳಿ ಶಿವರಾಯರು ಮತ್ತು ಅವರ ಸಹವರ್ತಿಗಳ ಪ್ರಯತ್ನದಿಂದ ಮುಂದೆ ಸಹಕಾರ ಚಳುವಳಿ ಜಿಲ್ಲೆಯಾದ್ಯಂತ ಪಸರಿಸಿತು. ಇಂದು ಕೂಡಾ ಜಿಲ್ಲೆಯ ಆರ್ಥಿಕತೆಯಲ್ಲಿ ಸಹಕಾರಿ ರಂಗ ಪ್ರಮುಖ ಪಾತ್ರವಹಿಸುತ್ತಿದೆ.

## ೩.೧. ಪ್ರಾಚೀನ ದಕ್ಷಿಣ ಕನ್ನಡದಲ್ಲಿ ಸಹಕಾರ ಚಳುವಳಿ

ತುಳುನಾಡು ಎಂದು ಕರೆಯಲ್ಪಡುತ್ತಿದ್ದ ದಕ್ಷಿಣ ಕನ್ನಡದಲ್ಲಿ ಪ್ರಾಚೀನ ಕಾಲದಿಂದಲೂ ಸಹಕಾರ ಪದ್ಧತಿ ಅಸ್ತಿತ್ವದಲ್ಲಿತ್ತು. ಕೃಷಿಯೇ ಪ್ರಧಾನ ಕಸುಬಾಗಿರುವ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕೃಷಿ ಕಾರ್ಯಗಳು, ಸಾಮಾಜಿಕ ಮತ್ತು ಧಾರ್ಮಿಕ ಆಚರಣೆಗಳು ಜನರ ಪರಸ್ಪರ ಸಹಕಾರದಿಂದ ನಡೆಸಲ್ಪಡುತ್ತಿದ್ದವು. ಕೃಷಿಗೆ ಬೇಕಾದ ನೀರಾವರಿ ವ್ಯವಸ್ಥೆಯನ್ನು ಒದಗಿಸಿಕೊಳ್ಳಲು ಹಿಂದೆ ಹೆಚ್ಚಾಗಿ ನದಿ ಅಥವಾ ಹಳ್ಳಗಳಿಗೆ ಅಡ್ಡಲಾಗಿ ಒಡ್ಡುಗಳನ್ನು (ಕಟ್ಟಗಳನ್ನು) ಕಟ್ಟಿಕೊಳ್ಳುತ್ತಿದ್ದರು. ಈ ರೀತಿಯ ಒಡ್ಡುಗಳನ್ನು ಕಟ್ಟುವಾಗ ಒಂದು ನಿರ್ದಿಷ್ಟ ಪ್ರದೇಶದ ಜನ ಒಟ್ಟು ಸೇರಿ ಸಾಮೂಹಿಕವಾಗಿ ಕೆಲಸ ಮಾಡಿ ತಮ್ಮ ತಮ್ಮ ಜಮೀನುಗಳಿಗೆ ನೀರಾವರಿ ವ್ಯವಸ್ಥೆಯನ್ನು ಮಾಡುತ್ತಿದ್ದರು. ಒಡ್ಡುಗಳ ನಿರ್ವಹಣೆಗೆ ಕೂಡಾ ಅವರು ಸಾಮೂಹಿಕವಾಗಿ ಜವಾಬ್ದಾರರಾಗಿರುತ್ತಿದ್ದರು. ಇದು ಹಿಂದೆ ಅಸ್ತಿತ್ವದಲ್ಲಿದ್ದ ಸಹಕಾರ ಪದ್ಧತಿಗೆ ಉತ್ತಮ ಉದಾಹರಣೆ.

**ಭತ್ತದ ಕುದಿ (ಬಾರದ್ ಕುದಿ):**

ಪ್ರಾಚೀನ ತುಳುನಾಡಿನಲ್ಲಿ ಅಸ್ತಿತ್ವದಲ್ಲಿದ್ದ ಭತ್ತದ ಕುದಿ ಎಂಬ ಪದ್ಧತಿಯು ಸಹಕಾರ ತತ್ವದ ಮೇಲೆ ನಿಂತಿದ್ದ ವ್ಯವಸ್ಥೆ. ಈ ಪದ್ಧತಿಯ ಪ್ರಕಾರ ಒಂದು ನಿರ್ದಿಷ್ಟ ಪ್ರದೇಶದ ರೈತರೆಲ್ಲಾ ಒಟ್ಟು ಸೇರಿ ಪ್ರತಿ ಭತ್ತದ ಬೆಳೆಯ ಕಟಾವಿನ ಸಂದರ್ಭದಲ್ಲಿ ಪೂರ್ವ ನಿರ್ಣಯದಂತೆ ಒಬ್ಬೊಬ್ಬರು ನಿಗದಿ ಪಡಿಸಿದಷ್ಟು ಭತ್ತವನ್ನು ಆ ಪ್ರದೇಶದ ಪ್ರಮುಖ ರೈತನ ಮನೆಯಲ್ಲಿ ದಾಸ್ತಾನಿಡುತ್ತಿದ್ದರು. ಭತ್ತದ ದಾಸ್ತಾನಿನಲ್ಲಿ ತನ್ನ ಪಾಲನ್ನು ಹೊಂದಿರುವ ರೈತ ಹಾಗೇ ದಾಸ್ತಾನಿಟ್ಟ ಭತ್ತದಿಂದ ಅವನಿಗೆ ಅವಶ್ಯಕತೆ

ಉಂಟಾದಾಗ ತಾನು ತೆಗೆದುಕೊಂಡ ಭತ್ತಕ್ಕೆ ಇಂತಿಷ್ಟು ಪೊಲಿ (ಬಡ್ಡಿ) ಕೊಡುತ್ತೇನೆಂಬ ವಾಗ್ದಾನದ ಮೇಲೆಗೆ ತನಗೆ ಅವಶ್ಯಕತೆ ಇರುವಷ್ಟು ಭತ್ತವನ್ನು ಸಾಲ ಪಡೆದುಕೊಳ್ಳಬಹುದಾಗಿತ್ತು. ಹೀಗೆ ಪಡೆದುಕೊಂಡ ಭತ್ತದ ಸಾಲವನ್ನು ಅವನು ಮುಂದಿನ ಭತ್ತದ ಬೆಳೆ ಬಂದಾಗ ತೀರಿಸಬೇಕಾಗಿತ್ತು ಕೆಲವು ಸಂದರ್ಭಗಳಲ್ಲಿ ಭತ್ತದ ದಾಸ್ತಾನಿನಲ್ಲಿ ತನ್ನ ಪಾಲು ಇರದ ವ್ಯಕ್ತಿ ಕೂಡಾ ದಾಸ್ತಾನಿನಿಂದ ಭತ್ತದ ಸಾಲವನ್ನು ಪಡೆಯಬಹುದಾಗಿತ್ತು. ಆದರೆ ಅವನು ನೀಡಬೇಕಾದ ಪೊಲಿಯ ಪ್ರಮಾಣ ದಾಸ್ತಾನಿನಲ್ಲಿ ತಮ್ಮ ಪಾಲನ್ನು ಹೊಂದಿರುವ ರೈತರು ಕೊಡಬೇಕಾದ ಪೊಲಿಯ ಪ್ರಮಾಣಕ್ಕಿಂತ ಹೆಚ್ಚಾಗಿರುತ್ತಿತ್ತು. (ಸಾಮಾನ್ಯವಾಗಿ ಪೊಲಿಯ ಪ್ರಮಾಣ ನಾಲ್ಕು ಮುಡಿ ಭತ್ತಕ್ಕೆ ಒಂದು ಮುಡಿ ಭತ್ತ ಮತ್ತು ಒಂದು ಮುಡಿ ಭತ್ತಕ್ಕೆ ಒಂದು ಕಳಸೆ ಭತ್ತವಾಗಿರುತ್ತಿತ್ತು.) ಮುಂದಿನ ದಾಸ್ತಾನು ಇಡುವ ಮೊದಲು ಸಾಲಕೊಟ್ಟ ಭತ್ತ ಮತ್ತು ಪೊಲಿಯನ್ನು ಸಂಗ್ರಹಿಸಿ ಅದರಿಂದ ಹಿಂದೆ ಭತ್ತ ದಾಸ್ತಾನು ನಿಡಿದ ರೈತರೆಲ್ಲರಿಗೂ ಅವರು ದಾಸ್ತಾನು ನೀಡಿದ ಭತ್ತ ಮತ್ತು ಲಾಭಾಂಶದ ಅವರ ಪಾಲಿನ ಭತ್ತವನ್ನು ನೀಡಲಾಗುತ್ತಿತ್ತು[೧]. ಇದಲ್ಲದೆ ಪ್ರಾಚೀನ ಕಾಲದಲ್ಲಿ ದಕ್ಷಿಣ ಕನ್ನಡದಲ್ಲಿ 'ನಿಧಿ' ಎಂಬ ಹೆಸರಿನ ಸಹಕಾರಿ ಸಂಸ್ಥೆಯ ಮಾದರಿಯ ಸಂಸ್ಥೆಗಳು ಕೂಡಾ ಅಸ್ತಿತ್ವದಲ್ಲಿದ್ದವು.[೨]

## ೩.೨. ಸ್ವಾತಂತ್ರ್ಯ ಪೂರ್ವದಲ್ಲಿ ಸಹಕಾರ ಚಳುವಳಿ

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಹಕಾರ ಚಳುವಳಿ ಆರಂಭವಾದುದು ೧೯೦೯ರಲ್ಲಿ. ೧೯೦೯ ಅಕ್ಟೋಬರ್ ೨೮ ರಂದು "ಪುತ್ತೂರು ರೂರಲ್ ಕ್ರೆಡಿಟ್ ಸೊಸ್ಯಾಟಿ" ಎಂಬ ಸಹಕಾರ ಸಂಘದ ಸ್ಥಾಪನೆಯೊಂದಿಗೆ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಹಕಾರ ಚಳುವಳಿಗೆ ಅಧಿಕೃತ ಚಾಲನೆ ದೊರೆಯಿತು.

**ಸಹಕಾರ ಚಳುವಳಿ ಆರಂಭವಾದ ಹಿನ್ನೆಲೆ**

೨೦ನೆಯ ಶತಮಾನದ ಆದಿಭಾಗದಲ್ಲಿ ಈಗಿನ ಉಡುಪಿ ಜಿಲ್ಲೆ ಮತ್ತು ಕಾಸರಗೋಡು ಜಿಲ್ಲೆಗಳು ದಕ್ಷಿಣ ಕನ್ನಡ ಜಿಲ್ಲೆಯ ಭಾಗಗಳಾಗಿದ್ದವು. ಅಂದಿನ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆ ಬ್ರಿಟಿಷ್ ಸರಕಾರದ ಅಧಿಪತ್ಯಕ್ಕೆ ಒಳಪಟ್ಟು ಮದ್ರಾಸ್ ಪ್ರೆಸಿಡೆನ್ಸಿಯ ಭಾಗವಾಗಿತ್ತು. ಕೃಷಿ ಜಿಲ್ಲೆಯ ಜನರ ಮುಖ್ಯ ಕಸುಬಾಗಿತ್ತು. ಭತ್ತ, ತೆಂಗು ಮತ್ತು ಅಡಿಕೆ ಇಲ್ಲಿನ ಪ್ರಧಾನ ಬೆಳೆಗಳಾಗಿದ್ದವು. ಆಗ ಇಲ್ಲಿನ ಕೃಷಿಕರಲ್ಲಿ ಸುಮಾರು ಶೇ. ೪೦ರಷ್ಟು ಸ್ವತಃ ಭೂಮಿ ಹೊಂದಿ ಕೃಷಿ ಮಾಡುವವರಾಗಿದ್ದರು ಮತ್ತು ಉಳಿದವರು ಗೇಣಿ ಒಕ್ಕಲುಗಳಾಗಿ ಕೃಷಿ ಮಾಡುವ ತೀರಾ ಬಡವರಾಗಿದ್ದರು[೩]. ಬ್ರಿಟಿಷ್ ಕಂದಾಯ ನೀತಿ, ಜಮೀನ್ದಾರರು ಮತ್ತು ಲೇವಾದೇವಿದಾರರ ಶೋಷಣೆಯಿಂದಾಗಿ ಇಲ್ಲಿನ ಸಾಮಾನ್ಯ ರೈತರ ಪರಿಸ್ಥಿತಿ ಕಷ್ಟಕರವಾಗಿತ್ತು. ಸದಾ ಆರ್ಥಿಕ ಸಂಕಷ್ಟದಲ್ಲಿರುತ್ತಿದ್ದ ಸಾಮಾನ್ಯ ರೈತ ತನ್ನ ಆರ್ಥಿಕ

ಅಗತ್ಯತೆಗಳನ್ನು ಪೂರೈಸಿಕೊಳ್ಳಲು ಹೆಚ್ಚಾಗಿ ಲೇವಾದೇವಿದಾರರನ್ನೇ ಆಶ್ರಯಿಸಬೇಕಾಗಿತ್ತು. ಲೇವಾದೇವಿದಾರರಿಂದ ಸಾಲ ಪಡೆಯಲು ತಮ್ಮ ಭೂಮಿಯನ್ನು ಒತ್ತೆಯಿಟ್ಟು ಸಾಲ ತೀರಿಸಲಾಗದೆ ಹಲವಾರು ರೈತರು ತಮ್ಮ ಭೂಮಿಗಳನ್ನು ಕೂಡಾ ಕಳೆದು ಕೊಂಡಿದ್ದರು. ಇಂತಹ ಪರಿಸ್ಥಿತಿಯಲ್ಲಿ ಬ್ರಿಟಿಷ್ ಸರಕಾರ ಜಾರಿಗೆ ತಂದ ೧೯೦೪ರ ಸಹಕಾರ ಕಾಯಿದೆಯ ಅನ್ವಯ ಮದ್ರಾಸ್ ಪ್ರೆಸಿಡೆನ್ಸಿಯಲ್ಲಿ ಸ್ಥಾಪಿಸಲ್ಪಟ್ಟ ಸಹಕಾರ ಸಂಘಗಳು ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತಿರುವುದನ್ನು ಕಂಡು ಪ್ರೇರಿತರಾಗಿ (ಆ ಹೊತ್ತಿಗೆ ಮದ್ರಾಸ್‌ನಲ್ಲಿ ಸುಮಾರು ೧೮೦ ಸಹಕಾರ ಸಂಘಗಳು ಸ್ಥಾಪಿಸಲ್ಪಟ್ಟಿದ್ದವು) ಪುತ್ತೂರಿನ ಕೆಲ ಮಹನೀಯರು ಸಣ್ಣ ರೈತರು ಮತ್ತು ಗೇಣಿ ಒಕ್ಕಲುಗಳ ಆರ್ಥಿಕ ಪರಿಸ್ಥಿತಿಯ ಸುಧಾರಣೆಗಾಗಿ ಸಹಕಾರ ಚಳುವಳಿಯನ್ನು ಪುತ್ತೂರಿನಲ್ಲಿ ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಕಾರ್ಯ ಪ್ರವೃತ್ತರಾದರು.

**ಸಹಕಾರ ಚಳುವಳಿಯ ಆರಂಭ ಮತ್ತು ಬೆಳವಣಿಗೆ (೧೯೦೯ ರಿಂದ ೧೯೩೦ ರವರೆಗೆ)**

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಸಹಕಾರ ಚಳುವಳಿಗೆ ಪುತ್ತೂರಿನಲ್ಲಿ ಚಾಲನೆ ನೀಡಿದವರು ಮೊಳಹಳ್ಳಿ ಶಿವರಾಯರು ಮತ್ತು ಅವರ ಸಹವರ್ತಿಗಳು. ಮೊಳಹಳ್ಳಿ ಶಿವರಾಯರು, ಹೆಚ್. ಗಣಪತಿ ರಾಯರು, ಬೈಂದೂರು ರಾಮರಾಯರು ಮುಂತಾದ ಮಹನೀಯರು ೧೯೦೪ರ ಸಹಕಾರ ಕಾಯಿದೆಯ ಪ್ರಯೋಜನಗಳನ್ನು ಪಡೆಯಲು ಬೇಕಾಗಿದ್ದ ಅನುಭವಗಳನ್ನು ಸಂಗ್ರಹಿಸಿ ೧೯೦೯ನೇ ಎಪ್ರಿಲ್ ೪ನೇ ತಾರೀಖಿನಂದು ಮದ್ರಾಸು ಪ್ರಾಂತ್ಯದ ರಿಜಿಸ್ಟ್ರಾರ್‌ರವರಿಗೆ ಮನವಿ ಮಾಡಿ ಪುತ್ತೂರಿನಲ್ಲಿ ಒಂದು ಸಹಕಾರ ಸಂಘವನ್ನು ಸ್ಥಾಪಿಸುವ ಇಚ್ಛೆಯನ್ನು ವ್ಯಕ್ತಪಡಿಸಿ ಸಂಘಕ್ಕೆ ಸಂಬಂಧಿಸಿದ ಉಪನಿಬಂಧನೆಗಳಿಗನುಗುಣವಾಗಿ ನಡೆದುಕೊಳ್ಳಲು ತಾವು ಬದ್ಧರಾಗಿರುವುದಾಗಿ ತಿಳಿಸಿದರು. ಅದರ ಫಲವಾಗಿ ೧೯೦೯ ಅಕ್ಟೋಬರ್ ೨೮ ರಂದು "ಪುತ್ತೂರು ರೂರಲ್ ಕ್ರೆಡಿಟ್ ಸೊಸ್ಯಾಟಿ" ಎಂಬ ಸಹಕಾರ ಸಂಘ ಪುತ್ತೂರಿನಲ್ಲಿ ಜನ್ಮ ತಾಳಿತು[೪]. (೧೯೪೬ ರಲ್ಲಿ ಈ ಸಂಘದ ಹೆಸರನ್ನು "ದಿ ಪುತ್ತೂರು ಕೋ ಓಪರೇಟಿವ್ ಟೌನ್ ಬ್ಯಾಂಕ್ ಲಿಮಿಟೆಡ್" ಎಂದು ಬದಲಾಯಿಸಲಾಯಿತು).

೧೯೧೦ರಲ್ಲಿ ವಿಟ್ಲದಲ್ಲಿ (ವಿಟ್ಲ ಈಗಿನ ಬಂಟ್ವಾಳ ತಾಲೂಕಿನಲ್ಲಿದೆ) ಒಂದು ಸೇವಾ ಸಹಕಾರಿ ಸಂಘ ಮತ್ತು ೧೯೧೧ರಲ್ಲಿ ಉಡುಪಿ ಜಿಲ್ಲೆಯ ಕಲ್ಯಾಣಪುರದಲ್ಲಿ ಕಲ್ಯಾಣಪುರ ಮಿಲಾಗ್ರಿಸ್ ಸೇವಾ ಸಹಕಾರಿ ಸಂಘ ಸ್ಥಾಪಿಸಲ್ಪಟ್ಟಿತು[೫]. ಈ ಸಂಘಗಳನ್ನು ಬಿಟ್ಟರೆ ೧೯೧೨ರವರೆಗೆ ಜಿಲ್ಲೆಯಲ್ಲಿ ಬೇರೆ ಯಾವುದೇ ಸಹಕಾರ ಸಂಘಗಳು ಸ್ಥಾಪಿಸಲ್ಪಡಲಿಲ್ಲ. ಈ ನ್ಯೂನತೆಯನ್ನು ಹೋಗಲಾಡಿಸಲು ಮೊಳಹಳ್ಳಿ ಶಿವರಾಯರು ಮತ್ತು ಅವರ ಸಹವರ್ತಿಗಳು ಜಿಲ್ಲೆಯಾದ್ಯಾಂತ ಪ್ರವಾಸ ಮಾಡಿ ಸಹಕಾರ

ತತ್ವಗಳನ್ನು ಪ್ರಚಾರಪಡಿಸಿದರು. ಇದರ ಫಲವಾಗಿ ಜಿಲ್ಲೆಯ ಹಲವೆಡೆ ಸಹಕಾರ ಸಂಘಗಳು ಸ್ಥಾಪಿಸಲ್ಪಟ್ಟವು[1].

೧೯೧೨ರಲ್ಲಿ ಸಹಕಾರ ಕಾಯಿದೆಯಲ್ಲಿ ತಿದ್ದುಪಡಿಗಳನ್ನು ತರಲಾಯಿತು. ಅದೇ ವರ್ಷ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹಲವು ಸಹಕಾರ ಸಂಘಗಳು ಸ್ಥಾಪಿಸಲ್ಪಟ್ಟು ಕಾರ್ಯ ಪ್ರವೃತ್ತವಾದವು. ಅವುಗಳಲ್ಲಿ ಪ್ರಮುಖವಾದವುಗಳು ಪುತ್ತೂರು ಸಹಕಾರಿ ಧಾನ್ಯ ಬ್ಯಾಂಕ್ ಲಿಮಿಟೆಡ್, ಸುರತ್ಕಲ್ ಸೇವಾ ಸಹಕಾರಿ ಬ್ಯಾಂಕ್.ಲಿ, ಮಂಗಳೂರು ಕೆಥೋಲಿಕ್ ಸಹಕಾರಿ ಬ್ಯಾಂಕ್ ಲಿಮಿಟೆಡ್, ಇತ್ಯಾದಿ. ಈ ಸಹಕಾರಿ ಸಂಘಗಳನ್ನು ಆರಂಭದಲ್ಲಿ ಪುತ್ತೂರು ರೂರಲ್ ಕ್ರೆಡಿಟ್ ಸೊಸ್ಯಾಟಿಯೇ ಪೋಷಿಸಬೇಕಾಯಿತು. ೧೯೧೩ರ ಹೊತ್ತಿಗೆ ಪುತ್ತೂರು ತಾಲೂಕಿನಲ್ಲಿದ್ದ ೭ ಸಂಘಗಳು, ಕಾಸರಗೋಡು ತಾಲೂಕಿನಲ್ಲಿದ್ದ ೩, ಉಡುಪಿ ತಾಲೂಕಿನಲ್ಲಿದ್ದ ಒಂದು ಸಂಘ ಹಾಗೂ ಮಂಗಳೂರು ತಾಲೂಕಿನಲ್ಲಿದ್ದ ಎರಡು ಸಹಕಾರ ಸಂಘಗಳನ್ನು ಪೋಷಿಸುವ ಜವಾಬ್ದಾರಿ ಪುತ್ತೂರು ರೂರಲ್ ಕ್ರೆಡಿಟ್ ಸೊಸ್ಯಾಟಿಯ ಮೇಲೆ ಇದ್ದುದರಿಂದ ಆ ಸಂಘದ ಪರಿಸ್ಥಿತಿ ಕಷ್ಟಕರವಾಗಿತ್ತು. ಅಂತಹ ಸಂದರ್ಭದಲ್ಲಿ ಹೊಸದಾಗಿ ಹುಟ್ಟಿಕೊಂಡ ಸಹಕಾರಿ ಸಂಘಗಳ ಬೇಡಿಕೆಯನ್ನು ಪೂರೈಸಲು ಮತ್ತು ಅವುಗಳಿಗೆ ಹಣಕಾಸು ನೆರವನ್ನು ನೀಡುವ ಉದ್ದೇಶಕ್ಕಾಗಿ ಮೊಳಹಳ್ಳಿ ಶಿವರಾಯರು, ಬೈಂದೂರು ರಾಮರಾಯರು, ಅನಂತರಾಯರು ಮುಂತಾದ ಮಹನೀಯರು ಒಂದು ಮಾತೃ ಸಂಸ್ಥೆಯ ಅವಶ್ಯಕತೆ ಇರುವುದನ್ನು ಮನಗಂಡರು. ಆಗ ಜಿಲ್ಲೆಯಲ್ಲಿದ್ದ ೩೪ ಸೊಸ್ಯಾಟಿಗಳ ಪೈಕಿ ೨೩ ಸೊಸ್ಯಾಟಿಗಳ ಪ್ರತಿನಿಧಿಗಳು ಮತ್ತು ೬೦ ವೈಯಕ್ತಿಕ ಸದಸ್ಯರು ಆಗ ಮದ್ರಾಸ್ ಸಂಸ್ಥಾನದ ಕೋ ಓಪರೇಟಿವ್ ರಿಜಿಸ್ಟ್ರಾರರಾಗಿದ್ದ ದಿವಾನ್ ಬಹದ್ದೂರ್ ಸ್ವಾಮಿ ಕಣ್ಣು ಪಿಳ್ಳೆಯವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಆಗ ಅನೇಕ ಸಹಕಾರ ಸಂಘಗಳ ಕೇಂದ್ರವಾಗಿದ್ದ ಮತ್ತು ಸಹಕಾರ ಚಳುವಳಿಗೆ ಉತ್ತಮ ಮುಂದಾಳುಗಳನ್ನು ಒದಗಿಸಿ ಪುತ್ತೂರಿನಲ್ಲೇ ಒಂದು ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕನ್ನು ಸ್ಥಾಪಿಸಬೇಕೆಂದು ಠರಾವನ್ನು ಮಾಡಿದರು[2]. ಅದರ ಫಲವಾಗಿ ೨೪-೧-೧೯೧೪ರಂದು ದಕ್ಷಿಣ ಕನ್ನಡ ಕೇಂದ್ರ ಸಹಕಾರಿ ಬ್ಯಾಂಕ್ ಪುತ್ತೂರಿನಲ್ಲಿ ಕಾರ್ಯಾರಂಭ ಮಾಡಿತು. ೧೯೨೭ರ ವರೆಗೆ ಪುತ್ತೂರಿನಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಈ ಬ್ಯಾಂಕ್ ಆ ವರ್ಷ ಜಿಲ್ಲಾ ಕೇಂದ್ರವಾದ ಮಂಗಳೂರಿಗೆ ಸ್ಥಳಾಂತರಗೊಂಡಿತು. ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ಸ್ಥಾಪನೆ ಜಿಲ್ಲೆಯ ಸಹಕಾರ ಚಳುವಳಿಯ ಇತಿಹಾಸದಲ್ಲಿ ಒಂದು ಮಹತ್ವದ ಮೈಲಿಗಲ್ಲು.

ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಸಹಕಾರ ಚಳುವಳಿಯ ಬೆಳವಣಿಗೆಯನ್ನು ಪೋಷಿಸಿತು. ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್‌ನ ನೇತೃತ್ವದಲ್ಲಿ ಸಹಕಾರ ಚಳುವಳಿಯನ್ನು ಬೆಳೆಸಲು ಮೂರು ರೀತಿಯ ಪ್ರಯತ್ನಗಳಾದವು. ಮೊದಲನೆಯದಾಗಿ ಪ್ರಾಥಮಿಕ

ಸೊಸ್ಯಾಟಿಗಳ ಸ್ಥಾಪನೆಯ ಬಗ್ಗೆ ಪ್ರಮುಖ ಸಹಕಾರಿ ಸದಸ್ಯರ ನಿಯೋಗವೊಂದು ಜಿಲ್ಲೆಯಾದ್ಯಾಂತ ಸಂಚರಿಸಿ ಸಹಕಾರ ಚಳುವಳಿಯನ್ನು ಹರಡಿತು. ಎರಡನೆಯದಾಗಿ ಸಹಕಾರ ಚಳುವಳಿಗೆ ಪ್ರಚಾರ ನೀಡುವ ಉದ್ದೇಶದಿಂದ ಸಹಕಾರಿ ಮುದ್ರಣಾಲಯವು ಸ್ಥಾಪಿಸಲ್ಪಟ್ಟಿತು. (೧೯೧೬ರಲ್ಲಿ ಮೊಳಹಳ್ಳಿ ಶಿವರಾಯರಿಂದ ಸ್ಥಾಪಿಸಲ್ಪಟ್ಟ 'ಸದಾನಂದ ಸಹಕಾರಿ ಛಾಪಖಾನೆ ಸಂಘ" ಭಾರತದಲ್ಲೇ ಪ್ರಥಮವೆನ್ನಬಹುದಾದ ಸಹಕಾರಿ ಮುದ್ರಣಾಲಯ) ಮೂರನೆಯದಾಗಿ ಜಿಲ್ಲೆಯ ಪ್ರತಿಯೊಂದು ಸಹಕಾರಿ ಕೇಂದ್ರದ ಪ್ರತಿನಿಧಿಗಳ ಮೇಲೆ ಸ್ವಲ್ಪ ಮಟ್ಟಿನ ಹೊಣೆಗಾರಿಕೆ ಪ್ರಾಪ್ತವಾಗುವಂತೆ ಮಾಡಲು ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಮೇಲ್ತನಿಕೆ ಮಾಡುವ ಸಂಘಗಳನ್ನು ರೂಪಿಸಿ ತನ್ನ ಮೇಲ್ತನಿಕೆಗಾರರನ್ನು ಆ ಸಂಘಗಳಲ್ಲಿ ಕೆಲಸ ಮಾಡುವ ವ್ಯವಸ್ಥೆ ಮಾಡಿತು[೮]. ಇದರ ಪರಿಣಾಮವಾಗಿ ೧೯೨೦ರಲ್ಲಿ ಜಿಲ್ಲೆಯಲ್ಲಿ ೨೨೪ ರಷ್ಟಿದ್ದ ಸಹಕಾರ ಸಂಘಗಳ ಸಂಖ್ಯೆ ೧೯೨೬ರಲ್ಲಿ ೪೧೮ ಕ್ಕೇರಿತು[೯].

ಜಿಲ್ಲೆಯಲ್ಲಿ ವ್ಯಾಪಕವಾಗಿ ಹರಡಿದ್ದ ಸಹಕಾರ ಚಳುವಳಿಗೆ ಆ ದಿನಗಳಲ್ಲಿ ಮಂಗಳೂರಿನಿಂದ ವಿ. ಶ್ರೀನಿವಾಸ ಕಾಮತ್‌ರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿದ್ದ ಸ್ವದೇಶಾಭಿಮಾನಿ ಪತ್ರಿಕೆ ಸಾಕಷ್ಟು ಪ್ರಚಾರ ನೀಡಿತು. ಜೊತೆಗೆ ೧೯೧೯ರಲ್ಲಿ ಮೊಳಹಳ್ಳಿ ಶಿವರಾಯರ ಸಂಪಾದಕತ್ವದಲ್ಲಿ ಆರಂಭವಾದ ಸಹಕಾರಿ ಪತ್ರಿಕೆಯು ಸಹಕಾರ ಚಳುವಳಿಗೆ ಹೆಚ್ಚಿನ ಪ್ರಚಾರ ನೀಡಲೆಂದೇ ರೂಪುಗೊಂಡಿತ್ತು[೧೦].

೧೯೧೯ರಲ್ಲಿ ಸ್ಥಳೀಯ ಸಹಕಾರಿ ಯೂನಿಯನ್‌ಗಳು ಸ್ಥಾಪಿಸಲ್ಪಟ್ಟವು ಮತ್ತು ಸ್ಥಳೀಯ ಸಹಕಾರಿ ಯೂನಿಯನ್‌ಗಳ ಮೇಲ್ವಿಚಾರಣೆ ೧೯೨೩ರಲ್ಲಿ ಜಿಲ್ಲಾ ಸಹಕಾರಿ ಸಮಿತಿ (District Co-operative Council ) ಸ್ಥಾಪಿಸಲ್ಪಟ್ಟಿತು. ಜಿಲ್ಲಾ ಸಹಕಾರ ಸಮಿತಿ ಸ್ಥಳೀಯ ಸಹಕಾರಿ ಯೂನಿಯನ್‌ಗಳ ಚಟುವಟಿಕೆಗಳನ್ನು ಸಂಯೋಜಿಸುವ ಮತ್ತು ಸಹಕಾರಿ ತರಬೇತಿ ನೀಡುವ ಉದ್ದೇಶಕ್ಕಾಗಿ ಸ್ಥಾಪಿಸಲ್ಪಟ್ಟಿತ್ತು[೧೧]. (೧೯೩೧ರಲ್ಲಿ ಈ ಸಂಸ್ಥೆಯು ಮುಚ್ಚಲ್ಪಟ್ಟು ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ಆಡಳಿತ ಸಮಿತಿ (Administrative Council) ಈ ಜವಾಬ್ದಾರಿಯನ್ನು ವಹಿಸಿಕೊಂಡಿತು.

೧೯೧೮ರಲ್ಲಿ ದಕ್ಷಿಣ ಕನ್ನಡ ಜಿಲ್ಲಾ ತೋಟಗಾರರ ಸಗಟು ಸಹಕಾರಿ ಮಾರಾಟ ಸಂಘವು (S.K Garden Planters co- operative whole sale society ) ಪುತ್ತೂರು ತಾಲೂಕಿನ ವಿಟ್ಲದಲ್ಲಿ ಸ್ಥಾಪಿಸಲ್ಪಟ್ಟಿತು. ಅಡಿಕೆ ಬೆಳೆಗಾರರಿಗೆ ತಮ್ಮ ಅಡಿಕೆಗೆ ಉತ್ತಮ ಬೆಲೆ ದೊರೆಯುವವರೆಗೆ ಕಾಯಲು ಅನುಕೂಲವಾಗುವಂತೆ ಸದಸ್ಯರಿಗೆ ಸಾಲ ಒದಗಿಸುವ ಯೋಜನೆಯನ್ನು ಈ ಸಂಘ ಹೊಂದಿತ್ತು. ಆದರೆ ಈ ಸಂಘ ತನ್ನ ಉದ್ದೇಶವನ್ನು ಪೂರೈಸಿಕೊಳ್ಳಲು ಸಾಧ್ಯವಾಗದೆ ಮುಕ್ತಾಯಗೊಂಡಿತು[೧೨]. ಇದೇ ರೀತಿಯ ಇನ್ನೊಂದು ಸಂಘ ಪುತ್ತೂರು ಪರಿಸರದ ಅಡಿಕೆ ಬೆಳೆಗಾರರ ಹಿತರಕ್ಷಣೆಗೆ ೧೯೧೯ರಲ್ಲಿ ಮೊಳಹಳ್ಳಿ ಶಿವರಾಯರ ನಾಯಕತ್ವದಲ್ಲಿ ಪುತ್ತೂರಿನಲ್ಲಿ ಸ್ಥಾಪಿಸಲ್ಪಟ್ಟಿತ್ತು. "ದಕ್ಷಿಣ ಕನ್ನಡ

ಭಂಡಸಾಲೆ ಕೃಷಿಕರ ಸಹಕಾರಿ ಸಂಘ" ಎಂಬ ಹೆಸರಿನಲ್ಲಿ ಆರಂಭಿಸಲ್ಪಟ್ಟ ಈ ಸಂಘದ ಹೆಸರನ್ನು ಮುಂದೆ "ದಕ್ಷಿಣ ಕನ್ನಡ ಜಿಲ್ಲಾ ಕೃಷಿಕರ ಸಹಕಾರಿ ಸಂಘ" ಎಂದು ಬದಲಾಯಿಸಿ ಅದರ ಕೇಂದ್ರವನ್ನು ಮಂಗಳೂರಿಗೆ ವರ್ಗಾಯಿಸಲಾಯಿತು[೧೩].

೧೯೧೮ – ೧೯೨೭ರ ಅವಧಿಯಲ್ಲಿ ಜಿಲ್ಲೆಯಾದ್ಯಂತ ಹಲವು ಬಗೆಯ ಸಹಕಾರಿ ಸಂಘಗಳು ಸ್ಥಾಪಿಸಲ್ಪಟ್ಟವು. ಜಿಲ್ಲಾ ಕೇಂದ್ರವಾದ ಮಂಗಳೂರಿನಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಸಹಕಾರಿ ನೌಕರರ ಸಂಘ ಲಿಮಿಟೆಡ್, (೧೯೨೧), ದಕ್ಷಿಣ ಕನ್ನಡ ಜಿಲ್ಲಾ ಪೋಲಿಸ್ ಅಧಿಕಾರಿಗಳ ನೌಕರರ ಸಂಘ ಲಿಮಿಟೆಡ್, (೧೯೨೪) ಮಂಗಳೂರು ಪ್ರೊಟೆಸ್ಟೆಂಟ್ ಕ್ರಿಶ್ಚಿಯನ್ ಸಹಕಾರಿ ಸಂಘ (೧೯೧೮) ಮುಂತಾದ ಸಂಘಗಳು ಸ್ಥಾಪಿಸಲ್ಪಟ್ಟವು. ಇದಲ್ಲದೆ ಜಿಲ್ಲೆಯ ವಿವಿಧ ಭಾಗಗಳಲ್ಲಿ ಸೇವಾ ಸಹಕಾರಿ ಸಂಘಗಳು, ಧಾನ್ಯ ಬ್ಯಾಂಕುಗಳು, ಮೀನುಗಾರರ ಸಹಕಾರಿ ಸಂಘಗಳು, ನೌಕರರ ಪತ್ತಿನ ಸಂಘಗಳು ಸ್ಥಾಪಿಸಲ್ಪಟ್ಟವು. ೧೯೨೩ರಲ್ಲಿ ಪುತ್ತೂರಿನಲ್ಲಿ ದ್ರಾವಿಡ ಬ್ರಾಹ್ಮಣರ ಹಾಸ್ಟೇಲ್ ಸಹಕಾರ ಸಂಘವು ಆರಂಭವಾಯಿತು. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೧೯೨೩ರಲ್ಲಿ ಮದ್ರಾಸ್ ಸರಕಾರದ ಕಾರ್ಮಿಕ ಇಲಾಖೆ ಹಿಂದುಳಿದ ಮತ್ತು ಶೋಷಿತ ವರ್ಗಗಳಿಗಾಗಿ ಸಹಕಾರ ಸಂಘಗಳನ್ನು ಸಂಘಟಿಸುವ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿತು. ಇದರಿಂದಾಗಿ ೧೯೨೬ – ೨೭ರ ಅವಧಿಯಲ್ಲಿ ಜಿಲ್ಲೆಯಲ್ಲಿ ಸುಮಾರು ೮೦ ಹಿಂದುಳಿದ ಮತ್ತು ಶೋಷಿತ ವರ್ಗಗಳ ಸಂಘಗಳು ಅಸ್ತಿತ್ವದಲ್ಲಿದ್ದು ಅವುಗಳ ಪಾಲು ಬಂಡವಾಳ ೭೬೦೫ ರಷ್ಟಿತ್ತು[೧೪].

ಹೀಗೆ ೧೯೦೯ ರಿಂದ ೧೯೨೭ರ ವರೆಗಿನ ಅವಧಿಯಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಹಕಾರ ಚಳುವಳಿ ಉತ್ತಮ ಬೆಳವಣಿಗೆಯನ್ನು ಕಂಡಿತು. ಬ್ರಿಟಿಷ್ ಸರಕಾರವು ನೇಮಿಸಿದ್ದ ನಿಯೋಗವು (Royal Commission on Co- operative Movement) ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಹಕಾರ ಚಳುವಳಿ ವ್ಯಾಪಿಸಿರುವುದನ್ನು ಗುರುತಿಸಿದೆ. ನಿಯೋಗವು "ಮುಂಬೈ ಪ್ರಾಂತ್ಯದ ಧಾರವಾಡ ಜಿಲ್ಲೆಯಲ್ಲಿ ಮತ್ತು ಪಂಜಾಬ್ ಪ್ರಾಂತ್ಯದ ಜಲಂಧರ ಜಿಲ್ಲೆಯಲ್ಲಿ ಕಾಲು ಭಾಗದಷ್ಟು ಜನರು, ಮದ್ರಾಸು ಪ್ರಾಂತ್ಯದ ದಕ್ಷಿಣ ಕನ್ನಡ ಜಿಲ್ಲೆಯ ಐದನೆಯ ಒಂದು ಭಾಗದಷ್ಟು ಜನರು ಸಹಕಾರ ಚಳುವಳಿಯ ಪ್ರಭಾವಕ್ಕೆ ಒಳಪಟ್ಟಿದ್ದಾರೆ" ಎಂದು ಹೇಳಿದೆ[೧೫].

**೧೯೩೦ – ೧೯೩೪ರ ಅವಧಿಯಲ್ಲಿ ಸಹಕಾರ ಚಳುವಳಿ**

೧೯೨೯-೩೦ ರಿಂದ ೧೯೩೪ರ ವರೆಗಿನ ಅವಧಿಯಲ್ಲಿ ಆಗ ಜಗತ್ತಿನಾದ್ಯಂತ ವ್ಯಾಪಿಸಿದ್ದ ಆರ್ಥಿಕ ಮುಗ್ಗಟ್ಟಿನಿಂದಾಗಿ ದ.ಕ. ಜಿಲ್ಲೆಯ ಸಹಕಾರ ಚಳುವಳಿಯ ಬೆಳವಣಿಗೆ ಕುಂಠಿತಗೊಂಡಿತು. ಈ ಅವಧಿಯಲ್ಲಿ ಕೃಷಿ ಉತ್ಪನ್ನಗಳ ಮೌಲ್ಯ ಕುಸಿದುದರಿಂದ ಸಂಘಗಳ ಪುನರ್ ಸಂಘಟನೆಗೆ ಹೆಚ್ಚು ಗಮನ ಕೊಡಬೇಕಾಗಿ ಬಂದುದರಿಂದ ಕೆಲವು ನಷ್ಟದಲ್ಲಿರುವ ಸಂಘಗಳನ್ನು ಮುಚ್ಚಬೇಕಾಯಿತು.

ಇದರ ಪರಿಣಾಮವಾಗಿ ೧೯೨೭ರಲ್ಲಿ ೪೧೮ ರಷ್ಟಿದ್ದ ಸಹಕಾರ ಸಂಘಗಳ ಸಂಖ್ಯೆ ೧೯೩೪ರಲ್ಲಿ ೩೦೦ಕ್ಕೆ ಇಳಿಯಿತು[೧೬].

### ೧೯೩೪ ರಿಂದ ೧೯೪೭ರವರೆಗೆ

೧೯೩೪ರ ನಂತರ ಸಹಕಾರ ಚಳುವಳಿಯಲ್ಲಿ ಪುನಶ್ಚೇತನ ಕಂಡು ಬಂದಿತು. ಈ ಅವಧಿಯಲ್ಲಿ ಹಲವು ರೀತಿಯ ಸಹಕಾರ ಸಂಘಗಳು ಅಸ್ತಿತ್ವಕ್ಕೆ ಬಂದವು. ೧೯೩೪ರಲ್ಲಿ ಕಾಳುಮೆಣಸು ಬೆಳೆಸುವ ರೈತರ ಪರಿಸ್ಥಿತಿ ತೀರಾ ಹದಗೆಟ್ಟಿತು. ಅವರ ಪರಿಸ್ಥಿಯ ಸುಧಾರಣೆಗಾಗಿ ಆಗ ಕಾಸರಗೋಡು ತಾಲೂಕಿನ ಹೊಸದುರ್ಗದ ಕೋಟೆಚ್ಚೇರಿ ಎಂಬಲ್ಲಿ ಅಲ್ಲಿನ ಕೃಷಿಕರಾದ ಕೊಟೋಲ್ ಕುಞಂಬು ನಾಯರ್, ವಿ. ಮಾವಿಲ ಚಂದು ನಂಬಿಯಾರ್, ಕೊಟೆಚ್ಚೇರಿ ಸರ್ವೋತ್ತಮ ಶೆಣೈ ಅವರ ಸಲಹೆಯ ಮೇರೆಗೆ ಮೊಳಹಳ್ಳಿ ಶಿವರಾಯರ ಪ್ರೇರಣೆಯೊಂದಿಗೆ "ಕೊಟೆಚ್ಚೇರಿ ಸಹಕಾರಿ ಸಾಲ ಮತ್ತು ಮಾರಾಟ ಸಂಘ" ಸ್ಥಾಪಿಸಲ್ಪಟ್ಟಿತು. ಕಾಳು ಮೆಣಸಿಗೆ ಉತ್ತಮ ಬೆಲೆ ದೊರೆಯುವಂತೆ ಅದರ ಉತ್ಪತ್ತಿದಾರರಿಗೆ ಸಹಾಯ ಮಾಡುವುದು ಈ ಸಂಘದ ಮೂಲ ಉದ್ದೇಶವಾಗಿತ್ತು. ಕಾಳು ಮೆಣಸಿನ ಈಡಿನ ಮೇಲೆ ಈ ಸಂಘ ಸದಸ್ಯರಿಗೆ ಸಾಲ ಒದಗಿಸುತಿತ್ತು. ಕೆಲವು ವರ್ಷಗಳ ಬಳಿಕ ಈ ಸಂಘ ಹೊಗೆಸೊಪ್ಪಿನ ವ್ಯಾಪಾರವನ್ನು ಕೈಗೊಂಡಿತು[೧೭].

೧೯೩೬ರ ಹೊತ್ತಿಗೆ ಪುತ್ತೂರು ಪರಿಸರದಲ್ಲಿ ಮಹಾಳಿ ಎಂಬ ಕೊಳೆರೋಗವು ತಲೆದೋರಿ ವ್ಯಾಪಕವಾಗಿ ಹಬ್ಬಿ ಅಡಿಕೆ ತೋಟಗಳನ್ನು ಬಾಧಿಸಿದಾಗ ಮೊಳಹಳ್ಳಿ ಶಿವರಾಯರ ನೇತೃತ್ವದಲ್ಲಿ "ಮಹಾಳಿ ರೋಗ ನಿವಾರಣಾ ಸಹಕಾರಿ ಸಂಘ" ಪುತ್ತೂರಿನಲ್ಲಿ ಜನ್ಮ ತಾಳಿತು. ಈ ಸಂಘವು ಸುಮಾರು ೨೧,೫೩೯ ರೂಪಾಯಿಗಳ ಔಷಧವನ್ನು ೧೨೫೦ ಎಕ್ರೆ ಅಡಿಕೆ ತೋಟಗಳಿಗೆ ಸಿಂಪಡಿಸಿ ಕೊಳೆರೋಗ ನಿವಾರಣೆ ಪ್ರಯತ್ನಿಸಿತು[೧೮]. ೧೯೩೮ರಲ್ಲಿ ಸ್ಥಾಪಿಸಲ್ಪಟ್ಟ ಇನ್ನೊಂದು ಪ್ರಮುಖ ಸಂಘವೆಂದರೆ ಪುತ್ತೂರು ತಾಲೂಕಿನಲ್ಲಿ ಮಹಿಳೆಯರಿಗೋಸ್ಕರ ಆರಂಭಿಸಲ್ಪಟ್ಟ "ಮಹಿಳಾ ಗುಡಿ ಕೈಗಾರಿಕಾ ಸಹಕಾರಿ ಸಂಘ".

೧೯೩೮ರಲ್ಲಿ ಪುತ್ತೂರು, ಮಂಗಳೂರು ಮತ್ತು ಉಡುಪಿಗಳಲ್ಲಿ ಮೂರು ಭೂ ಅಡಮಾನ ಬ್ಯಾಂಕುಗಳು ಸ್ಥಾಪಿಸಲ್ಪಟ್ಟವು. ಆರ್ಥಿಕ ಮುಗ್ಗಟ್ಟಿನಿಂದಾಗಿ ಶ್ರೀಮಂತ ಭೂ ಮಾಲಿಕರು ಮತ್ತು ಲೇವಾದೇವಿದಾರರ ಬಳಿ ತಮ್ಮ ಭೂಮಿಯನ್ನು ಒತ್ತೆಯಾಗಿಟ್ಟು ಪಡೆದು ಸಾಲ ತೀರಿಸಲಾಗದೆ ತಮ್ಮ ಭೂಮಿಯನ್ನು ಕಳೆದುಕೊಂಡು ಕೃಷಿಕರಿಗೆ ಸಾಲ ಒದಗಿಸುವ ಉದ್ದೇಶಕ್ಕಾಗಿ ಈ ಬ್ಯಾಂಕುಗಳು ಸ್ಥಾಪಿಸಲ್ಪಟ್ಟವು. ಆದರೆ ಆರಂಭದಲ್ಲಿ ಈ ಬ್ಯಾಂಕುಗಳಿಂದ ಸಾಲ ವಿತರಣೆ ಕೇವಲ ಹಳೇ ಸಾಲ ಸಂದಾಯಕ್ಕೆ ಮಾತ್ರ ಸೀಮಿತವಾಗಿತ್ತು[೧೯].

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಪ್ರಥಮ ಜೇನು ವ್ಯವಸಾಯ ಸಹಕಾರಿ ಸಂಘ "ಪುತ್ತೂರು ತಾಲೂಕು ಸಹಕಾರಿ ಜೇನು ವ್ಯವಸಾಯ ಜೇನು ಸಂಗ್ರಹ ಮತ್ತು ಮಾರಾಟ ಸಂಘ" ಸುಳ್ಯದ ಚೊಕ್ಕಾಡಿಯಲ್ಲಿ ಪೈಲೂರು ಲಕ್ಷ್ಮೀ ನಾರಾಯಣ ರಾಯರ ನೇತೃತ್ವದಲ್ಲಿ ಆರಂಭಗೊಂಡಿತು. ಶಾಸ್ತ್ರೀಯ ಜೇನು ಕೃಷಿಯ ಕುರಿತು ಮಾಹಿತಿ ನೀಡುವುದು, ಜೇನು ಕೃಷಿಗೆ ಅವಶ್ಯವಾದ ಉಪಕರಣಗಳನ್ನು ಒದಗಿಸುವುದು, ಉತ್ಪಾದಿಸಲ್ಪಟ್ಟ ಜೇನನ್ನು ಖರೀದಿಸಿ ವಿಕ್ರಯಿಸುವ ವ್ಯವಸ್ಥೆ ಮಾಡುವುದು ಈ ಸಂಘದ ಪ್ರಮುಖ ಉದ್ದೇಶವಾಗಿತ್ತು[೨೦]. ಈಗ ಈ ಸಂಘವು "ದಕ್ಷಿಣ ಕನ್ನಡ ಜೇನು ವ್ಯವಸಾಯ ಸಹಕಾರಿ ಸಂಘ ನಿಯಮಿತ" ಎಂಬ ಹೆಸರಿನೊಂದಿಗೆ ಪುತ್ತೂರಿನಲ್ಲಿ ಕೇಂದ್ರ ಕಛೇರಿಯನ್ನು ಹೊಂದಿದೆ. ೧೯೩೯ರಲ್ಲಿ ಸಹಕಾರ ತತ್ವಗಳ ಪ್ರಚಾರ ಕಾರ್ಯ ಮತ್ತು ಸದಸ್ಯರಿಗೆ ತರಬೇತಿ ನೀಡುವ ಉದ್ದೇಶವನ್ನಿಟ್ಟುಕೊಂಡು ಜಿಲ್ಲಾ ಸಹಕಾರ ಅಭಿವೃದ್ಧಿ ಸಂಘ. ಲಿಮಿಟೆಡ್ (ಸಹಕಾರ ಅಡ್ವಾನ್ಸ್‌ಮೆಂಟ್ ಸೊಸ್ಯಾಟಿ) ಮಂಗಳೂರಿನಲ್ಲಿ ಆರಂಭಿಸಲ್ಪಟ್ಟಿತು. ಈ ಸಂಸ್ಥೆಯ ಸಭೆ ಸಮ್ಮೇಳನಗಳನ್ನು ನಡೆಸುವುದು, ಪುಸ್ತಕ ಭಂಡಾರಗಳನ್ನು ತೆರೆಯುವುದು ಮುಂತಾದ ಚಟುವಟಿಕೆಗಳನ್ನು ಹಮ್ಮಿಕೊಂಡು ಸಹಕಾರ ಚಳುವಳಿಯ ಬೆಳವಣಿಗೆಗೆ ಶ್ರಮಿಸಿತು[೨೧]. (ಮುಂದೆ ಈ ಸಂಘದ ಕಾರ್ಯ ಚಟುವಟಿಕೆಗಳು ಜಿಲ್ಲಾ ಸಹಕಾರಿ ಯೂನಿಯನ್‌ಗೆ ವರ್ಗಾಯಿಸಲ್ಪಟ್ಟವು)

೧೯೪೦ರ ದಶಕದಲ್ಲಿ ಜಿಲ್ಲೆಯ ಹಲವೆಡೆ ಬೆಲ್ಲ ತಯಾರಕರ ಸಂಘಗಳು, ಹಾಲು ಉತ್ಪಾದಕರ ಸಹಕಾರ ಸಂಘಗಳು, ನೇಕಾರರ ಸಹಕಾರ ಸಂಘಗಳು, ಗ್ರಾಹಕರ ಸಂಘಗಳು, ವಿದ್ಯಾರ್ಥಿ ಸಹಕಾರ ಸಂಘಗಳು ಮುಂತಾದ ಸಹಕಾರ ಸಂಘಗಳು ಆರಂಭಗೊಂಡವು. ಎರಡನೆಯ ಮಹಾಯುದ್ಧದ ಸಂದರ್ಭದಲ್ಲಿ ದೇಶದಲ್ಲಿ ಆಹಾರ ಧಾನ್ಯದ ಕೊರತೆಯುಂಟಾದಾಗ ಆಹಾರ ಧಾನ್ಯದ ಕೊರತೆ ನೀಗಿಸಲು ಆಹಾರ ಸಾಮಾಗ್ರಿಗಳನ್ನು ಜನರಿಗೆ ವಿತರಿಸುವ ಹೊಣೆಗಾರಿಕೆಯೊಂದಿಗೆ "ದಕ್ಷಿಣ ಕನ್ನಡ ಸೆಂಟ್ರಲ್ ಕೋ ಓಪರೇಟಿವ್ ಸ್ಟೋರ್" ಮಂಗಳೂರಿನಲ್ಲಿ ಆರಂಭವಾಯಿತು. ಈ ಅವಧಿಯಲ್ಲಿ ಸಹಕಾರ ಸಂಘಗಳ ಸಂಖ್ಯೆಯಲ್ಲಿ ಗಣನೀಯವಾಗಿ ಹೆಚ್ಚಳ ಕಂಡು ಬಂದಿತು. ೧೯೩೯ರ ವೇಳೆಗೆ ೩೧೩ ರಷ್ಟಿದ್ದ ಸಹಕಾರ ಸಂಘಗಳ ಸಂಖ್ಯೆ ೧೯೪೭ರ ವೇಳೆಗೆ ೫೦೨ ಕ್ಕೇರಿತು[೨೨]. ಆದರೆ ಇವುಗಳಲ್ಲಿ ಕೆಲವು ಸಹಕಾರ ಸಂಘಗಳು ಉತ್ತಮ ಪ್ರಗತಿ ಕಂಡರೆ ಇನ್ನು ಕೆಲವು ಲಿಕ್ವಿಡೇಶನ್‌ನಲ್ಲಿದ್ದವು. ಹೀಗೆ ಸ್ವಾತಂತ್ರ್ಯ ಪೂರ್ವದಲ್ಲಿ ಸಹಕಾರ ಚಳುವಳಿ ಏಳು ಬೀಳುಗಳೊಂದಿಗೆ ಮುಂದೆ ಸಾಗಿರುವುದನ್ನು ಗಮನಿಸಬಹುದು. ಈ ಅವಧಿಯಲ್ಲಿ ಸರಕಾರದಿಂದ ಹೆಚ್ಚಿನ ಹಣಕಾಸಿನ ನೆರವು ಸಿಗದೇ ಇದ್ದುದರಿಂದ ಹಾಗೂ ಅಮಿತ ನೆಲೆಯಲ್ಲಿ ಹೆಚ್ಚಿನ ಸಹಕಾರ ಸಂಘಗಳು ವ್ಯವಹಾರ ಮಾಡಬೇಕಾಗಿದ್ದುದರಿಂದ ಸಹಕಾರ ಚಳುವಳಿ ನಿರೀಕ್ಷಿತ ಮಟ್ಟದಲ್ಲಿ ಯಶಸ್ಸು ಗಳಿಸಲು ಸಾಧ್ಯವಾಗಲಿಲ್ಲ[೨೩].

### ೩.೩. ಸ್ವಾತಂತ್ರ್ಯೋತ್ತರ ದಕ್ಷಿಣ ಕನ್ನಡದಲ್ಲಿ ಸಹಕಾರ ಚಳುವಳಿ

ದೇಶಕ್ಕೆ ಸ್ವಾತಂತ್ರ್ಯ ಸಿಕ್ಕಿ ಸುಮಾರು ೯ ವರ್ಷಗಳ ಕಾಲ (೧೯೪೭ ರಿಂದ ೧೯೫೬ ರವರೆಗೆ) ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆ ಮದ್ರಾಸ್ ಪ್ರಾಂತ್ಯದ ಭಾಗವಾಗಿತ್ತು. ೧೯೫೬ರಲ್ಲಿ ಮೈಸೂರು ರಾಜ್ಯ ಅಸ್ಥಿತ್ವಕ್ಕೆ ಬಂದಾಗ ಕಾಸರಗೋಡನ್ನು ಹೊರತು ಪಡಿಸಿ ಉಳಿದ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಭಾಗಗಳು ಮೈಸೂರು ರಾಜ್ಯದಲ್ಲಿ ವಿಲೀನಗೊಂಡವು. ೧೯೪೭ ರಿಂದ ೧೯೫೬ರ ಅವಧಿಯಲ್ಲಿ ಸಹಕಾರ ಸಂಘಗಳ ಸಂಖ್ಯೆಯಲ್ಲಿ ಹೆಚ್ಚಳ ಕಂಡು ಬಂದರೂ ಸಹಕಾರ ಚಳುವಳಿಯ ಬೆಳವಣಿಗೆ ಮಂದಗತಿಯಲ್ಲಿ ಸಾಗಿತ್ತು. ಯಾಕೆಂದರೆ ಆಗ ಹೆಚ್ಚಿನ ಸಹಕಾರ ಸಂಘಗಳು ಅಮಿತ ಜವಾಬ್ದಾರಿಯ ಸಹಕಾರ ಸಂಘಗಳಾಗಿದ್ದವು. ಆಗ ಸಂಘದಲ್ಲಾಗುವ ನಷ್ಟಕ್ಕೆ ಸದಸ್ಯರೇ ಹೊಣೆಯಾಗಬೇಕಿತ್ತು. ಮತ್ತು ಸದಸ್ಯರ ವೈಯಕ್ತಿಕ ಆಸ್ತಿಯು ಹೊಣೆಯಾಗಿರುತ್ತಿತ್ತು. ಇದರಿಂದ ಹೆಚ್ಚಿನ ಸಂಖ್ಯೆಯಲ್ಲಿ ಜನರು ಸಂಘದ ಸದಸ್ಯತ್ವವನ್ನು ಪಡೆಯಲು ಮುಂದೆ ಬರುತ್ತಿರಲಿಲ್ಲ[೨೪]. ಹೀಗಿದ್ದರೂ ಸಹಾ ಮೊದಲನೆಯ ಪಂಚವಾರ್ಷಿಕ ಯೋಜನೆಯ ಕಾಲದಲ್ಲಿ ಸುಮಾರು ೩೪೯ ಕೃಷಿ ಪತ್ತಿನ ಸಹಕಾರ ಸಂಘಗಳು ಜಿಲ್ಲೆಯಲ್ಲಿದ್ದು ಅವುಗಳ ಕಾರ್ಯವ್ಯಾಪ್ತಿ ಕಾಸರಗೋಡನ್ನು ಒಳಗೊಂಡು ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ೫೨೦ ಗ್ರಾಮಗಳಿಗೆ ವ್ಯಾಪಿಸಿತ್ತು[೨೫]. ಈ ಅವಧಿಯಲ್ಲಿ ಸ್ಥಾಪಿಸಲ್ಪಟ್ಟ ಪ್ರಮುಖ ಸಹಕಾರ ಸಂಘಗಳೆಂದರೆ ದಕ್ಷಿಣ ಕನ್ನಡ ಜಿಲ್ಲಾ ಸಹಕಾರಿ ತಾಳೆಬೆಲ್ಲ ಮಾರ್ಕೆಟಿಂಗ್ ಫೆಡರೇಶನ್ ಲಿಮಿಟೆಡ್ (೧೯೫೩), ದಕ್ಷಿಣ ಕನ್ನಡ ಸಣ್ಣ ಕೈಗಾರಿಕಾ ಸಹಕಾರಿ ಸರಬರಾಜು ಮತ್ತು ಮಾರಾಟ ಸಹಕಾರಿ ಸಂಘ ಲಿಮಿಟೆಡ್, (೧೯೫೬) ದಕ್ಷಿಣ ಕನ್ನಡ ಜಿಲ್ಲಾ ಬತ್ತಿದ ಜಾನುವಾರು ಸಾಕಣೆ ಮತ್ತು ಹುಲ್ಲುಗಾವಲು ಸಹಕಾರಿ ಸಂಘ ಲಿಮಿಟೆಡ್, (೧೯೫೬), ಮಂಗಳೂರು ತಾಲೂಕು ಬೋರ್ಡ್ ನೌಕರರ ಸಹಕಾರಿ ಸಂಘ ಲಿಮಿಟೆಡ್ (೧೯೫೫), ಸುಜೀರ್ ಕಾರ್ಸ್ ಟೈಲ್ಸ್ ವರ್ಕ್ ಸಹಕಾರಿ ಸಂಘ ಲಿಮಿಟೆಡ್, (೧೯೫೪) ದಿ ಅಕಾಡೆಮಿ ಆಫ್ ಜನರಲ್ ಎಜುಕೇಶನ್ ಎಂಡ್ ಟೆನೆನ್ಸಿ ಹೌಸಿಂಗ್ ಸಹಕಾರಿ ಸಂಘ ಲಿ. (ಮಣಿಪಾಲ, ೧೯೫೬), ಉಡುಪಿ ಹುರಿಹಗ್ಗ ಕೆಲಸಗಾರರ ಉತ್ಪನ್ನ ಮತ್ತು ಮಾರಾಟ ಸಹಕಾರಿ ಸಂಘ ಲಿಮಿಟೆಡ್, (೧೯೫೫) ಇತ್ಯಾದಿ[೨೬]. ಇವಲ್ಲದೆ ಜಿಲ್ಲೆಯ ವಿವಿಧೆಡೆ ಸೇವಾ ಸಹಕಾರಿ ಸಂಘಗಳು, ಧಾನ್ಯ ಬ್ಯಾಂಕುಗಳು, ಬೆಲ್ಲ ತಯಾರಿ ಸಂಘಗಳು, ಸರ್ವಿಸ್ ಬ್ಯಾಂಕುಗಳು, ನೌಕರರ ಪತ್ತಿನ ಸಂಘಗಳು, ವಿದ್ಯಾರ್ಥಿ ಸಹಕಾರಿ ಸಂಘಗಳು, ಮೀನುಗಾರರ ಸಹಕಾರಿ ಸಂಘಗಳು, ಕುಟ್ಟಣದ ಅಕ್ಕಿ ತಯಾರಕರ ಸಹಕಾರ ಸಂಘಗಳು ಆರಂಭಿಸಲ್ಪಟ್ಟವು.

೧೯೫೯ರ ಕರ್ನಾಟಕ ಸಹಕಾರ ಕಾಯಿದೆ ೧೯೬೦ರಲ್ಲಿ ರಾಜ್ಯದಲ್ಲಿ ಜಾರಿಗೆ ಬಂದ ಬಳಿಕ ಸಹಕಾರ ಸಂಘಗಳು ಮುಖ್ಯವಾಗಿ ಕೃಷಿ ಪತ್ತಿನ ಸಹಕಾರ ಸಂಘಗಳು ಮಿತ ಜವಾಬ್ದಾರಿಯ ಸಂಘಗಳಾಗಿ ಸದಸ್ಯರ ಹೊಣೆಯು ಮಿತವಾದಾಗ ಮತ್ತು ನಷ್ಟಕ್ಕೆ ಸದಸ್ಯರ ಪಾಲು ಬಂಡವಾಳವೇ

ಹೊಣೆಯಾದಾಗ ಸಹಕಾರ ಸಂಘಗಳ ಬಗ್ಗೆ ಸದಸ್ಯರ ಒಲವು ಹೆಚ್ಚಾಯಿತು[೨೭]. ೧೯೫೬ ಎಪ್ರಿಲ್ ೧ರಲ್ಲಿ ಜಿಲ್ಲೆಯಲ್ಲಿ ದೊಡ್ಡ ಪ್ರಮಾಣದ ಸಹಕಾರ ಸಂಘಗಳನ್ನು ಸಂಘಟಿಸುವ ಪ್ರಯತ್ನಗಳನ್ನು ಕೈಗೆತ್ತಿಕೊಳ್ಳಲಾಯಿತು. ಆಗ ಜಿಲ್ಲೆಯಲ್ಲಿ ೨೯ ದೊಡ್ಡ ಪ್ರಮಾಣದ ಸಹಕಾರ ಸಂಘಗಳು ಅಸ್ಥಿತ್ವದಲ್ಲಿದ್ದವು[೨೮].

೧೯೬೦ ರಿಂದ ೧೯೭೫ ರವರೆಗಿನ ಅವಧಿಯಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಹಕಾರ ಚಳುವಳಿಯ ಬೆಳವಣಿಗೆ ಉತ್ತಮವಾಗಿತ್ತು. ೨ನೆಯ ಪಂಚವಾರ್ಷಿಕ ಯೋಜನೆಯ ಅಂತ್ಯದ ವೇಳೆಗೆ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಎಲ್ಲಾ ಗ್ರಾಮಗಳಲ್ಲಿ (೫ ಗ್ರಾಮಗಳನ್ನು ಹೊರತು ಪಡಿಸಿ) ಸಹಕಾರ ಚಳುವಳಿ ವ್ಯಾಪಿಸಿತ್ತು. ೧೯೬೦ರ ದಶಕದಲ್ಲಿ ಬೆಳ್ತಂಗಡಿ, ಸುಳ್ಯ, ಕುಂದಾಪುರ, ಬಂಟ್ವಾಳಗಳಲ್ಲಿ ಸಹಕಾರಿ ಭೂ ಅಭಿವೃದ್ಧಿ ಬ್ಯಾಂಕುಗಳು ಮತ್ತು ಬೆಳ್ತಂಗಡಿ, ಸುಳ್ಯ, ಪುತ್ತೂರು, ಕುಂದಾಪುರ, ಉಡುಪಿ, ಕಾರ್ಕಳ, ಬಂಟ್ವಾಳ ತಾಲೂಕುಗಳಲ್ಲಿ ತಾಲೂಕು ಕೃಷಿ ಉತ್ಪನ್ನ ಸಹಕಾರಿ ಮಾರಾಟ ಸಂಘಗಳು ಸ್ಥಾಪಿಸಲ್ಪಟ್ಟವು. ತಾಲೂಕು ಕೃಷಿ ಉತ್ಪನ್ನ ಮಾರಾಟ ಸಹಕಾರಿ ಸಂಘಗಳು ಕೃಷಿಗೆ ಅಗತ್ಯ ಇರುವ ವಸ್ತುಗಳ ಸಗಟು ಮಾರಾಟ, ಕೃಷಿ ಉತ್ಪನ್ನಗಳ ಈಡಿನ ಮೇಲೆ ಸಾಲ ನೀಡುವಿಕೆ ಮತ್ತು ಕೃಷಿ ಉತ್ಪನ್ನಗಳಿಗೆ ಮಾರುಕಟ್ಟೆ ಒದಗಿಸುವ ವ್ಯವಸ್ಥೆ ಮುಂತಾದ ಚಟುವಟಿಕೆಗಳಲ್ಲಿ ತೊಡಗಿಕೊಂಡವು[೨೯]. ೧೯೬೦ರ ನಂತರ ಸರಕಾರವು ಸಹಕಾರಿ ಸಂಘಗಳಿಗೆ ಅಗತ್ಯ ಇರುವ ಸಾಲ ಮತ್ತು ಸಬ್ಸಿಡಿಯನ್ನು ಒದಗಿಸಿತು. ಗೋದಾಮುಗಳನ್ನು ರಚಿಸಲು ಕೂಡಾ ಸರಕಾರ ಧನ ಸಹಾಯ ಒದಗಿಸಿತು. ಈ ಅವಧಿಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೭ ಗೋದಾಮುಗಳು ರಚಿಸಲ್ಪಟ್ಟವು[೩೦]. ೧೯೬೨ರಲ್ಲಿ ಭಾರತದ ಸಹಕಾರಿ ಕ್ಷೇತ್ರದಲ್ಲಿ ಹೊಚ್ಚ ಹೊಸ ಪ್ರಯೋಗವಾಗಿ ಕೃಷಿ ಯಂತ್ರೋಪಕರಣಗಳ ಮಾರಾಟ ಸೇವೆಯ ಗುರಿಯೊಂದಿಗೆ "ದಕ್ಷಿಣ ಕನ್ನಡ ಕೃಷಿ ಅಭಿವೃದ್ಧಿ ಸಹಕಾರಿ ಸಂಘ" (ಸ್ಯಾಡ್ಸ್) ಟಿ.ಎ. ಪೈಯವರ ನೇತೃತ್ವದಲ್ಲಿ ಮಂಗಳೂರಿನಲ್ಲಿ ಆರಂಭಗೊಂಡಿತು. ಆರಂಭದಲ್ಲಿ ಬಡ ರೈತರಿಗೆ ಪಂಪು ಸೆಟ್ಟುಗಳನ್ನು ಒದಗಿಸುವ ಉದ್ದೇಶದಿಂದ ಸ್ಥಾಪಿಸಲ್ಪಟ್ಟ ಈ ಸಹಕಾರಿ ಸಂಘವು "ಪಂಪು ಸೆಟ್ ಸೊಸೈಟಿ" ಎಂಬ ಹೆಸರಿನಿಂದಲೇ ಕರೆಯಲ್ಪಡುತ್ತಿತ್ತು[೩೧].

೧೯೬೦ರ ದಶಕದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಸಹಕಾರಿ ಕ್ಷೇತ್ರದಲ್ಲಿ ವಿವಿಧ ಬಗೆಯ ಸಹಕಾರ ಸಂಘಗಳು ಜನ್ಮ ತಾಳಿದವು. ದಕ್ಷಿಣ ಕನ್ನಡ ಜಿಲ್ಲಾ ಕೋಳಿ ಸಾಕಣೆ ಸಹಕಾರಿ ಸಂಘ (೧೯೬೪), ದಕ್ಷಿಣ ಕನ್ನಡ ಪೋಸ್ಟು ಮತ್ತು ಟೆಲಿಗ್ರಾಫ್ ನೌಕರರ ಸಹಕಾರಿ ಬ್ಯಾಂಕ್ ಲಿಮಿಟೆಡ್, (೧೯೬೪), ದಕ್ಷಿಣ ಕನ್ನಡ ಗೋಲ್ಡ್‌ಸ್ಮಿತ್ ಇಂಡಸ್ಟ್ರಿಯಲ್ ಕೋ–ಓಪರೇಟಿವ್ ಸೊಸೈಟಿ ಲಿಮಿಟೆಡ್, (೧೯೬೪), ದಕ್ಷಿಣ ಕನ್ನಡ ಜಿಲ್ಲಾ ಹೋಮಿಯೋಪಥಿಕ್ ಹೆಲ್ತ್ ಕೋ–ಓಪರೇಟಿವ್ ಸೊಸೈಟಿ ಲಿಮಿಟೆಡ್,

(೧೯೬೬), ದಕ್ಷಿಣ ಕನ್ನಡ ಜಿಲ್ಲಾ ಗೇರು ಉತ್ಪಾದಕರ ಸಹಕಾರಿ ಸಂಘ ಲಿಮಿಟೆಡ್, (೧೯೬೭) ಮುಂತಾದ ಸಹಕಾರಿ ಸಂಘಗಳು ಸ್ಥಾಪಿಸಲ್ಪಟ್ಟವು. ಇವಲ್ಲದೆ ಫಾರ್ಮಿಂಗ್ ಸೊಸ್ಯಾಟಿಗಳು, ಬಿಲ್ಡಿಂಗ್ ಸೊಸ್ಯಾಟಿಗಳು, ನೇಕಾರರ ಸಹಕಾರಿ ಸಂಘಗಳು, ಮಡಕೆ ತಯಾರಕರ ಸಹಕಾರಿ ಸಂಘಗಳು, ಕೈಗಾರಿಕಾ ಸಹಕಾರಿ ಸಂಘಗಳು ಮತ್ತು ಸೇವಾ ಸಹಕಾರಿ ಸಂಘಗಳು ಜಿಲ್ಲೆಯ ವಿವಿಧೆಡೆಗಳಲ್ಲಿ ಆರಂಭಿಸಲ್ಪಟ್ಟವು[೩೨]. ೧೯೬೦ರಲ್ಲಿ ಸ್ಥಾಪಿಸಲ್ಪಟ್ಟ ದಕ್ಷಿಣ ಕನ್ನಡ ಜಿಲ್ಲಾ ಸಹಕಾರಿ ಯೂನಿಯನ್ ಸಹಕಾರಿ ಶಿಕ್ಷಣ ಮತ್ತು "ದಕ್ಷಿಣ ಕನ್ನಡ ಜಿಲ್ಲಾ ಸಹಕಾರಿ" ಪತ್ರಿಕೆಯ ಮೂಲಕ ಸಹಕಾರ ಚಳುವಳಿಯ ಬೆಳವಣಿಗೆಗೆ ಪ್ರೋತ್ಸಾಹ ನೀಡಲಾರಂಭಿಸಿತು.

೧೯೬೬ರ ವೇಳೆಗೆ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೯೦೨ ಸಹಕಾರಿ ಸಂಘಗಳು ಅಸ್ತಿತ್ವದಲ್ಲಿದ್ದು ಸುಮಾರು ೬೬೨ ಗ್ರಾಮಗಳು ಸಹಕಾರ ಕ್ಷೇತ್ರದ ವ್ಯಾಪ್ತಿಗೆ ಒಳಪಟ್ಟಿದ್ದವು ಮತ್ತು ೨,೬೧,೭೯೯ ಸದಸ್ಯರು ಸಹಕಾರ ಚಳುವಳಿಯಲ್ಲಿ ಭಾಗಿಗಳಾಗಿದ್ದರು. ಜಿಲ್ಲೆಯಲ್ಲಿ ಕೃಷಿ ಉತ್ಪನ್ನಗಳನ್ನು ಶೇಖರಿಸಿಡಲು ೬೩ ಗೋದಾಮುಗಳು ಕಟ್ಟಲ್ಪಟ್ಟವು. ಬಂಟ್ವಾಳ, ಪುತ್ತೂರು, ಸುಳ್ಯ ಮತ್ತು ಕಾರ್ಕಳ ತಾಲೂಕುಗಳಲ್ಲಿ ಸಹಕಾರಿ ಭೂ ಅಭಿವೃದ್ಧಿ ಬ್ಯಾಂಕುಗಳು ಅಡಿಕೆ ತೋಟಗಳ ಅಭಿವೃದ್ಧಿಗೆ ಯೋಜನೆಗಳನ್ನು ರೂಪಿಸಿದವು. ಈ ಅವಧಿಯಲ್ಲಿ ಗ್ರಾಹಕರ ಸಹಕಾರ ಸಂಘಗಳನ್ನು ಸಂಘಟಿಸುವ ಕೆಲಸವು ನಡೆಯಿತು. ದಕ್ಷಿಣ ಕನ್ನಡ ಜಿಲ್ಲಾ ಸಹಕಾರಿ ಸಗಟು ಮಾರಾಟ ಸಂಸ್ಥೆ ಉಳಿದೆಲ್ಲಾ ಗ್ರಾಹಕ ಸಹಕಾರಿ ಸಗಟು ಮಾರಾಟ ಸಂಸ್ಥೆ ಉಳಿದೆಲ್ಲಾ ಗ್ರಾಹಕ ಸಹಕಾರಿ ಸಂಸ್ಥೆಗಳಿಗೆ ಅವಶ್ಯಕ ಸಾಮಾಗ್ರಿಗಳನ್ನು ಹೋಲ್ ಸೇಲಾಗಿ ಒದಗಿಸುವ ಸಂಸ್ಥೆಯಾಯಿತು[೩೩].

ನಾಲ್ಕನೆಯ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ (೧೯೬೬-೭೪) ಮಂಗಳೂರು ಮತ್ತು ಪುತ್ತೂರಿನಲ್ಲಿ ೨ ಅಸಿಸ್ಟೆಂಟ್ ರಿಜಿಸ್ಟ್ರಾರರ ವಲಯಗಳು ರಚಿಸಲ್ಪಟ್ಟವು. ೧೯೭೨ರ ವೇಳೆಗೆ ಮಂಗಳೂರು ವಲಯದಲ್ಲಿ ೬೩೧ ಸಹಕಾರ ಸಂಘಗಳು ಮತ್ತು ಪುತ್ತೂರು ವಲಯದಲ್ಲಿ ೨೯೨ ಸಹಕಾರ ಸಂಘಗಳು ಇದ್ದವು. ಈ ಅವಧಿಯಲ್ಲಿ ಜಿಲ್ಲೆಯಲ್ಲಿ ದಕ್ಷಿಣ ಕನ್ನಡ ಸಹಕಾರಿ ಮೀನು ಮಾರಾಟ ಫೆಡರೇಶನ್ ಲಿಮಿಟೆಡ್‌ಗನ್ನೊಳಗೊಂಡು ೩೫ ಮೀನುಗಾರರ ಸಹಕಾರ ಸಂಘಗಳು ಅಸ್ತಿತ್ವದಲ್ಲಿದ್ದು ಅವುಗಳು ಡೆಪ್ಯೂಟಿ ಡೈರೆಕ್ಟರ್ ಆಫ್ ಫಿಶರೀಸ್‌ನ ಆಡಳಿತಕ್ಕೆ ಒಳಪಟ್ಟಿದ್ದವು. ೧೯೩೨ರ ವೇಳೆಗೆ ಜಿಲ್ಲೆಯಲ್ಲಿ ಒಟ್ಟು ೯೨೩ ಸಂಘಗಳು ಅಸ್ತಿತ್ವದಲ್ಲಿದ್ದು ಅವುಗಳಲ್ಲಿ ೫೮ ಸಂಘಗಳು ಲಿಕ್ವಿಡೇಶನ್‌ನಲ್ಲಿದ್ದವು[೩೪].

೧೯೭೦-೭೧ರಲ್ಲಿ ಜಿಲ್ಲೆಯ ಪ್ರಮುಖ ಬೆಳೆಯಾದ ಅಡಿಕೆ ಬೆಲೆಯಲ್ಲಿ ತೀವ್ರ ಕುಸಿತ ಉಂಟಾಗಿ ಅಡಿಕೆ ಬೆಳೆಗಾರರು ಸಂಕಷ್ಟಕ್ಕೀಡಾದಾಗ ವಾರಣಾಸಿ ಸುಬ್ರಾಯ ಭಟ್ಟರ ನಾಯಕತ್ವದಲ್ಲಿ ಕೇರಳ ಮತ್ತು ಕರ್ನಾಟಕ ರಾಜ್ಯದ ಪ್ರಮುಖ ಅಡಿಕೆ ಬೆಳೆಗಾರರು ಮತ್ತು ಸಹಕಾರಿ ನೇತಾರರು

ಒಂದಾಗಿ ಈ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಲು ಉಭಯ ರಾಜ್ಯಗಳ ಹಲವು ಪ್ರದೇಶಗಳಲ್ಲಿ ಸಮ್ಮೇಳನಗಳನ್ನು ಆಯೋಜಿಸಿದರು. ಈ ಸಮ್ಮೇಳನಗಳಲ್ಲಿ ಉಭಯ ರಾಜ್ಯಗಳ ವ್ಯಾಪ್ತಿಗೆ ಒಳಪಟ್ಟು ಒಂದು ಸಹಕಾರಿ ಸಂಸ್ಥೆಯನ್ನು ಸ್ಥಾಪಿಸುವ ನಿರ್ಧಾರಕ್ಕೆ ಬರಲಾಯಿತು. ಇದರ ಫಲವಾಗಿ ಮಂಗಳೂರಿನಲ್ಲಿ ಕರ್ನಾಟಕ ಮತ್ತು ಕೇರಳ ರಾಜ್ಯಗಳ ಜಂಟಿ ಯೋಜನೆಯಾಗಿ ಸೆಂಟ್ರಲ್ ಅರೆಕ್‌ನೆಟ್ ಮಾರ್ಕೆಟಿಂಗ್ ಆ್ಯಂಡ್ ಪ್ರೊಸೆಸಿಂಗ್ ಕೋ-ಓಪರೇಟಿವ್ ಲಿಮಿಟೆಡ್ (ಕ್ಯಾಂಪ್ಕೋ) ಎಂಬ ಸಹಕಾರಿ ಸಂಸ್ಥೆ ೧೧.೦೭.೧೯೭೩ರಂದು ಜನ್ಮ ತಾಳಿತು. ಕ್ಯಾಂಪ್ಕೋ ಸಂಸ್ಥೆಯ ಸ್ಥಾಪನೆ ೧೯೭೦ರ ದಶಕದಲ್ಲಿ ಸಹಕಾರ ಚಳುವಳಿಯಲ್ಲಿ ಇತಿಹಾಸದಲ್ಲಿ ಒಂದು ಪ್ರಮುಖ ಘಟನೆ[೩೫].

೧೯೭೪ರಲ್ಲಿ ಸಹಕಾರ ತತ್ವದ ಆಧಾರದ ಮೇಲೆ ಮಣಿಪಾಲದಲ್ಲಿ ಟಿ.ಎಂ. ಪೈಯವರ ನೇತೃತ್ವದಲ್ಲಿ "ಕೆನರಾ ಹಾಲು ಒಕ್ಕೂಟ"ದ ಸ್ಥಾಪನೆಯಾಯಿತು. ಈ ಸಂಸ್ಥೆಯು ಮಣಿಪಾಲದ ಸುತ್ತುಮುತ್ತಲಿನ ಆಯ್ದ ಹಳ್ಳಿಗಳಲ್ಲಿ ಹಾಲು ಸಂಗ್ರಹದ ಕಾರ್ಯವನ್ನು ಆರಂಭಿಸಿತು[೩೬]. ೧೯೭೩ರ ನಂತರ ಜಿಲ್ಲೆಯ ಸಹಕಾರ ಚಳುವಳಿಯಲ್ಲಿ ಉತ್ತಮ ಪ್ರಗತಿ ಸಾಧಿಸಿತು. ೧೯೭೬-೭೭ರಲ್ಲಿ ಜಿಲ್ಲೆಯ ಸಹಕಾರ ಸಂಘಗಳ ಸಂಖ್ಯೆ ೬೧೦ ರಷ್ಟಿದ್ದು ಸುಮಾರು ೪,೩೯,೦೦೦ರಷ್ಟು ಸದಸ್ಯರನ್ನು ಸಹಕಾರ ಸಂಘಗಳು ಹೊಂದಿದ್ದವು[೩೭].

೧೯೮೦ರ ದಶಕದಲ್ಲೂ ಸಹಕಾರ ಚಳುವಳಿ ಉತ್ತಮ ಬೆಳವಣಿಗೆ ಕಂಡಿತು. ೧೯೮೦ರ ದಶಕದ ಆರಂಭದಲ್ಲಿ ೬೭೦ ಸಹಕಾರ ಸಂಘಗಳು ಜಿಲ್ಲೆಯಲ್ಲಿ ಅಸ್ತಿತ್ವದಲ್ಲಿದ್ದವು. ೧೯೮೦ರಲ್ಲಿ ಮಣಿಪಾಲದಲ್ಲಿ ೧೦,೦೦೦ ಲೀಟರ್ ಹಾಲು ಸಂಗ್ರಹ ಸಾಮರ್ಥ್ಯದ ಡೈರಿ ಸ್ಥಾಪಿಸಲ್ಪಟ್ಟಿತು ಮತ್ತು ಉಡುಪಿ, ಕುಂದಾಪುರ, ಕಾರ್ಕಳ ತಾಲೂಕುಗಳಲ್ಲಿ ಸಹಕಾರಿ ತತ್ವದ ಅಡಿಯಲ್ಲಿ ಹಾಲು ಉತ್ಪಾದಕ ಸಹಕಾರ ಸಂಘಗಳು ರಚಿಸಲ್ಪಟ್ಟವು. ೧೯೮೬ರಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ "ದಕ್ಷಿಣ ಕನ್ನಡ ಜಿಲ್ಲಾ ಸಹಕಾರಿ ಹಾಲು ಒಕ್ಕೂಟ"ದ ಸ್ಥಾಪನೆಯಾಯಿತು. ಈ ಸಂಸ್ಥೆಯ ಸ್ಥಾಪನೆ ಜಿಲ್ಲೆಯ ಸಹಕಾರ ಚಳುವಳಿಯಲ್ಲಿ ಕ್ಷೀರ ಕ್ರಾಂತಿಗೆ ನಾಂದಿಯಾಯಿತು[೩೮]. ೧೯೮೯ರಲ್ಲಿ ಮಂಗಳೂರಿನಲ್ಲಿ "ಮಂಗಳೂರು ಶಿಕ್ಷಕರ ಸಹಕಾರಿ ಕ್ರೆಡಿಟ್ ಸಂಘ ನಿಯಮಿತ" ಆರಂಭಗೊಂಡಿತು[೩೯].

೧೯೯೦ರ ದಶಕದಲ್ಲೂ ದಕ್ಷಿಣ ಕನ್ನಡದ ಸಹಕಾರ ಚಳುವಳಿ ಉತ್ತಮ ಬೆಳವಣಿಗೆ ಕಂಡಿತು. ಈ ಅವಧಿಯಲ್ಲಿ ಜಿಲ್ಲೆಯಲ್ಲಿ ಸ್ಥಾಪಿಸಲ್ಪಟ್ಟ ಪ್ರಮುಖ ಸಹಕಾರ ಸಂಘವೆಂದರೆ "ದಕ್ಷಿಣ ಕನ್ನಡ ಜಿಲ್ಲಾ ಮಹಿಳಾ ಸಹಕಾರಿ ಬ್ಯಾಂಕ್". ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಯ ಪಟ್ಟಣ ಮತ್ತು ಅರೆಪಟ್ಟಣ ಪ್ರದೇಶದ ವ್ಯಾಪ್ತಿಗೆ ಒಳಪಟ್ಟು ಎರಡೂ ಜಿಲ್ಲೆಯ ಮಹಿಳೆಯರಿಗೆ ಸುಲಭ ರೀತಿಯಲ್ಲಿ ಸಾಲ ಸೌಲಭ್ಯಗಳನ್ನು ನೀಡುವ ಉದ್ದೇಶದೊಂದಿಗೆ "ದಕ್ಷಿಣ ಕನ್ನಡ ಜಿಲ್ಲಾ ಮಹಿಳಾ ಸಹಕಾರಿ ಬ್ಯಾಂಕ್" ೨.೦೮.೧೯೯೪ರಂದು ನೋಂದಣೆಯಾಗಿ ಕಾರ್ಯಾರಂಭಿಸಿತು[೪೦]. ೧೯೯೭ರಲ್ಲಿ ಉಡುಪಿ ದಕ್ಷಿಣ

ಕನ್ನಡ ಜಿಲ್ಲೆಯಿಂದ ಬೇರ್ಪಟ್ಟು ಪ್ರತ್ಯೇಕ ಜಿಲ್ಲೆಯಾದರೂ ಉಭಯ ಜಿಲ್ಲೆಗಳಿಗೆ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಒಂದೇ ಆಗಿರುತ್ತದೆ.

೨೦೦೧ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಸಹಕಾರ ಕ್ಷೇತ್ರದಲ್ಲಿ ಒಂದು ಹೊಸ ಸಹಕಾರಿ ಸಂಸ್ಥೆಯ ಉದಯವಾಯಿತು. ಅಡಿಕೆ, ತೆಂಗಿನಕಾಯಿ, ವೆನಿಲ್ಲಾ, ಕಾಳು ಮೆಣಸುಗಳಿಗೆ ಸೂಕ್ತ ಮಾರುಕಟ್ಟೆ ಒದಗಿಸುವ ಉದ್ದೇಶದೊಂದಿಗೆ ಕರ್ನಾಟಕ ಸೌಹಾರ್ದ ಸಹಕಾರ ಕಾಯಿದೆಯ ಅಡಿಯಲ್ಲಿ (ಈ ಕಾಯಿದೆಯನ್ನು ಕರ್ನಾಟಕ ರಾಜ್ಯ ಸರಕಾರ ಜನವರಿ ೧, ೨೦೦೧ರಲ್ಲಿ ಜಾರಿಗೊಳಿಸಿತು) ಮಂಗಳೂರಿನಲ್ಲಿ ಟಿ. ರಾಜರಾಮ ಭಟ್ಟರ ನೇತೃತ್ವದಲ್ಲಿ "ಮಂಗಳೂರು ಅಗ್ರಿಕಲ್ಚರಿಸ್ಟ್ ಸೌಹಾರ್ದ ಸಹಕಾರಿ ಲಿಮಿಟೆಡ್" (ಮಾಸ್) ಎಂಬ ಸಹಕಾರಿ ಸಂಸ್ಥೆ ಆರಂಭವಾಯಿತು[೪೧]. ೨೦೦೦-೦೧ರಲ್ಲಿ ಜಿಲ್ಲೆಯಲ್ಲಿ ೬೩೭ ಸಹಕಾರ ಸಂಘಗಳಿದ್ದು ಪ್ರಸ್ತುತ ೮೦೧ ಸಹಕಾರ ಸಂಘಗಳು (ಉಡುಪಿ ಜಿಲ್ಲೆಯನ್ನು ಹೊರತು ಪಡಿಸಿ) ಅಸ್ತಿತ್ವದಲ್ಲಿವೆ. ಈ ಸಂಘಗಳ ಪೈಕಿ ೭೫೪ ಸಂಘಗಳು ಲಾಭದಲ್ಲಿ ಕಾರ್ಯ ನಿರ್ವಹಿಸುತ್ತಿರುವುದು ಜಿಲ್ಲೆಯಲ್ಲಿ ಸಹಕಾರಿ ರಂಗ ಸುದೃಢವಾಗಿರುವುದನ್ನು ಸೂಚಿಸುತ್ತದೆ[೪೨].

## ೩.೪ ಸಹಕಾರ ಚಳುವಳಿಯ ಮೇಲೆ ಸ್ವಾತಂತ್ರ್ಯ ಹೋರಾಟದ ಪ್ರಭಾವ

ಅಬಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಹಕಾರ ಚಳುವಳಿ ರಾಷ್ಟ್ರೀಯ ಚಳುವಳಿಯ ಭಾಗವಾಗಿ ಬೆಳೆದಿರುವುದನ್ನು ಕಾಣಬಹುದು. ಸ್ವಾತಂತ್ರ್ಯ ಹೋರಾಟದ ಪ್ರಭಾವದಿಂದಾಗಿ ಜಿಲ್ಲೆಯಲ್ಲಿ ಹಿಂದುಳಿದ ವರ್ಗಗಳ, ಮಹಿಳೆಯರ ಮತ್ತು ರೈತರನ್ನು ಸಹಕಾರ ತತ್ವದಡಿಯಲ್ಲಿ ಸಂಘಟಿಸುವ ಪ್ರಯತ್ನಗಳಾದರೆ ಸಹಕಾರ ತತ್ವಗಳು ಜಿಲ್ಲೆಯಾದ್ಯಂತ ಸಹಕಾರ ಚಳುವಳಿಯ ಫಲವಾಗಿ ಪಸರಿಸಿದ್ದು ಪರೋಕ್ಷವಾಗಿ ಸ್ವಾತಂತ್ರ್ಯ ಹೋರಾಟ ಜಿಲ್ಲೆಯಲ್ಲಿ ಬಲಗೊಳ್ಳಲು ಕಾರಣವಾಯಿತು. ಕೆಲವು ಸಹಕಾರಿ ನೇತಾರರು ಸ್ವತಃ ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯರಾಗಿ ಭಾಗವಹಿಸಿದ್ದರು. ಹಿರಿಯ ಸಹಕಾರಿಗಳಾದ ಮೊಳಹಳ್ಳಿ ಶಿವರಾಯರು ಸ್ವಾತಂತ್ರ್ಯ ಹೋರಾಟದ ಪ್ರಭಾವದಿಂದಾಗಿಯೇ ಸಹಕಾರ ಚಳುವಳಿಯನ್ನು ಸಾಮಾನ್ಯ ಜನರ ಚಳುವಳಿಯನ್ನಾಗಿಸಲು ಪ್ರಯತ್ನ ಪಟ್ಟರು. ಗಾಂಧೀಜಿಯವರ ಸಿದ್ಧಾಂತಗಳಿಂದ ಪ್ರಭಾವಿತರಾಗಿದ್ದ ಶಿವರಾಯರು ಗ್ರಾಮಗಳಲ್ಲಿ ಸಹಕಾರ ಸಂಘಗಳು, ಪಂಚಾಯತುಗಳು ಮತ್ತು ಶಾಲೆಗಳನ್ನು ಸ್ಥಾಪಿಸಲು ಒತ್ತು ನೀಡಿದ್ದಾರೆ. ಗಾಂಧೀಜಿಯವರ ಸ್ವರಾಜ್ಯದ ಕಲ್ಪನೆಯಲ್ಲೂ ಈ ಅಂಶಗಳು ಮಹತ್ವ ಪಡೆದಿದ್ದವು. ಗಾಂಧೀಜಿಯವರ ಪ್ರಭಾವದಿಂದಾಗಿಯೇ ಶಿವರಾಯರು ಅಸ್ಪೃಶ್ಯತಾ ನಿವಾರಣೆ ಮತ್ತು ಮದ್ಯಪಾನದ ವಿರುದ್ಧ ಜಾಗೃತಿ ಕಾರ್ಯಕ್ರಮಗಳನ್ನು ಸಹಕಾರ ಚಳುವಳಿಯ ಭಾಗವನ್ನಾಗಿಸಿದ್ದರು[೪೩].

ಇನ್ನೋರ್ವ ಸಹಕಾರಿ ನೇತಾರರಾದ ಬಂಟ್ವಾಳ ನಾರಾಯಣ ನಾಯಕರು ಕೂಡಾ ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯರಾಗಿ ಭಾಗಿಗಳಾಗಿದ್ದರು. ವಿದ್ಯಾರ್ಥಿಯಾಗಿದ್ದಾಗಲೇ ಉಪ್ಪಿನ ಸತ್ಯಾಗ್ರಹ, ಮಧ್ಯಪಾನ ನಿಷೇಧ ಹಾಗೂ ಶಾಲಾ ಬಹಿಷ್ಕಾರ ಚಳುವಳಿಗಳಲ್ಲಿ ಭಾಗಿಯಾಗಿದ್ದ ಅವರು ಹಲವು ಬಾರಿ ಸೆರೆವಾಸವನ್ನು ಅನುಭವಿಸಿದ್ದರು. ೧೯೩೦ರಲ್ಲಿ ಅವರು ಹರಿಜನ ಸೇವಕ ಸಂಘದ ಕಾರ್ಯದರ್ಶಿಯಾಗಿ ದೇವಾಲಯ ಪ್ರವೇಶ ಕಾರ್ಯಕ್ರಮಗಳನ್ನು ಸಂಘಟಿಸಿದ್ದರು. ೧೯೪೨ರಲ್ಲಿ ಕ್ವಿಟ್ ಇಂಡಿಯಾ ಚಳುವಳಿಯ ಸಂದರ್ಭದಲ್ಲಿ ಭೂಗತ ಹೋರಾಟಗಾರರಾಗಿ ರಾಷ್ಟ್ರೀಯ ಸ್ವಾತಂತ್ರ್ಯ ಸಂಗ್ರಾಮದ ಪ್ರಚೋದನೆಯ ಭಿತ್ತಿ ಪತ್ರಿಕೆಗಳನ್ನು ಹಂಚುವ ಖಾದಿ ಉತ್ಪನ್ನ ಮತ್ತು ಮಾರಾಟದ ಚಟುವಟಿಕೆಗಳಲ್ಲಿ ಭಾಗವಹಿಸಿದ್ದರು[೪೪]. ಕುಂದಾಪುರ ತಾಲೂಕಿನ ವೇಣುಗೋಪಾಲ್ ನಾಯಕ್, ಸುಳ್ಯ ತಾಲೂಕಿನ ಎಸ್. ನಾರಾಯಣ ರೈ, ಬೆಳ್ತಂಗಡಿ ತಾಲೂಕಿನ ಭೋಜರಾಜ ಹೆಗ್ಡೆ, ಮಂಗಳೂರಿನ ಡಾ. ಸಂಜೀವನಾಥ ಐಕಳ, ಬಂಟ್ವಾಳ ತಾಲೂಕಿನ ಎಸ್. ಮಹಾಬಲೇಶ್ವರ ಭಟ್, ಉಡುಪಿ ತಾಲೂಕಿನ ಗೋವಿಂದ ನಾಯಕ್, ಕಾರ್ಕಳ ತಾಲೂಕಿನ ಕಮಲಾವತಿ ಡಿ. ಅಧಿಕಾರಿ ಮುಂತಾದ ಸಹಕಾರಿ ಧುರೀಣರು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ್ದಾರೆ.

ಸ್ವಾತಂತ್ರ್ಯ ಹೋರಾಟಗಾರರಾದ ಕಾರ್ನಾಡ್ ಸದಾಶಿವರಾಯರು ಮೊಳಹಳ್ಳಿ ಶಿವರಾಯರ ಸ್ನೇಹಿತರಾಗಿದ್ದು ಸಹಕಾರ ಚಳುವಳಿಗೆ ತಮ್ಮ ಸಂಪೂರ್ಣ ಬೆಂಬಲ ನೀಡಿದ್ದರು. ಶಾಲಾ–ಕಾಲೇಜುಗಳಲ್ಲಿ ಸಹಕಾರ ತತ್ವದ ಪ್ರಚಾರ ಮತ್ತು ಸಹಕಾರ ಸಂಘಗಳ ಸ್ಥಾಪನೆ ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ವಿದ್ಯಾರ್ಥಿಗಳನ್ನು ಸಂಘಟಿಸುವುದರ[illegible] ಸಹಾಯಕವಾಯಿತು. ಸಹಕಾರ ಕ್ಷೇತ್ರದಲ್ಲಿ ನೀಡುವ ಪರಸ್ಪರ ಸಹಕಾರವು ಸ್ವಾತಂತ[illegible]ಟದಲ್ಲಿಯೂ ಒಟ್ಟಿಗೆ ಕೈಜೋಡಿಸಿ ಹೋರಾಡಲು ಜಿಲ್ಲೆಯ ಜನರಿಗೆ ಪ್ರೇರಣೆ ನೀಡಿ[illegible]ಗೆ ಸ್ವಾತಂತ್ರ್ಯ ಚಳುವಳಿ ಮತ್ತು ಸಹಕಾರ ಚಳುವಳಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಜೊತೆ ಜೊತೆಯಾಗಿ ಸಾಗಿದ್ದು ಮಾತ್ರವಲ್ಲ ಪರಸ್ಪರ ಪೂರಕವಾಗಿದ್ದವು.

ಸ್ವಸಹಾಯ ಮತ್ತು ಸ್ವಾವಲಂಬನೆಯ ತಳಹದಿಯ ಮೇಲೆ ಶೋಷಣೆ ರಹಿತ ಸಮಾಜ ನಿರ್ಮಾಣ ಸಹಕಾರ ಚಳುವಳಿಯ ಮುಖ್ಯ ಗುರಿ. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಈ ಗುರಿಯನ್ನು ಸಾಧಿಸುವಲ್ಲಿ ಸಹಕಾರ ಚಳುವಳಿ ಯಶಸ್ವಿಯಾಗಿದೆಯೇ? ಜಿಲ್ಲೆಯಲ್ಲಿ ಸಹಕಾರ ಚಳುವಳಿಯ ಇತಿಹಾಸವನ್ನು ಗಮನಿಸಿದಾಗ ಇತ್ತೀಚಿನ ವರ್ಷಗಳಲ್ಲಿ ಸಹಕಾರ ಚಳುವಳಿ ಈ ಗುರಿ ಸಾಧಿಸುವಲ್ಲಿ ಹೆಚ್ಚು ಯಶಸ್ವಿಯಾಗಿರುವುದನ್ನು ಕಾಣಬಹುದು.

೧೯೧೦ರಲ್ಲಿ ಪುತ್ತೂರಿನಲ್ಲಿ ಜನ್ಮ ತಳೆದು ಹಂತ ಹಂತವಾಗಿ ಬೆಳೆದಿರುವ ಸಹಕಾರ ಚಳುವಳಿ ಇಂದು ಜಿಲ್ಲೆಯಲ್ಲಿ ವ್ಯಾಪಕವಾಗಿ ಬೆಳೆದು ಬೇರೂರಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ಸಹಕಾರ ಚಳುವಳಿ

ಶಿಕ್ಷಿತ ಮಧ್ಯಮ ಮತ್ತು ಮೇಲ್ವರ್ಗದ ಚಳುವಳಿಯಾಗಿರುವುದು ಕಂಡು ಬರುತ್ತದೆ. ರಾಷ್ಟ್ರೀಯ ಚಳುವಳಿಯ ಪ್ರಭಾವವು ಸಾಕಷ್ಟು ಈ ಚಳುವಳಿಯ ಮೇಲಾಗಿದೆ. ೧೯೩೦ ರಿಂದ ೧೯೩೪ರ ಅವಧಿಯನ್ನು ಹೊರತು ಪಡಿಸಿ ಅದು ಆರಂಭವಾದಾಗಿನಿಂದ ೧೯೪೭ ರವರೆಗೂ ಚಳುವಳಿ ಜಿಲ್ಲೆಯಲ್ಲಿ ಉತ್ತಮ ಪ್ರಗತಿಯನ್ನು ಕಂಡಿದೆ. ವಿವಿಧ ರೀತಿಯ ಸಹಕಾರ ಸಂಘಗಳನ್ನು ಕಟ್ಟಿ ಬೆಳೆಸುವ ಪ್ರಯತ್ನಗಳು ಇಲ್ಲಿ ಆಗಿವೆ.

ಸ್ವಾತಂತ್ರ್ಯ ಪೂರ್ವದಲ್ಲಿ ಸಹಕಾರ ತತ್ವಗಳನ್ನು ಹಳ್ಳಿ ಹಳ್ಳಿಗಳಲ್ಲಿ ಪಸರಿಸುವ ಮತ್ತು ಗ್ರಾಮೀಣ ಪ್ರದೇಶದಲ್ಲಿ ಸಹಕಾರ ಸಂಘಗಳನ್ನು ಸ್ಥಾಪಿಸುವ ಪ್ರಯತ್ನಗಳಾಗಿ ಸಹಕಾರ ಚಳುವಳಿ ಜಿಲ್ಲೆಯಾದ್ಯಂತ ವ್ಯಾಪಕವಾಗಿ ಹಬ್ಬಿದ್ದರೂ ಅದು ಜನ ಸಾಮಾನ್ಯರ ಚಳುವಳಿಯಾಗಿರುವಂತೆ ಕಂಡು ಬರುವುದಿಲ್ಲ. ಸಹಕಾರ ಸಂಸ್ಥೆಗಳು ಮುಖ್ಯವಾಗಿ ಕೃಷಿ ಪತ್ತಿನ ಸಹಕಾರ ಸಂಘಗಳು ಅಮಿತ ಜವಾಬ್ದಾರಿಯ ನೆಲೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದುದರಿಂದ ಹೆಚ್ಚಿನ ಸಂಖ್ಯೆಯಲ್ಲಿ ಜನರು ಸಹಕಾರ ಸಂಘಗಳ ಸದಸ್ಯರಾಗಲು ಹಿಂಜರಿಯುತ್ತಿದ್ದರು. ಆರ್ಥಿಕವಾಗಿ ದುರ್ಬಲರಾಗಿರುವವರಿಗೆ ಕೂಡ ಸಹಕಾರ ಸಂಘಗಳಲ್ಲಿ ಹೆಚ್ಚಿನ ಅವಕಾಶ ಇರಲಿಲ್ಲ. ಮಹಿಳೆಯರು ಮತ್ತು ಹಿಂದುಳಿದ ವರ್ಗಗಳನ್ನು ಸಹಕಾರ ಚಳುವಳಿಯ ಭಾಗವನ್ನಾಗಿಸುವ ನಿಟ್ಟಿನಲ್ಲಿ ಮಹಿಳೆಯರ ಮತ್ತು ಹಿಂದುಳಿದ ವರ್ಗಗಳ ಸಹಕಾರ ಸಂಘಗಳು ಸ್ವಾತಂತ್ರ್ಯ ಪೂರ್ವದಲ್ಲಿ ಆರಂಭಿಸಲ್ಪಟ್ಟಿದ್ದರೂ ಆಗ ಅವು ಹೆಚ್ಚಿನ ಪ್ರಗತಿ ಸಾಧಿಸಲಿಲ್ಲ.

ಸ್ವಾತಂತ್ರ್ಯ ನಂತರದಲ್ಲಿ ಅದರಲ್ಲೂ ೧೯೫೯ರ ಕರ್ನಾಟಕ ಸಹಕಾರ ಕಾಯಿದೆ ಜಾರಿಗೆ ಬಂದ ಮೇಲೆ ಸಹಕಾರ ಚಳುವಳಿಯಲ್ಲಿ ಜನಸಾಮಾನ್ಯರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಲಾರಂಭಿಸಿದರು. ಇತ್ತೀಚಿನ ದಿನಗಳಲ್ಲಿ ಮಹಿಳೆಯರು ಮತ್ತು ಹಿಂದುಳಿದ ವರ್ಗಗಳ ಜನರು ಹೆಚ್ಚಿನ ಸಂಖ್ಯೆಯಲ್ಲಿ ಸಹಕಾರ ಚಳುವಳಿಯಲ್ಲಿ ಭಾಗವಹಿಸುತ್ತಿದ್ದಾರೆ. ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಪ್ರಾಥಮಿಕ ಸಹಕಾರಿ ಬ್ಯಾಂಕ್‌ಗಳ ಸಹಕಾರದೊಂದಿಗೆ ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ಆರಂಭಿಸಿರುವ ಸ್ವ-ಸಹಾಯ ಗುಂಪು ಯೋಜನೆಯಿಂದಾಗಿ ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಜನರು ಸಹಕಾರ ಚಳುವಳಿಯಲ್ಲಿ ಭಾಗಿಗಳಾಗುತ್ತಿರುವುದರಿಂದ ಇಂದು ಸಹಕಾರ ಚಳುವಳಿ ಸಾಮಾನ್ಯ ಜನರ ಚಳುವಳಿಯಾಗಿ ಮಾರ್ಪಟ್ಟಿದೆ. ಹಾಗೆಂದು ಜಿಲ್ಲೆಯ ಸಹಕಾರ ಚಳುವಳಿ ಸಂಪೂರ್ಣವಾಗಿ ಸಮಸ್ಯೆಗಳಿಂದ ಮುಕ್ತವಾಗಿಲ್ಲ. ಸಮಸ್ಯೆಗಳನ್ನು ಪರಿಹರಿಸಿಕೊಂಡು ಮುನ್ನಡೆದರೆ ಸಹಕಾರಿ ಚಳುವಳಿ ಇನ್ನಷ್ಟು ಯಶಸ್ವಿಯಾಗಿ ಪ್ರಗತಿ ದಾಖಲಿಸಲು ಸಾಧ್ಯವೆಂಬುದು ನನ್ನ ಅನಿಸಿಕೆ.

## ಕೊನೆ ಟಿಪ್ಪಣಿ

೧. ಈ ಮಾಹಿತಿಗಳನ್ನು ಹಿರಿಯರಾದ ವಿಠಲ ಶೆಟ್ಟಿ ಬೆಳಿಯೂರು ಗುತ್ತು (೮೬ ವ) ಇವರು ನೀಡಿದ್ದಾರೆ.

೨. ಅಭಿಶಂಕರ್ ಕೆ. (ಪ್ರ.ಸಂ)

ಗಝೆಟಿಯರ್ ಆಫ್ ಇಂಡಿಯಾ, ಕರ್ನಾಟಕ ಸ್ಟೇಟ್ ಗಝೆಟಿಯರ್ – ಸೌತ್ ಕೆನರಾ ಡಿಸ್ಟ್ರಿಕ್ಟ್, ೧೯೭೨, ೨೫೭

೩. ಪೇರಾಜೆ ಶ್ರೀನಿವಾಸ ರಾವ್

ಅವಿಭಜಿತ ದಕ್ಷಿಣ ಕನ್ನಡದಲ್ಲಿ ಸಹಕಾರ ಚಳುವಳಿ, "ಸಮನ್ವಯ" ಅಖಿಲ ಭಾರತ ಸುವರ್ಣ ಸಹಕಾರಿ ಸಪ್ತಾಹ ೨೦೦೩ರ ಸ್ಮರಣ ಸಂಚಿಕೆಯಲ್ಲಿ ಪ್ರಕಟಗೊಂಡ ಲೇಖನ

೪. ಪುತ್ತೂರು ಕೋ- ಓಪರೇಟಿವ್ ಟೌನ್ ಬ್ಯಾಂಕ್.ಲಿ. ಇದರ ಅಮೃತ ಮಹೋತ್ಸವದ ಸ್ಮರಣ ಸಂಚಿಕೆ –೧೯೮೫. ಪು.ಸಂ. ೨,೩

೫. ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಲಿ. ನ ವಜ್ರ ಮಹೋತ್ಸವದ ಸ್ಮರಣ ಸಂಚಿಕೆ ೧೯೭೨

೬. ಪುತ್ತೂರು ಕೋ- ಓಪರೇಟಿವ್ ಟೌನ್ ಬ್ಯಾಂಕ್. ಲಿ. ನ ಅಮೃತ ಮಹೋತ್ಸವದ ಸ್ಮರಣ ಸಂಚಿಕೆ –೧೯೮೫. ಪು.ಸಂ. ೪

೭. ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್‌ನ ಸುವರ್ಣ ಮಹೋತ್ಸವದ ಸ್ಮರಣ ಸಂಚಿಕೆ ೧೯೬೫ ಪು.ಸಂ.೯

೮. ಅದೇ ಪು.ಸಂ ೬ ಮತ್ತು ೧೦

೯. ಕನ್ನಡ ಸಹಕಾರಿ ಪತ್ರಿಕೆ ಎಪ್ರಿಲ್ ೧೯೫೨. ಪು.ಸಂ. ೬

೧೦. ರಾಧಾಕೃಷ್ಣ ಕೋಟೆ

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಹಕಾರ ಚಳುವಳಿಯ ಹೆಜ್ಜೆ ಗುರುತು, "ಶತಾ[illegible]ಂ" ಸ್ಮರಣ ಸಂಚಿಕೆ ೨೦೦೪ರಲ್ಲಿ ಪ್ರಕಟಗೊಂಡ ಲೇಖನ, ಪು.ಸಂ. ೪೦.

೧೧. ಅಭಿಶಂಕರ್ ಕೆ. (ಪು.ಸಂ)

ಗಝೆಟಿಯರ್ ಆಫ್ ಇಂಡಿಯಾ, ಕರ್ನಾಟಕ ಸ್ಟೇಟ್ ಗಝೆಟಿಯರ್ – ಸೌತ್ ಕೆನರಾ ಡಿಸ್ಟ್ರಿಕ್ಟ್, ೧೯೭೨, ಪು.ಸಂ. ೨೮೨

೧೨. ಕನ್ನಡ ಸಹಕಾರಿ ಎಪ್ರಿಲ್ ೧೯೫೨, ಪು.ಸಂ. ೧೭

೧೩. ಏರ್ಯ ಲಕ್ಷ್ಮೀನಾರಾಯಣ ಆಳ್ವ

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಹಕಾರ ಚಳುವಳಿ, "ದಕ್ಷಿಣ ಕನ್ನಡ ಸಹಕಾರಿ ಪತ್ರಿಕೆ" ಮೇ ೧೯೭೮ರಲ್ಲಿ ಸಂಚಿಕೆಯಲ್ಲಿ ಪ್ರಕಟಗೊಂಡ ಲೇಖನ ಪು.ಸಂ. ೧೦,೧೪

೧೪. ಅಭಿಶಂಕರ್. ಕೆ (ಪು.ಸಂ)

ಗಝೆಟಿಯರ್ ಆಫ್ ಇಂಡಿಯಾ, ಕರ್ನಾಟಕ ಸ್ಟೇಟ್ ಗಝೆಟಿಯರ್ – ಸೌತ್ ಕೆನರಾ ಡಿಸ್ಟ್ರಿಕ್ಟ್, ೧೯೭೨, ಪು.ಸಂ. ೨೮೨

೧೫. ಅದೇ ಪು.ಸಂ ೨೮೩, ೨೮೪

೧೬. ಕನ್ನಡ ಸಹಕಾರಿ ಎಪ್ರಿಲ್ ೧೯೫೨, ಪು.ಸಂ. ೭

೧೭. ಡಾ. ಗಣನಾಥ ಎಕ್ಕಾರು

ಹಿರಿಯ ಸಹಕಾರಿ ಮೊಳಹಳ್ಳಿ ಶಿವರಾಯ, ೨೦೦೯, ಪು.ಸಂ. ೧೫

೧೮. ಏರ್ಯ ಲಕ್ಷ್ಮೀನಾರಾಯಣ ಆಳ್ವ

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಹಕಾರ ಚಳುವಳಿ, "ದಕ್ಷಿಣ ಕನ್ನಡ ಸಹಕಾರಿ" ಮೇ ೧೯೭೮ರಲ್ಲಿ ಸಂಚಿಕೆಯಲ್ಲಿ ಪ್ರಕಟಗೊಂಡ ಲೇಖನ ಪು.ಸಂ. ೧೪

೧೯. ಕನ್ನಡ ಸಹಕಾರಿ ಎಪ್ರಿಲ್ ೧೯೫೨ ಪು.ಸಂ. ೭.

೨೦. ಪೈಲೂರು ಲಕ್ಷ್ಮೀನಾರಾಯಣ ರಾವ್

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಜೇನು ವ್ಯವಸಾಯ ಪ್ರಾರಂಭ ಮತ್ತು ಪ್ರಗತಿ, 'ಮಧು ಪ್ರಪಂಚ' ವಿಶೇಷಾಂಕದಲ್ಲಿರುವ ಲೇಖನ, ೨೦೦೨, ಪು.ಸಂ.೨

೨೧. ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್‌ನ ಸುವರ್ಣ ಮಹೋತ್ಸವದ ಸ್ಮರಣ ಸಂಚಿಕೆ ೧೪.೩.೧೯೬೫ ಪು.ಸಂ. ೧೧

೨೨. ಕನ್ನಡ ಸಹಕಾರಿ, ಎಪ್ರಿಲ್ ೧೯೫೨, ಪು.ಸಂ ೭

೨೩. ಪೇರಾಜೆ ಶ್ರೀನಿವಾಸ ರಾವ್ ಅವರ ವೈಯಕ್ತಿಕ ಸಂದರ್ಶನ, ೨೫.೦೫.೨೦೦೯

೨೪. ಸುಭಾಶ್ಚಂದ್ರ ಕೆದೂರು

ಮೊಳಹಳ್ಳಿ ಶಿವರಾಯರು ಮತ್ತು ಕರಾವಳಿಯಲ್ಲಿ ಸಹಕಾರದ ಸಾ[illegible], "ಉದಯವಾಣಿ" ದಿನ ಪತ್ರಿಕೆಯಲ್ಲಿ ಪ್ರಕಟವಾದ ಲೇಖನ, ೨೦.೧೧.೨೦೦೮

೨೫. ಗಝೆಟಿಯರ್ ಆಫ್ ಇಂಡಿಯಾ, ಕರ್ನಾಟಕ ಸ್ಟೇಟ್ ಗಝೆ[illegible] – ಸೌತ್ ಕೆನರಾ ಡಿಸ್ಟ್ರಿಕ್ಟ್, ೧೯೭೩, ಪು.ಸಂ. ೨೮೪

೨೬. ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್‌ನ ವಜ್ರ ಮಹೋ[illegible]ವ ಸ್ಮರಣ ಸಂಚಿಕೆ ೧೯೭೩

೨೭. ಸುಭಾಶ್ಚಂದ್ರ ಕೆದೂರು

ಮೊಳಹಳ್ಳಿ ಶಿವರಾಯರು ಮತ್ತು ಕರಾವಳಿಯಲ್ಲಿ ಸಹಕಾರದ ಸಾರ್ಥಕತೆ, "ಉದಯವಾಣಿ" ದಿನ ಪತ್ರಿಕೆಯಲ್ಲಿ ಪ್ರಕಟವಾದ ಲೇಖನ, ೨೦.೧೧.೨೦೦೮

೨೮. ಅಭಿಶಂಕರ್. ಕೆ (ಪು.ಸಂ)

ಗಝೆಟಿಯರ್ ಆಫ್ ಇಂಡಿಯಾ, ಕರ್ನಾಟಕ ಸ್ಟೇಟ್ ಗಝೆಟಿಯರ್ – ಸೌತ್ ಕೆನ[illegible] ಡಿಸ್ಟ್ರಿಕ್ಟ್, ೧೯೭೨, ಪು.ಸಂ. ೨೮೨

೨೯. ಅದೇ ಪು.ಸಂ ೨೮೩

೩೦. ಅದೇ ಪು.ಸಂ ೨೮೩

೩೧. ಕರಂಬಳ್ಳಿ ಸಂಜೀವ ಶೆಟ್ಟಿ

"ಸ್ಕ್ಯಾಡ್ಸ್ ನಡೆದ ಬಂದ ದಾರಿ", ದಕ್ಷಿಣ ಕನ್ನಡ ಕೃಷಿ ಅಭಿವೃದ್ಧಿ ಸಹಕಾರಿ ಸಂಘದ ಆರೋಭೋತ್ಸವದ ಸಂದರ್ಭದಲ್ಲಿ ಬರೆದ ಲೇಖನ, ೧೪.೮.೧೯೮೧

೩೨. ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್. ಲಿ. ನ ವಜ್ರ ಮಹೋತ್ಸವದ ಸ್ಮರಣ ಸಂಚಿಕೆ ೧೯೭೩

೩೩. ಅಭಿಶಂಕರ್ ಕೆ. (ಪ್ರ.ಸಂ)

ಗಝೆಟಿಯರ್ ಆಫ್ ಇಂಡಿಯಾ, ಕರ್ನಾಟಕ ಸ್ಟೇಟ್ ಗಝೆಟಿಯರ್ – ಸೌತ್ ಕೆನರಾ ಡಿಸ್ಟ್ರಿಕ್ಟ್, ೧೯೭೩. ಪು.ಸಂ. ೨೮೨ ಮತ್ತು ೨೮೫

೩೪. ಅದೇ ಪು.ಸಂ ೨೮೫

೩೫. ಎಸ್ ರಂಗಮೂರ್ತಿ

ದ ಸ್ಟೋರಿ ಆಫ್ ಸ್ವೀಟ್ ಸಕ್ಸೆಸ್ ಆಫ್ ಎ ಕೋ–ಓಪರೇಟಿವ್ ಜಾಯಂಟ್ "ಕ್ಯಾಂಪ್ಕೋ"

೩೬. ಡಾ। .ವಿ.ಎಸ್. ಸುಂದರ ಮೂರ್ತಿ

ಅವಿಭಾಜ್ಯ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕ್ಷೀರಕ್ರಾಂತಿ, 'ಸಮನ್ವಯ' ಸ್ಮರಣ ಸಂಚಿಕೆ ೨೦೦೩ರಲ್ಲಿ ಪ್ರಕಟಗೊಂಡ ಲೇಖನ.

೩೭. ಶ್ರೀನಿವಾಸ್ ಮೂರ್ತಿ

ಸಹಕಾರಿ ಚಳುವಳಿಯ ಪಕ್ಷಿನೋಟ, "ದಕ್ಷಿಣ ಕನ್ನಡ ಸಹಕಾರಿ" ಪತ್ರಿಕೆ ಅಗೋಸ್ತು ೧೯೮೨ರ ಸಂಚಿಕೆಯಲ್ಲಿ ಪ್ರಕಟಗೊಂಡ ಲೇಖನ.

೩೮. ಡಾ। .ವಿ.ಎಸ್. ಸುಂದರ ಮೂರ್ತಿ

ಅವಿಭಾಜ್ಯ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕ್ಷೀರಕ್ರಾಂತಿ, 'ಸಮನ್ವಯ' ಸ್ಮರಣ ಸಂಚಿಕೆ ೨೦೦೩ರಲ್ಲಿ ಪ್ರಕಟಗೊಂಡ ಲೇಖನ.

೩೯. ಮಂಗಳೂರು ಶಿಕ್ಷಕರ ಸಹಕಾರಿ ಕ್ರೆಡಿಟ್ ಸಂಘ. ಲಿ. ಮಂಗಳೂರ ಇದರ ೨೦೦೭–೦೮ನೇ ಸಾಲಿನ ವಾರ್ಷಿಕ ವರದಿ.

೪೦. ಪೇರಾಜೆ ಶ್ರೀನಿವಾಸ ರಾವ್ (ಗೌ.ಸಂ)

'ಸಾಧನ' ದಕ್ಷಿಣ ಕನ್ನಡ ಜಿಲ್ಲಾ ಮಹಿಳಾ ಸಹಕಾರಿ ಬ್ಯಾಂಕಿನ ಸ್ಮರಣ ಸಂಚಿಕೆ, ೨೦೦೪

೪೧. ಸಂಧ್ಯಾರಾಣಿ.ಕೆ

ಎಂ. ಬಿ. ಎ ಪದವಿಗಾಗಿ ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಅಧ್ಯಯನ ವರದಿ. ೨೦೦೩, ಪು.ಸಂ. ೪೭, ೪೮

೪೨. ಈ ಮಾಹಿತಿಯನ್ನು ಸಹಕಾರ ಸಂಘಗಳ ಡೆಪ್ಯೂಟಿ ರಿಜಿಸ್ಟ್ರಾರರ ಕಚೇರಿಯಿಂದ ಪಡೆದುಕೊಳ್ಳಲಾಗಿದೆ.

೪೩. ಡಾ. ಗಣನಾಥ ಎಕ್ಕಾರು

ಹಿರಿಯ ಸಹಕಾರಿ ಮೊಳಹಳ್ಳಿ ಶಿವರಾಯ, ೨೦೦೯, ಪು.ಸಂ. ೯, ೧೮

೪೪. "ಸಮಾಜ ಮೆಚ್ಚಿದ ಸಹಕಾರಿ" ಶ್ರೀ ಬಂಟ್ವಾಳ ನಾರಾಯಣ ನಾಯಕ್ ಷಷ್ಟ್ಯಬ್ದ ಸನ್ಮಾನ ಸಮಿತಿಯ ಪ್ರಕಟಣೆ. ಪು.ಸಂ, ೧೮, ೧೯.

**********

# ಅಧ್ಯಾಯ ೪

# ದಕ್ಷಿಣ ಕನ್ನಡದ ಪ್ರಮುಖ ಐತಿಹಾಸಿಕ ಸಹಕಾರ ಸಂಘಗಳು

೪.೧ : ಜಿಲ್ಲೆಯ ಮೊದಲ ಸಹಕಾರ ಸಂಘ: ಪುತ್ತೂರು ರೂರಲ್ ಕ್ರೆಡಿಟ್ ಸೊಸೈಟಿ
(ಪುತ್ತೂರು ಕೋ- ಓಪರೇಟಿವ್ ಟೌನ್ ಬ್ಯಾಂಕ್)

೪.೨ : ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್

೪.೩ : ದಕ್ಷಿಣ ಕನ್ನಡ ಜಿಲ್ಲಾ ಸಹಕಾರಿ ಯೂನಿಯನ್

೪.೪ : ಕೃಷಿ ಉತ್ಪನ್ನ ಸಹಕಾರಿ ಮಾರಾಟ ಸಂಘಗಳು ಮತ್ತು ಭೂ ಅಭಿವೃದ್ಧಿ ಬ್ಯಾಂಕ್

೪.೫ : ಹಾಲು ಉತ್ಪಾದಕರ ಸಹಕಾರಿ ಸಂಘಗಳು

೪.೬ : ಮೀನುಗಾರರ ಸಹಕಾರಿ ಸಂಘಗಳು

೪.೭ : ಜೇನು ವ್ಯವಸಾಯ ಮತ್ತು ಮಾರಾಟ ಸಹಕಾರಿ ಸಂಘಗಳು

೪.೮ : ಗ್ರಾಹಕರ ಸಹಕಾರಿ ಸಂಘಗಳು

೪.೯ : ಮಹಿಳಾ ಸಹಕಾರಿ ಸಂಘಗಳು

೪.೧೦ : ವಿದ್ಯಾರ್ಥಿ ಮತ್ತು ಅಧ್ಯಾಪಕರ ಸಹಕಾರಿ ಸಂಘಗಳು

೪.೧೧ : ಇತರ ಸಹಕಾರಿ ಸಂಘಗಳು

## ಅಧ್ಯಾಯ ೪

# ದಕ್ಷಿಣ ಕನ್ನಡದ ಪ್ರಮುಖ ಐತಿಹಾಸಿಕ ಸಹಕಾರ ಸಂಘಗಳು

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಆರ್ಥಿಕ ಕ್ಷೇತ್ರಕ್ಕೆ ಹಲವು ವಿಧದ ಸಹಕಾರ ಸಂಘಗಳು ತಮ್ಮದೇ ಆದ ಕೊಡುಗೆಗಳನ್ನು ನೀಡಿವೆ. ಮೊಳಹಳ್ಳಿ ಶಿವರಾಯರಿಂದ ಆರಂಭಿಸಲ್ಪಟ್ಟ ಸಹಕಾರ ಚಳುವಳಿ ಜಿಲ್ಲೆಯಾದ್ಯಂತ ಪಸರಿಸಿ ಹಲವಾರು ಸಹಕಾರ ಸಂಘಗಳು ಜಿಲ್ಲೆಯಲ್ಲಿ ಸ್ಥಾಪನೆಗೊಳ್ಳಲು ಕಾರಣವಾಗಿದೆ. ಪ್ರಸ್ತುತ ಜಿಲ್ಲೆಯ ಸಹಕಾರ ಕ್ಷೇತ್ರವು ವಿಸ್ತಾರವಾಗಿ ಬೆಳೆದಿದ್ದು ವಿವಿಧ ಬಗೆಯ ಸಹಕಾರ ಸಂಸ್ಥೆಗಳು ಇಲ್ಲಿವೆ. ೧೯೦೯ರ ನಂತರ ಜಿಲ್ಲೆಯಾದ್ಯಂತ ಹಲವು ಬಗೆಯ ಸಹಕಾರ ಸಂಘಗಳು ಸ್ಥಾಪಿಸಲ್ಪಟ್ಟಿವೆ. ಅವುಗಳಲ್ಲಿ ಕೆಲವು ಆರಂಭಾವಸ್ಥೆಯಲ್ಲೇ ಅಂತ್ಯ ಕಂಡರೆ ಇನ್ನು ಕೆಲವು ಹಲವು ಎಡರು ತೊಡರುಗಳೊಂದಿಗೆ ಇಂದಿಗೂ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡಿವೆ. ಈ ಅಧ್ಯಾಯದಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಕೆಲವು ಪ್ರಮುಖ ಐತಿಹಾಸಿಕ ಸಹಕಾರ ಸಂಘಗಳ ಹುಟ್ಟು ಮತ್ತು ಬೆಳವಣಿಗೆಯನ್ನು ವಿಶ್ಲೇಷಿಸಲಾಗಿದೆ.



### ೪.೧ ಜಿಲ್ಲೆಯ ಮೊದಲ ಸಹಕಾರ ಸಂಘ ಪುತ್ತೂರು ರೂರಲ್ ಕ್ರೆಡಿಟ್ ಸೊಸ್ಯಾಟಿ (ದಿ ಪುತ್ತೂರು ಕೋ-ಓಪರೇಟಿವ್ ಟೌನ್ ಬ್ಯಾಂಕ್ ಲಿ.)

ಪುತ್ತೂರು ರೂರಲ್ ಕ್ರೆಡಿಟ್ ಸೊಸ್ಯಾಟಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಪ್ರಥಮ ಸಹಕಾರಿ ಸಂಘ. ಈ ಸಹಕಾರ ಸಂಘವನ್ನು ಸ್ಥಾಪಿಸಿದವರು ಮೊಳಹಳ್ಳಿ ಶಿವರಾಯರು ಮತ್ತು ಅವರ ಸಹವರ್ತಿಗಳಾದ ಬೈಂದೂರು ರಾಮರಾವ್, ಪಿ. ಬ್ರಹ್ಮಯ್ಯ ಶೆಟ್ಟಿ, ಬಿ. ವೆಂಕಟ ಕೃಷ್ಣರಾವ್, ಬಿ.ಮಂಗೇಶರಾವ್, ಎಸ್. ಗಣಪತಿ ರಾವ್ ಮುಂತಾದವರು. ಈ ಸಹಕಾರ ಸಂಘವನ್ನು ರೂಪಿಸಲು ಪುತ್ತೂರಿನ ಯೂನಿಯನ್ ಕ್ಲಬ್ ವೇದಿಕೆಯನ್ನು ಒದಗಿಸಿತು. ೧೮೯೯ರಲ್ಲಿ ಸ್ಥಾಪಿಸಲ್ಪಟ್ಟ ಯೂನಿಯನ್ ಕ್ಲಬ್ ಪುತ್ತೂರಿನ ವಕೀಲರು, ಕ್ರೈಸ್ತ ಪಾದ್ರಿಗಳು ಮತ್ತು ಅಧಿಕಾರಿಗಳು ಸೇರುವ ತಾಣವಾಗಿತ್ತು. ಇಲ್ಲಿ ಊರಿನ ಸಮಸ್ಯೆಗಳು ಚರ್ಚಿಲ್ಪಡುತ್ತಿದ್ದವು. ಜನಪರ ಕಾಳಜಿ ಹೊಂದಿದ್ದ ಕ್ಲಬ್ಬಿನ ಸದಸ್ಯರುಗಳಾಗಿದ್ದ ಮೊಳಹಳ್ಳಿ ಶಿವರಾಯರು ಮತ್ತು ಇತರ ಮಹನೀಯರು ಪುತ್ತೂರಿನ ಸುತ್ತುಮುತ್ತಲಿನ ಹಳ್ಳಿಗಳಲ್ಲಿ ಜನರ ಆರ್ಥಿಕ ಬವಣೆಗಳನ್ನು ಕಣ್ಣಾರೆ ಕಂಡಿದ್ದರು. ಮತ್ತು ಅದರ ನಿವಾರಣೆಯ ಕುರಿತು ಗಂಭೀರವಾಗಿ ಚಿಂತನೆ ನಡೆಸಿದರು. ೧೯೦೪ರಲ್ಲಿ ಆಗಿನ ಬ್ರಿಟಿಷ್ ಸರಕಾರ ಜನರ ಆರ್ಥಿಕ ಪರಿಸ್ಥಿತಿಯ ಸುಧಾರಣೆಗಾಗಿ ಸಹಕಾರ ಕಾಯಿದೆಯನ್ನು ಜಾರಿಗೆ ತಂದಿರುವುದನ್ನು

ತಿಳಿದ ಮೊಳಹಳ್ಳಿ ಶಿವರಾಯರು ಮತ್ತು ಅವರ ಸಹವರ್ತಿಗಳು ಈ ಶಾಸನದ ಪ್ರಯೋಜನ ಪಡೆಯಲು ಬೇಕಾಗಿದ್ದ ಅನುಭವಗಳನ್ನು ಸಂಗ್ರಹಿಸಿ ೧೯೦೯ ಏಪ್ರಿಲ್ ೪ ರಂದು ಮದ್ರಾಸು ಪ್ರಾಂತ್ಯದ ರಿಜಿಸ್ಟ್ರಾರವರಿಗೆ ಮನವಿ ಮಾಡಿ ಪುತ್ತೂರಿನಲ್ಲಿ ಒಂದು ಸಹಕಾರ ಸಂಘವನ್ನು ಸ್ಥಾಪಿಸಬೇಕಂತಲೂ ಸಂಘಕ್ಕೆ ಸಂಬಂಧಿಸಿದ ಉಪನಿಬಂಧನೆಗಳಿಗನುಗುಣವಾಗಿ ನಡೆದುಕೊಳ್ಳಲು ಬದ್ಧರಾಗಿರುವುದಾಗಿ ತಿಳಿಸಿದರು. ಅದರ ಫಲವಾಗಿ "ಪುತ್ತೂರು ರೂರಲ್ ಕ್ರೆಡಿಟ್ ಸೊಸ್ಯಾಟಿ" ಅಕ್ಟೋಬರ್ ೨೮, ೧೯೦೯ ರಂದು ಪುತ್ತೂರಿನಲ್ಲಿ ಪ್ರಾರಂಭವಾಯಿತು[೧].

೧೯೦೯ರಲ್ಲಿ ವಕೀಲರಾದ ಹೆಚ್. ಗಣಪತಿರಾವ್ ಅವರ ವಕೀಲಿ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಪುತ್ತೂರು ರೂರಲ್ ಕ್ರೆಡಿಟ್ ಸೊಸ್ಯಾಟಿ ೧೯೧೯ರಲ್ಲಿ ಸ್ವತಂತ್ರ ಕಟ್ಟಡವನ್ನು ಹೊಂದಿತು[೨]. ಬೈಂದೂರು ರಾಮರಾವ್ ಅವರು ಅದರ ಮೊದಲ ಅಧ್ಯಕ್ಷರಾಗಿದ್ದರು ಮತ್ತು ಹೆಚ್.ಗಣಪತಿರಾಯರು ಅದರ ಪ್ರಥಮ ಗೌರವ ಕಾರ್ಯದರ್ಶಿಯಾಗಿದ್ದರು. ಆರಂಭದಲ್ಲಿ ಮದ್ರಾಸಿನ ಸೆಂಟ್ರಲ್ ಅರ್ಬನ್ ಬ್ಯಾಂಕಿನಿಂದ ೩೫೦ ರೂ. ಸಾಲ ಪಡೆದುಕೊಂಡು ವ್ಯವಹಾರ ಆರಂಭಿಸಿದ ಈ ಸಹಕಾರ ಸಂಘ ಮುಂದೆ ಶೀಘ್ರವಾಗಿ ಸಾಲ ಮರು ಪಾವತಿ ಮಾಡಿ ತಾನು ಶೇಖರಿಸಿದ ಠೇವಣಿಯಿಂದಲೇ ತನ್ನ ವ್ಯವಹಾರಗಳನ್ನು ಮುಂದುವರಿಸಿಕೊಂಡು ಬಂದಿತು[೩].

೧೯೧೪ರಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಸ್ಥಾಪನೆಯಾಗುವವರೆಗೆ ಜಿಲ್ಲೆಯಲ್ಲಿ ವಿವಿಧೆಡೆ ಆರಂಭಗೊಂಡಿದ್ದ ೧೩ ಸಹಕಾರ ಸಂಘಗಳನ್ನು ಪೋಷಿಸುವ ಹೊಣೆಯು ಪುತ್ತೂರು ರೂರಲ್ ಕ್ರೆಡಿಟ್ ಸೊಸ್ಯಾಟಿ ಮೇಲಿತ್ತು. ಪುತ್ತೂರು ರೂರಲ್ ಕ್ರೆಡಿಟ್ ಸೊಸ್ಯಾಟಿ ಆರಂಭವಾಗಿ ಹತ್ತನೆಯ ವರ್ಷದಲ್ಲಿ (೧೯೧೯ರಲ್ಲಿ) ಈ ಸಂಘವನ್ನು ವಿಭಜಿಸಿ ೧೦೧ ವ್ಯಾಪಾರಸ್ಥರಿಗಾಗಿ "ವ್ಯಾಪಾರಿಗಳ ಸಹಕಾರಿ ಸಂಘ"ವನ್ನು ಪ್ರತ್ಯೇಕವಾಗಿ ಸ್ಥಾಪಿಸಲಾಯಿತು. ಆದರೆ ವ್ಯಾಪಾರಿಗಳ ಸಹಕಾರ ಸಂಘವನ್ನು ೩೦.೦೬.೧೯೩೬ರಲ್ಲಿ ಮೂಲ ಸಂಘದೊಂದಿಗೆ ಪುನಃ ವಿಲೀನಗೊಳಿಸಲಾಯಿತು[೪].

೧೯೦೯-೧೦ರಲ್ಲಿ ೩೩ ಸದಸ್ಯರುಗಳನ್ನು ಹೊಂದಿದ್ದ ಪುತ್ತೂರು ರೂರಲ್ ಕ್ರೆಡಿಟ್ ಸೊಸ್ಯಾಟಿ ೫೫ ರೂ. ಐನ್ ಲಾಭ ಗಳಿಸಿತ್ತು[೫]. ೧೯೪೬ ರವರೆಗೆ ಒಂದು ಅಮಿತ ಜವಾಬ್ದಾರಿಯ ಸಂಸ್ಥೆಯಾಗಿದ್ದ ಪುತ್ತೂರು ರೂರಲ್ ಕ್ರೆಡಿಟ್ ಸೊಸ್ಯಾಟಿ ೨೧.೦೨.೧೯೪೬ರಲ್ಲಿ ಮಿತ ಜವಾಬ್ದಾರಿಯ ಸಂಸ್ಥೆಯಾಗಿ ಪರಿವರ್ತನೆಗೊಂಡಿತು. ಅದೇ ವರ್ಷ ಈ ಸಂಸ್ಥೆಯ ಹೆಸರನ್ನು "ದಿ ಪುತ್ತೂರು ಕೋ-ಓಪರೇಟಿವ್ ಟೌನ್ ಬ್ಯಾಂಕ್ ಲಿಮಿಟೆಡ್" ಎಂದು ಬದಲಾಯಿಸಲಾಯಿತು. ಅದರ ಅಧಿಕಾರ ವ್ಯಾಪ್ತಿಯನ್ನು ಕೆಮ್ಮಿಂಜೆ, ಚಿಕ್ಕಮುಡ್ನೂರು ಮತ್ತು ಬನ್ನೂರು ಗ್ರಾಮಗಳಿಗೆ ವಿಸ್ತರಿಸಲಾಯಿತು. ಆದರೆ ೧೯೬೦ರ ನಂತರ ಬ್ಯಾಂಕಿನ ಚಟುವಟಿಕೆಗಳು ಪುತ್ತೂರು ಕಸಬಾಗೆ ಮಾತ್ರ ಸೀಮಿತಗೊಂಡವು[೬].

ಆರಂಭದಿಂದಲೇ ಸಾಮಾಜಿಕ ಕಳಕಳಿಯನ್ನು ಹೊಂದಿದ್ದ ಬ್ಯಾಂಕು ೧೯೧೩ರಲ್ಲಿ ಪುತ್ತೂರಿನ ಬೀದಿಗಳಿಗೆ ಬೀದಿ ದೀಪವನ್ನು ಒದಗಿಸುವ ವ್ಯವಸ್ಥೆಯನ್ನು ಕೈಗೊಂಡಿತ್ತು. ೧೯೧೯ರಲ್ಲಿ ಸಂಘದ ಸ್ವಂತ ಕಟ್ಟಡದಲ್ಲಿ ಒಂದು ಗ್ರಂಥಾಲಯವನ್ನು ತೆರೆಯಲಾಯಿತು. ೧೯೨೨ರಲ್ಲಿ ಬೊಳ್ವಾರಿನಲ್ಲಿ ಒಂದು ಮತ್ತು ಸಂಘದ ಕಟ್ಟಡದಲ್ಲಿ ಒಂದು ಹೀಗೆ ರಾತ್ರಿ ಶಾಲೆಗಳನ್ನು ಸಂಘದ ಸಾರ್ವಜನೋಪಕಾರ ನಿಧಿಯಿಂದ ನಡೆಸಲಾಗುತ್ತಿತ್ತು. ಆದರೆ ಸಂಘದ ವತಿಯಿಂದ ನಡೆಸಲ್ಪಡುತ್ತಿದ್ದ ಈ ಶಾಲೆಗಳು ಮುಂದೆ ಮುಚ್ಚಲ್ಪಟ್ಟವು. ೧೯೭೧ರಿಂದ ಸರಕಾರದ ಗ್ರಂಥಾಲಯವು ಬ್ಯಾಂಕಿನ ಕಟ್ಟಡದಲ್ಲಿ ಕಾರ್ಯ ನಿರ್ವಹಿಸುತ್ತಿತ್ತು. (ಈಗ ಸ್ವಂತ ಕಟ್ಟಡವನ್ನು ಹೊಂದಿದೆ) ೧೯೫೬ರಲ್ಲಿ ಬ್ಯಾಂಕಿನ ಕಟ್ಟಡಕ್ಕೆ ಕಟ್ಟಿಸಿದ ಮಾಳಿಗೆ ಪುತ್ತೂರಿನ ಜನಕ್ಕೆ ಪುರಭವನವಾಯಿತು. ಆರಂಭದಿಂದಲೇ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನವನ್ನು ವಿತರಿಸುತ್ತಿದ್ದ ಬ್ಯಾಂಕ್ ಇಂದಿಗೂ ಆ ಪರಿಪಾಠವನ್ನು ಮುಂದುವರಿಸಿಕೊಂಡು ಬಂದಿದೆ. ೧೯೩೪ರಲ್ಲಿ ಒಂದು ಬೀಜದ ಹೋರಿಯನ್ನು ಖರೀದಿಸಿ ತನ್ಮೂಲಕ ಊರವರ ದನಗಳ ತಳಿಯನ್ನು ಅಭಿವೃದ್ಧಿಗೊಳಿಸಲು ಯತ್ನಿಸಿದ ಬ್ಯಾಂಕ್ ಈ ಯೋಜನೆಯನ್ನು ಮಾತ್ರ ಅರ್ಧದಲ್ಲೇ ಕೈಬಿಟ್ಟಿತು[೭].

ಆರ್ಥಿಕವಾಗಿ ಕಡಿಮೆ ಆದಾಯ ಇರುವ ಮಜದೂರರು, ಕಾರ್ಮಿಕ ವರ್ಗ, ಸಣ್ಣ ವ್ಯಾಪಾರಸ್ಥರಿಗೆ ಅತೀ ಅಗತ್ಯದ ಸಂದರ್ಭದಲ್ಲಿ ಯಾವುದೇ ವೈಯಕ್ತಿಕ ಜವಾಬ್ದಾರಿಯ ಮೇಲೆ ಪ್ರಾರಂಭದಿಂದಲೇ ಸಾಲ ಸೌಲಭ್ಯವನ್ನು ನೀಡುತ್ತಿದ್ದ ಬ್ಯಾಂಕು ಈಗಲೂ ಆ ಪರಂಪರೆಯನ್ನು ಮುಂದುವರಿಸಿಕೊಂಡು ಬರುತ್ತಿದೆ[೮].

ಹೀಗೆ ಜಿಲ್ಲೆಯ ಪ್ರಥಮ ಸಹಕಾರ ಸಂಘ ಎಂಬ ಹೆಗ್ಗಳಿಕೆಯೊಂದಿಗೆ ಹಂತ ಹಂತವಾಗಿ ಬೆಳೆದು ಬಂದಿರುವ "ದಿ ಪುತ್ತೂರು ಕೋ-ಓಪರೇಟಿವ್ ಟೌನ್ ಬ್ಯಾಂಕ್" ಇಂದಿಗೂ ಉತ್ತಮ ಆರ್ಥಿಕ ವ್ಯವಹಾರ ನಡೆಸುತ್ತಿದೆ. ವಿದ್ಯಾರ್ಥಿ ವೇತನ ವಿತರಣೆ, ಶಾಲೆಗಳಿಗೆ ಪೀಠೋಪಕರಣ ಒದಗಿಸುವಿಕೆ, ಪುತ್ತೂರಿನ ರಾಮಕೃಷ್ಣ ಸೇವಾ ಸಮಾಜದ ಅನಾಥ ಮಕ್ಕಳ ಪಾಲನೆಯ ವೆಚ್ಚ ಭರಿಸುವಿಕೆ ಮುಂತಾದ ಶೈಕ್ಷಣಿಕ ಹಾಗೂ ಸಾಮಾಜಿಕ ಸೇವೆಯಲ್ಲಿ ತೊಡಗಿಕೊಂಡಿದೆ.

## ೪.೨ ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಲಿಮಿಟೆಡ್

೧೯೧೨ರ ಪರಿಷ್ಕೃತಗೊಂಡ ಸಹಕಾರ ಕಾಯಿದೆಯ ಅನ್ವಯ ದಕ್ಷಿಣ ಕನ್ನಡ ಜಿಲ್ಲೆಯ ವಿವಿಧೆಡೆಗಳಲ್ಲಿ ಸ್ಥಾಪಿಸಲ್ಪಟ್ಟ ಹಲವು ಸಹಕಾರ ಸಂಘಗಳಿಗೆ ಹಣಕಾಸಿನ ನೆರವು ನೀಡುವ ಉದ್ದೇಶದೊಂದಿಗೆ ೨೪ ಜನವರಿ ೧೯೧೪ ರಂದು ಪುತ್ತೂರಿನಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಜನ್ಮ ತಾಳಿತು. ೧೯೧೨ರ ಪರಿಷ್ಕೃತ ಸಹಕಾರ ಕಾಯಿದೆಯನ್ವಯ ಜಿಲ್ಲೆಯಲ್ಲಿ

ಹಲವು ಸಹಕಾರ ಸಂಘಗಳು ಹುಟ್ಟಿಕೊಂಡಾಗ ಮೊದಲು ಅದನ್ನು ಪೋಷಿಸುವ ಹೊಣೆಯನ್ನು ಪುತ್ತೂರು ರೂರಲ್ ಕ್ರೆಡಿಟ್ ಸೊಸ್ಯಾಟಿ ವಹಿಸಿಕೊಂಡಿತ್ತು. ಆದರೆ ಪ್ರಾಥಮಿಕ ಸಹಕಾರ ಸಂಘಗಳಿಗೆ ಹಣಕಾಸಿನ ನೆರವು ಒದಗಿಸುವ ಉದ್ದೇಶಕ್ಕಾಗಿ ಒಂದು ಮಾತೃ ಸಂಸ್ಥೆಯ ಅವಶ್ಯಕತೆಯನ್ನು ಮನಗಂಡ ಮೊಳಹಳ್ಳಿ ಶಿವರಾಯರು ಮತ್ತು ಇತರ ಸಹಕಾರಿಗಳು ಆ ನಿಟ್ಟಿನಲ್ಲಿ ಕಾರ್ಯ ಪ್ರವೃತ್ತರಾದರು.

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಆಗ ಅಸ್ತಿತ್ವದಲ್ಲಿದ್ದ ೩೪ ಸೊಸ್ಯಾಟಿಗಳ ಪೈಕಿ ೨೩ ಸೊಸ್ಯಾಟಿಗಳ ಪ್ರತಿನಿಧಿಗಳು ಮತ್ತು ೬೦ ವೈಯಕ್ತಿಕ ಸದಸ್ಯರು ೧೯೧೩ರಲ್ಲಿ ಆಗ ಮದ್ರಾಸು ಸಂಸ್ಥಾನದ ಕೋ-ಓಪರೇಟಿವ್ ಸೊಸ್ಯಾಟಿಗಳ ರಿಜಿಸ್ಟ್ರಾರರಾಗಿದ್ದ ಸ್ವಾಮಿಕಣ್ಣು ಪಿಳ್ಳೆಯವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಆಗ ಅನೇಕ ಸಹಕಾರಿ ಸಂಘಗಳ ಕೇಂದ್ರವಾಗಿದ್ದ ಪುತ್ತೂರಿನಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕನ್ನು ಸ್ಥಾಪಿಸಬೇಕೆಂದು ಠರಾವು ಮಂಡಿಸಿದರು. ಅದರ ಫಲವಾಗಿ "ದಕ್ಷಿಣ ಕನ್ನಡ ಕೇಂದ್ರ ಸಹಕಾರಿ ಬ್ಯಾಂಕು" ೩೦.೧೧.೧೯೧೩ರಲ್ಲಿ ನೋಂದಾಯಿಸಲ್ಪಟ್ಟು ೨೪ ಜನವರಿ ೧೯೧೪ರಲ್ಲಿ ಅಂದಿನ ಮದ್ರಾಸ್ ಸರಕಾರದ ಏಳನೆಯ ಜಿಲ್ಲಾ ಬ್ಯಾಂಕಾಗಿ ಮತ್ತು ಜಿಲ್ಲೆಯ ಪ್ರಥಮ ಜಿಲ್ಲಾ ಕೇಂದ್ರ ಬ್ಯಾಂಕಾಗಿ ಪುತ್ತೂರಿನಲ್ಲಿ ಕಾರ್ಯಾರಂಭ ಮಾಡಿತು. ಬಿ. ರಾಮರಾವ್ ಅವರು ಅದರ ಮೊದಲ ಅಧ್ಯಕ್ಷರಾಗಿದ್ದರು. ಮತ್ತು ರಾಮರಾವ್ ಅದರ ಪ್ರಥಮ ನಿರ್ದೇಶಕರಾಗಿದ್ದರು[೯].

ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕು ಆರಂಭವಾದ ಒಂದು ವರ್ಷದಲ್ಲೇ ಉತ್ತಮ ಪ್ರಗತಿ ಸಾಧಿಸಿತ್ತು. ಮದ್ರಾಸು ಸಂಸ್ಥಾನದ ಸಹಕಾರಿ ಸಂಘಗಳ ರಿಜಿಸ್ಟ್ರಾರರಾಗಿದ್ದ ಸ್ವಾಮಿಕಣ್ಣು ಪಿಳ್ಳೆಯವರು "ಬ್ಯಾಂಕು ಸರ್ವತೋಮುಖವಾಗಿ ಪ್ರಗತಿಯನ್ನು ತೋರಿಸುತ್ತಿದೆ" ಎಂದು ಬ್ಯಾಂಕಿನ ಕಾರ್ಯ ವೈಖರಿಯನ್ನು ಶ್ಲಾಘಿಸಿದ್ದರು. ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕು ಸಹಕಾರ ಚಳುವಳಿಯ ಬೆಳವಣಿಗೆಯನ್ನು ಉತ್ತಮವಾಗಿ ಪೋಷಿಸಿತು. ಜಿಲ್ಲೆಯಲ್ಲಿ ಹುಟ್ಟಿಕೊಂಡ ವಿವಿಧ ಬಗೆಯ ಸಹಕಾರ ಸಂಘಗಳನ್ನು ಪೋಷಿಸುವ ಜವಾಬ್ದಾರಿ ಹೊತ್ತಿದ್ದ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಸಹಕಾರ ಸಂಘಗಳ ಮೇಲ್ವಿಚಾರಣೆಗೆ ಮೇಲ್ವಿಚಾರಕ ಯೂನಿಯನ್‌ಗಳನ್ನು ಸಂಘಟಿಸಿತು. ೧೯೧೯ರಲ್ಲಿ ಕನ್ನಡ ಸಹಕಾರಿ ಪತ್ರಿಕೆಯನ್ನು ಪ್ರಕಟಿಸಲು ಸಹಾ ಬ್ಯಾಂಕ್ ಅನುಕೂಲ ಮಾಡಿಕೊಟ್ಟಿತು[೧೦].

೧೯೨೭ರ ವೇಳೆಗೆ ೪೧೮ ಸಹಕಾರ ಸಂಘಗಳ ಸದಸ್ಯತ್ವವನ್ನು ಹೊಂದಿದ್ದ ಬ್ಯಾಂಕ್ ಅವುಗಳಿಗೆ ೧೧,೩೦,೭೪೯ ರೂ. ಗಳಷ್ಟು ಸಾಲವನ್ನು ವಿತರಿಸಿತ್ತು. ಅದೇ ವರ್ಷ ಬ್ಯಾಂಕಿನ ಕೇಂದ್ರ ಕಛೇರಿಯನ್ನು ಪುತ್ತೂರಿನಿಂದ ಜಿಲ್ಲಾ ಕೇಂದ್ರವಾದ ಮಂಗಳೂರಿಗೆ ವರ್ಗಾಯಿಸಲಾಯಿತು. ೧೯೨೯ ರಿಂದ ೧೯೪೯ ರವರೆಗೆ ಕಾರ್ನಾಡ್ ಸದಾಶಿವರಾಯರ ಮನೆಯಲ್ಲಿ ತನ್ನ ಕೇಂದ್ರ ಕಛೇರಿಯನ್ನು

ಹೊಂದಿದ್ದ ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ೧೯೪೯ರಲ್ಲಿ ಸ್ವಂತ ಕಟ್ಟಡಕ್ಕೆ ತನ್ನ ಕಛೇರಿಯನ್ನು ಸ್ಥಳಾಂತರಿಸಿತು. (೧೯೮೩ರಲ್ಲಿ ಮತ್ತೊಂದು ಆಧುನಿಕ ಕಟ್ಟಡಕ್ಕೆ ಸ್ಥಳಾಂತರಿಸಲ್ಪಟ್ಟಿತು)[೧೧].

೧೯೨೭ ರಿಂದ ೧೯೩೪ ರವರೆಗೆ ಬ್ಯಾಂಕು ಸ್ವಲ್ಪ ಹಿನ್ನಡೆ ಅನುಭವಿಸಿದರೂ, ೧೯೩೪ರ ನಂತರ ಮತ್ತೆ ಅಭಿವೃದ್ಧಿಯೆಡೆಗೆ ಹೆಜ್ಜೆ ಹಾಕಿತು. ೧೯೩೯ರಲ್ಲಿ ತನ್ನ ರಜತ ಮಹೋತ್ಸವವನ್ನು ಆಚರಿಸಿಕೊಂಡ ಬ್ಯಾಂಕ್ ಆಗ ೩೧೩ ಸಹಕಾರಿ ಸಂಘಗಳ ಸದಸ್ಯತ್ವ ಪಡೆದುಕೊಂಡು ರೂ. ೧.೨೭ ಷೇರು ಧನವನ್ನು ರೂ ೮.೫೫ ಲಕ್ಷ ಠೇವಣಿಯನ್ನು ಸಂಗ್ರಹಿಸಿ ಒಟ್ಟು ೯.೦೮ ಲಕ್ಷಗಳಷ್ಟು ಸಾಲವನ್ನು ವಿತರಿಸಿತ್ತು. ಅದೇ ಕಾಲಕ್ಕೆ ಪ್ರಾರಂಭವಾದ ಎರಡನೆಯ ಮಹಾಯುದ್ಧದ ಪರಿಣಾಮವಾಗಿ ಜಿಲ್ಲೆಯಲ್ಲಿ ತಲೆದೋರಿದ ಆಹಾರದ ಅಭಾವದ ಸಂದರ್ಭದಲ್ಲಿ ಜಿಲ್ಲೆಯ ಸಹಕಾರ ರಖಂ ವ್ಯಾಪಾರ ಸೊಸ್ಯಾಟಿಗೆ ಜನರಿಗೆ ಆಹಾರ ಧಾನ್ಯಗಳನ್ನು ವಿತರಿಸಲು ಅಗತ್ಯವಿರುವ ಧನ ಸಹಾಯವನ್ನು ನೀಡಿತು[೧೨]. ೧೯೩೯ರಲ್ಲಿ ಸ್ಥಾಪಿಸಲ್ಪಟ್ಟ ಸಹಕಾರ ಅಭಿವೃದ್ಧಿ ಸಂಘ (ಕೋ-ಓಪರೇಟಿವ್ ಎಡ್ವಾನ್ಸ್‌ಮೆಂಟ್ ಸೊಸ್ಯಾಟಿ) ಚಟುವಟಿಕೆಗಳಿಗೆ ದ.ಕ. ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕು ದೇಣಿಗೆ ನೀಡಿ ಸಹಾಯ ಮಾಡಿತು.

ಸ್ವಾತಂತ್ರ್ಯಾ ನಂತರ ತನ್ನ ಕಾರ್ಯವ್ಯಾಪ್ತಿಯನ್ನು ವಿಸ್ತರಿಸಿಕೊಂಡಿರುವ ದ.ಕ. ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಜಿಲ್ಲೆಯ ವಿವಿಧ ಸಹಕಾರ ಸಂಘಗಳಿಗೆ ಸಾಲ ಸೌಲಭ್ಯವನ್ನು ನೀಡುತ್ತಲಿದೆ. ಜನಸಾಮಾನ್ಯರಿಗೆ ಗೃಹೋಪಯೋಗಿ ವಸ್ತುಗಳನ್ನು ಕೊಂಡುಕೊಳ್ಳಲು ಮತ್ತು ಇತರ ಅಗತ್ಯ ಕೆಲಸಗಳಿಗೆ ಚಿನ್ನಾಭರಣಗಳ ಈಡಿನ ಮೇಲೆ ಸಾಲವನ್ನು ಒದಗಿಸುತ್ತಲಿದೆ[೧೩].

ಇತ್ತೀಚಿನ ವರ್ಷಗಳಲ್ಲಿ "ದುರ್ಬಲರೊಂದಿಗೆ ಬ್ಯಾಂಕಿಂಗ್" ಎಂಬ ಉಕ್ತಿಯೊಂದಿಗೆ ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಪ್ರಾಥಮಿಕ ಸಹಕಾರಿ ಬ್ಯಾಂಕ್‌ಗಳ ಸಹಕಾರದೊಂದಿಗೆ ನವೋದಯ ಎಂಬ ಹೆಸರಿನೊಂದಿಗೆ ಸ್ವಸಹಾಯ ಗುಂಪುಗಳನ್ನು ರಚಿಸಿ ಯಶಸ್ವಿಯಾಗಿ ಅನುಷ್ಠಾನಗೊಳಿಸಿದೆ[೧೪]. ೯೫ ವರ್ಷಗಳ ದೀರ್ಘ ಇತಿಹಾಸ ಹೊಂದಿರುವ ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಇಂದು ಸಹಕಾರಿ ವಲಯದ ಉತ್ತಮ ಬ್ಯಾಂಕ್ ಆಗಿ ದಕ್ಷಿಣ ಕನ್ನಡ ಜಿಲ್ಲೆಯ ಆರ್ಥಿಕತೆಗೆ ತನ್ನದೇ ಆದ ಕೊಡುಗೆ ನೀಡಿದೆ. ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ರಾಜ್ಯ ಅಪೆಕ್ಸ್ ಸಹಕಾರಿ ಬ್ಯಾಂಕ್‌ನಿಂದ ಉತ್ತಮ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಪ್ರಶಸ್ತಿ, ನಬಾರ್ಡ್‌ನಿಂದ ಅತೀ ಹೆಚ್ಚು ಸಂಖ್ಯೆಯಲ್ಲಿ ಸ್ವ-ಸಹಾಯ ಗುಂಪುಗಳ ರಚನೆಗಾಗಿ ಪ್ರಶಸ್ತಿ, ಕರ್ನಾಟಕ ರಾಜ್ಯ ಸಹಕಾರಿ ಮಹಾಮಂಡಲದ ವತಿಯಿಂದ ೨೦೦೭ರಲ್ಲಿ ಶ್ರೇಷ್ಠ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಪ್ರಶಸ್ತಿಯನ್ನು ಗಳಿಸಿಕೊಂಡಿದೆ.

### ೪.೨ ದಕ್ಷಿಣ ಕನ್ನಡ ಜಿಲ್ಲಾ ಸಹಕಾರಿ ಯೂನಿಯನ್

ದಕ್ಷಿಣ ಕನ್ನಡ ಜಿಲ್ಲಾ ಸಹಕಾರಿ ಯೂನಿಯನ್ ಅಸ್ಥಿತ್ವಕ್ಕೆ ಬಂದುದು ೧೬.೦೪.೧೯೬೦ರಲ್ಲಿ. ೧೯೩೯ರಲ್ಲಿ ಸ್ಥಾಪಿಸಲ್ಪಟ್ಟು ಸಹಕಾರಿ ಶಿಕ್ಷಣ, ತರಬೇತಿ ಮತ್ತು ಪ್ರಚಾರ ಕಾರ್ಯ ನಿರ್ವಹಿಸುತ್ತಿದ್ದ ದಕ್ಷಿಣ ಕನ್ನಡ ಎಡ್ವಾನ್ಸ್‌ಮೆಂಟ್ ಸೊಸ್ಯಾಟಿಯನ್ನೇ ೧೯೬೦ರಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಸಹಕಾರಿ ಯೂನಿಯನ್ ಎಂಬ ಹೆಸರಿನಲ್ಲಿ ಮರು ನೋಂದಾವಣೆ ಮಾಡಲಾಯಿತು. ದಕ್ಷಿಣ ಕನ್ನಡ ಜಿಲ್ಲಾ ಸಹಕಾರಿ ಯೂನಿಯನ್ ಆರಂಭದಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಎಲ್ಲಾ ತಾಲೂಕುಗಳನ್ನು ತನ್ನ ಕಾರ್ಯವ್ಯಾಪ್ತಿಯೊಳಗೆ ಸೇರಿಸಿಕೊಂಡಿತ್ತು. ಆದರೆ ನೂತನ ಉಡುಪಿ ಜಿಲ್ಲೆಯ ರಚನೆಯಾದಾಗ ಉಡುಪಿ, ಕಾರ್ಕಳ ಮತ್ತು ಕುಂದಾಪುರ ತಾಲೂಕುಗಳಿಗೆ ೨೧.೧೨.೧೯೬೪ರಲ್ಲಿ ಪ್ರತ್ಯೇಕ ಉಡುಪಿ ಜಿಲ್ಲಾ ಸಹಕಾರ ಯೂನಿಯನ್ ರಚನೆಯಾಯಿತು[೧೫]. ದಕ್ಷಿಣ ಕನ್ನಡ ಜಿಲ್ಲಾ ಸಹಕಾರಿ ಯೂನಿಯನ್ ಅದು ಆರಂಭವಾದಾಗಿನಿಂದ ಸಹಕಾರಿ ಶಿಕ್ಷಣ ಪ್ರಚಾರ, ತರಬೇತಿ ಮತ್ತು ಪ್ರಚಾರ ಕಾರ್ಯಗನ್ನು ಹಮ್ಮಿಕೊಂಡಿದೆ. ಮೊಳಹಳ್ಳಿ ಶಿವರಾಯರು ಮತ್ತು ಆ ನಂತರ ಮಂಜೇಶ್ವರ ಅನಂತರಾಯರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿದ್ದ ಸಹಕಾರಿ ಪತ್ರಿಕೆಯನ್ನು 'ದಕ್ಷಿಣ ಕನ್ನಡ ಸಹಕಾರಿ' ಪತ್ರಿಕೆ ಎಂಬ ಹೆಸರಿನಲ್ಲಿ ಜಿಲ್ಲಾ ಸಹಕಾರಿ ಯೂನಿಯನ್ ಪ್ರಕಟಿಸಲು ಆರಂಬಿಸಿತು. ಜಿಲ್ಲಾ ಸಹಕಾರಿ ಯೂನಿಯನ್ ಜಿಲ್ಲೆಯಲ್ಲಿ "ಸಹಕಾರ ಸಪ್ತಾಹ"ವನ್ನು ಆಚರಿಸಿಕೊಂಡು ಬರುತ್ತಿದೆ. (ಭಾರತದಲ್ಲಿ ಸಹಕಾರಿ ಸಪ್ತಾಹದ ಆಚರಣೆ ಆರಂಭವಾದುದು ೧೯೫೨ರಲ್ಲಿ) ಪ್ರೌಢಶಾಲಾ ಮತ್ತು ಪದವಿಪೂರ್ವ ಕಾಲೇಜಿನ ವಿದ್ಯಾರ್ಥಿಗಳಿಗೆ ಪ್ರಬಂಧ ಹಾಗೂ ಚರ್ಚಾ ಸ್ಪರ್ಧೆಗಳನ್ನು ಸಹಕಾರ ಸಪ್ತಾಹದ ಅಂಗವಾಗಿ ನಡೆಸುತ್ತಾ ಬರುತ್ತಿದೆ[೧೬].

### ೪.೪ ಕೃಷಿ ಉತ್ಪನ್ನ ಸಹಕಾರಿ ಮಾರಾಟ ಸಂಘಗಳು ಮತ್ತು ಭೂ ಅಭಿವೃದ್ಧಿ ಬ್ಯಾಂಕುಗಳು

ಕೃಷಿಯೇ ಪ್ರಧಾನ ಕಸುಬಾಗಿದ್ದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕೃಷಿ ಉತ್ಪನ್ನಗಳ ಮಾರಾಟಕ್ಕಾಗಿ ಸಹಕಾರ ಸಂಘಗಳನ್ನು ಸ್ಥಾಪಿಸುವ ಕಾರ್ಯ ೧೯೧೪ರಲ್ಲಿ ಆರಂಭವಾಯಿತು. ಅಡಿಕೆ ಉತ್ಪತ್ತಿದಾರರು ತಮ್ಮ ಅಡಿಕೆಗೆ ಉತ್ತಮ ಬೆಲೆ ಬರುವಂತೆ ಮಾರಾಟ ನಡೆಸಲು ಸಹಾಯ ಸಹಾಯ ಮಾಡುವ ಉದ್ದೇಶದಿಂದ ೧೯೧೪ರಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಮೊದಲ ಕೃಷಿಯುತ್ಪನ್ನ ಮಾರಾಟ ಸಂಘ "ದಕ್ಷಿಣ ಕನ್ನಡ ಜಿಲ್ಲಾ ತೋಟಗಾರರ ಸಹಕಾರಿ ಸಗಟು ಮಾರಾಟ ಸಂಘ" ವಿಟ್ಲದಲ್ಲಿ ಸ್ಥಾಪಿಸಲ್ಪಟ್ಟಿತು. ಘುತ್ತೂರು ಪ್ರದೇಶದಲ್ಲಿ ಅಡಿಕೆ ಉತ್ಪತ್ತಿದಾರರು ತಮ್ಮ ಉತ್ಪತ್ತಿಗಳನ್ನು ಜಂಟಿಯಾಗಿ ಮಾರಾಟ ಮಾಡಲು ವ್ಯವಸ್ಥೆ ಮಾಡುವುದು ಈ ಸಂಘದ ಮೂಲ ಉದ್ದೇಶವಾಗಿತ್ತು. ಅನುಕೂಲ

ಮಾರಾಟ ಮಾಡುವ ತನಕ ಕಾಯಲು ಅನುಕೂಲವಾಗುವಂತೆ ಅದು ಸದಸ್ಯರಿಗೆ ಸಾಲ ಒದಗಿಸುತ್ತಿತ್ತು[೧೭]. ಆದರೆ ಮುಂದೆ ಈ ಸಂಘ ಸಮಾಪನಗೊಂಡಿತು.

೧೯೧೯ರಲ್ಲಿ ಪುತ್ತೂರು ತಾಲೂಕಿನ ಪ್ರಮುಖ ಬೆಳೆಯಾದ ಅಡಿಕೆ ಬೆಳೆಗಾರರ ಹಿತರಕ್ಷಣೆಗಾಗಿ ಪುತ್ತೂರಿನಲ್ಲಿ "ದಕ್ಷಿಣ ಕನ್ನಡ ಭಂಡಾಸಾಲೆ ಸಹಕಾರಿ ಸಂಘ" ಸ್ಥಾಪಿಸಲ್ಪಟ್ಟಿತು. ಮುಂದೆ ಅದರ ಹೆಸರನ್ನು "ದಕ್ಷಿಣ ಕನ್ನಡ ಜಿಲ್ಲಾ ಕೃಷಿಕರ ಸಹಕಾರಿ ಮಾರಾಟ ಸಂಘ" ಎಂದು ಬದಲಾಯಿಸಿ ಅದರ ಕೇಂದ್ರವನ್ನು ಮಂಗಳೂರಿಗೆ ವರ್ಗಾಯಿಸಲಾಯಿತು. ಆರಂಭದಲ್ಲಿ ಈ ಸಹಕಾರಿ ಸಂಘದ ಕಾರ್ಯವ್ಯಾಪ್ತಿ ಪುತ್ತೂರಿಗೆ ಮಾತ್ರ ಸೀಮಿತವಾಗಿತ್ತು. ೧೯೩೫ರಲ್ಲಿ ಅದರ ಕಾರ್ಯವ್ಯಾಪ್ತಿ ಇಡೀ ಜಿಲ್ಲೆಗೆ ವಿಸ್ತರಿಸಲ್ಪಟ್ಟಿತು. ತನ್ನ ಸದಸ್ಯರುಗಳ ವಾಣಿಜ್ಯ ಬೆಳೆಗಳಾದ ಅಡಿಕೆ, ತೆಂಗಿನ ಕಾಯಿ, ಕಾಳು ಮೆಣಸುಗಳಿಗೆ ಉತ್ತಮ ಮಾರುಕಟ್ಟೆ ಒದಗಿಸುವುದು ಈ ಸಂಘದ ಮೂಲ ಉದ್ದೇಶವಾಗಿತ್ತು[೧೮]. ೧೯೪೩ರಲ್ಲಿ ವಾಣಿಜ್ಯ ಬೆಳೆಗಳ ಮಾರಾಟವನ್ನು ಅಭಿವೃದ್ಧಿ ಪಡಿಸುವ ಉದ್ದೇಶದಿಂದ ಮುಂಬಯಿಯಲ್ಲಿ ಈ ಸಂಘದ ಶಾಖೆಯನ್ನು ತೆರೆಯಲಾಯಿತು. ಆದರೆ ೧೯೪೪ರಲ್ಲಿ ಬೆಂಕಿ ಅನಾಹುತದಿಂದಾಗಿ ಈ ಶಾಖೆಯನ್ನು ಮುಚ್ಚಬೇಕಾಯಿತು. ಅಕ್ಕಿಯನ್ನು ಚಿಲ್ಲರೆಯಾಗಿ ವಿಕ್ರಯಿಸುವ ಉದ್ದೇಶದಿಂದ ಈ ಸಂಘವು ಮಂಗಳೂರಿನಲ್ಲಿ ೪ ಡಿಪೋಗಳನ್ನು ತೆರೆಯಿತಾದರೂ ಈ ಯೋಜನೆ ಯಶಸ್ವಿಯಾಗದೆ ೧೯೪೧ರ ವೇಳೆಗೆ ಅವುಗಳನ್ನು ಮುಚ್ಚಬೇಕಾಯಿತು. ೧೯೪೧ರ ವೇಳೆಗೆ ೪೭ ಶಾಖೆಗಳನ್ನು ಈ ಸಂಘ ಹೊಂದಿತ್ತು[೧೯]. ಕೃಷಿಕರ ಉತ್ಪನ್ನಗಳನ್ನು ಮಧ್ಯವರ್ತಿಯಾಗಿ ಕಮಿಷನ್ ಆಧಾರದ ಮೇಲೆ ಮಾರಾಟ ಮಾಡುವ ಈ ಸಂಸ್ಥೆ ಈಗಲೂ ಮಂಗಳೂರಿನಲ್ಲಿ ಕಾರ್ಯ ನಿರ್ವಹಿಸುತ್ತಿದೆ.

೧೯೩೪ರಲ್ಲಿ ಕಾಸರಗೋಡು ತಾಲಕಿನ ಹೊಸದುರ್ಗದ ಕೋಟೆಚ್ಚೇರಿ ಎಂಬಲ್ಲಿ ಸ್ಥಾಪಿಸಲ್ಪಟ್ಟ ಕೋಟೆಚ್ಚೇರಿ ಸಹಕಾರಿ ಸಾಲ ಮತ್ತು ಮಾರಾಟ ಸಹಕಾರಿ ಸಂಘ ಕಾಳುಮೆಣಸಿಗೆ ಉತ್ತಮ ಬೆಲೆ ಪಡೆಯುವಲ್ಲಿ ಉತ್ಪತ್ತಿದಾರರಿಗೆ ಸಹಾಯ ಮಾಡುವ ಉದ್ದೇಶದಿಂದ ಸ್ಥಾಪಿಸಲ್ಪಟ್ಟ ಸಹಕಾರಿ ಸಂಘ. ಈ ಸಂಘ ಕಾಳುಮೆಣಸಿನ ಈಡಿನ ಮೇಲೆ ಸದಸ್ಯರಿಗೆ ಸಾಲ ಸೌಲಭ್ಯ ಕೂಡಾ ಒದಗಿಸುತ್ತಿತ್ತು. ಹೊಗೆಸೊಪ್ಪಿನ ವ್ಯಾಪಾರವನ್ನು ಕೂಡ ಕೈಗೆತ್ತಿಕೊಂಡ ಸಂಘ ಹೊಗೆಸೊಪ್ಪಿನ ಈಡಿನ ಮೇಲೆಯೂ ಸಾಲ ಒದಗಿಸುತ್ತಿತ್ತು. ೧೯೪೩–೪೪ರಲ್ಲಿ ಹೊಗೆಸೊಪ್ಪಿನ ಬೆಲೆ ಕಡಿಮೆಯಾದ ಕಾರಣ ಈಡಿನ ಮೇಲೆ ಕೊಟ್ಟ ಸಾಲಗಳನ್ನು ವಸೂಲು ಮಾಡಲು ಸಾದ್ಯವಾಗದೇ ನಷ್ಟ ಅನುಭವಿಸಬೇಕಾಯಿತು. ಕಾಳು ಮೆಣಸನ್ನು ಉತ್ತಮ ಬೆಲೆ ಸಿಗುವಂತೆ ಮಾರಾಟ ಮಾಡುವ ಉದ್ದೇಶದಿಂದ ಸ್ಥಾಪಿಸಲ್ಪಟ್ಟ ಈ ಸಂಘ ಕೇವಲ ಕಾಳು ಮೆಣಸಿನ ಈಡಿನ ಮೇಲೆ ಸಾಲ ಕೊಡುವ ಸಂಸ್ಥೆಯಾಯಿತೇ ಹೊರತು ಅದರ ಮೂಲ ಉದ್ದೇಶವನ್ನು ಸಾಧಿಸುವಲ್ಲಿ ಹೆಚ್ಚು ಸಫಲವಾಗಲಿಲ್ಲ[೨೦]. ೧೯೫೭ರಲ್ಲಿ ಕಾಸರಗೋಡು ಕೇರಳ

ರಾಜ್ಯದ ಭಾಗವಾದ ಮೇಲೆ ದಕ್ಷಿಣ ಕನ್ನಡ ಜಿಲ್ಲೆ ಈ ಸಂಘದ ಕಾರ್ಯವ್ಯಾಪ್ತಿಯಿಂದ ಹೊರಗುಳಿಯಿತು.

೧೯೩೭ರಲ್ಲಿ ಮಂಗಳೂರಿನಲ್ಲಿ ತಾಲೂಕು ಕೃಷಿ ಉತ್ಪನ್ನ ಮಾರಾಟ ಸಹಕಾರಿ ಸಂಘ[೨೧] ಸ್ಥಾಪಿಸಲ್ಪಟ್ಟಿತು. ಕೃಷಿಗೆ ಅಗತ್ಯ ಇರುವ ವಸ್ತುಗಳ ಸಗಟು ಮಾರಾಟ, ಕೃಷಿ ಉತ್ಪನ್ನಗಳ ಈಡಿನ ಮೇಲೆ ಸಾಲ ನೀಡುವಿಕೆ ಮತ್ತು ಕೃಷಿ ಉತ್ಪನ್ನಗಳಿಗೆ ಮಾರುಕಟ್ಟೆ ಒದಗಿಸುವ ಉದ್ದೇಶವನ್ನು ಈ ಸಹಕಾರಿ ಸಂಘ ಹೊಂದಿತ್ತು. ೧೯೬೦ರಲ್ಲಿ ಕಾರ್ಕಳ, ಉಡುಪಿ, ಬಂಟ್ವಾಳ, ಕುಂದಾಪುರ, ಬೆಳ್ತಂಗಡಿಗಳಲ್ಲೂ ತಾಲೂಕು ಕೃಷಿ ಉತ್ಪನ್ನ ಮಾರಾಟ ಸಂಘಗಳು ಆರಂಭಗೊಂಡವು. ೧೯೬೧ರಲ್ಲಿ ಪುತ್ತೂರಿನಲ್ಲಿ ಮತ್ತು ೧೯೬೬ರಲ್ಲಿ ಸುಳ್ಯದಲ್ಲಿ ತಾಲೂಕು ಕೃಷಿ ಉತ್ಪನ್ನ ಮಾರಾಟ ಸಹಕಾರಿ ಸಂಘಗಳು ಸ್ಥಾಪಿಸಲ್ಪಟ್ಟವು. ಪ್ರಸ್ತುತ ಜಿಲ್ಲೆಯಲ್ಲಿ (ಉಡುಪಿಯನ್ನು ಹೊರತು ಪಡಿಸಿ) ೫ ಕೃಷಿ ಉತ್ಪನ್ನ ಮಾರಾಟ ಸಹಕಾರಿ ಸಂಘಗಳು ಕಾರ್ಯ ನಿರ್ವಹಿಸುತ್ತಿದೆ. ಕೃಷಿ ಉತ್ಪನ್ನ ಮಾರಾಟ ಸಂಘಗಳಲ್ಲದೆ ಮಂಗಳೂರು ಮತ್ತು ಉಡುಪಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಕಬ್ಬು ಬೆಳೆಸುವವರ ಸಾಲ ಮತ್ತು ಮಾರಾಟ ಸಂಘಗಳು ಉತ್ಪತ್ತಿ ಈಡಿನ ಮೇಲೆ ಸಾಲ ಮತ್ತು ಉತ್ಪತ್ತಿ ಮಾರಾಟ ನಡೆಸುತ್ತಿದ್ದವು. ೧೯೪೨ರಲ್ಲಿ ಮಂಗಳೂರಿನಲ್ಲಿ ಕಾಫಿಗೆ ಮಾರುಕಟ್ಟೆ ಒದಗಿಸುವ ಉದ್ದೇಶದಿಂದ ಕಾಫಿ ತೋಟಗಾರರ ಸಂಘವೊಂದು ಸ್ಥಾಪಿಸಲ್ಪಟ್ಟಿತ್ತಾದರೂ ಅದು ಆರಂಭದಿಂದಲೇ ನಿಷ್ಕ್ರೀಯವಾಗಿತ್ತು[೨೨].

ಇದಲ್ಲದೆ ಜಿಲ್ಲೆಯ ವಿವಿಧೆಡೆ ಅಕ್ಕಿ ತಯರಿಸುವ ಮತ್ತು ಮಾರಾಟ ಮಾಡುವ ಸಂಘಗಳು ಸ್ವಾತಂತ್ರ್ಯ ಪೂರ್ವದಲ್ಲೇ ಸ್ಥಾಪಿಸಲ್ಪಟ್ಟಿದ್ದವು. ಅವುಗಳಲ್ಲಿ ಹೊಸದುರ್ಗ ಅಕ್ಕಿ ತಯಾರಿಸುವ ಮತ್ತು ಮಾರಾಟ ಸಂಘ ಪ್ರಮುಖವಾದುದು. ೧೯೫೩ರಲ್ಲಿ ಮಂಗಳೂರಿನಲ್ಲಿ ಸ್ಥಾಪಿಸಲ್ಪಟ್ಟ ದಕ್ಷಿಣ ಕನ್ನಡ ಸಹಕಾರಿ ತಾಳಿಬೆಲ್ಲ ಮಾರ್ಕೆಟಿಂಗ್ ಫೆಡರೇಶನ್, ೧೯೬೫ರಲ್ಲಿ ಮಂಗಳೂರಿನಲ್ಲಿ ಆರಂಭಗೊಂಡ ದಕ್ಷಿಣ ಕನ್ನಡ ಜಿಲ್ಲಾ ತೋಟಗಾರಿಕಾ ಉತ್ಪತ್ತಿ ಸಹಕಾರಿ ಮಾರಾಟ ಸಂಘ ಲಿಮಿಟೆಡ್ ೧೯೬೭ರಲ್ಲಿ ಕಾರ್ಕಳದಲ್ಲಿ ಸ್ಥಾಪಿಸಲ್ಪಟ್ಟ ದಕ್ಷಿಣ ಕನ್ನಡ ಜಿಲ್ಲಾ ಗೇರು ಉತ್ಪಾದಕರ ಸಹಕಾರಿ ಸಂಘ ಲಿಮಿಟೆಡ್ ಇವು ಜಿಲ್ಲೆಯ ಇತರ ಪ್ರಮುಖ ಕೃಷಿ ಉತ್ಪನ್ನ ಸಹಕಾರಿ ಮಾರಾಟ ಸಂಘಗಳು[೨೩]. ಇವಲ್ಲದೆ 'ಕ್ಯಾಂಪ್ಕೋ' ಹಾಗೂ 'ಮಾಸ್' ಸಂಸ್ಥೆಗಳು ಅಡಿಕೆಗೆ ಹಾಗೂ ಇತರ ಕೃಷಿ ಉತ್ಪನ್ನಗಳಿಗೆ ಉತ್ತಮ ಮಾರುಕಟ್ಟೆ ಒದಗಿಸುತ್ತಿವೆ.

೭೦ರ ದಶಕದಲ್ಲಿ ಅಡಿಕೆ ಬೆಲೆಯಲ್ಲಿ ತೀವ್ರ ಕುಸಿತ ಉಂಟಾದಾಗ ಅಡಿಕೆ ಬೆಳೆಗಾರರ ಹಿತರಕ್ಷಣೆಗಾಗಿ ವಾರಣಾಶಿ ಸುಬ್ರಾಯ ಭಟ್ಟರ ನೇತೃತ್ವದಲ್ಲಿ ೧೯೭೩ರಲ್ಲಿ ಕೇರಳ ಮತ್ತು ಕರ್ನಾಟಕ ಸರಕಾರಗಳ ಜಂಟಿ ಯೋಜನೆಯಾಗಿ ಮಂಗಳೂರಿನಲ್ಲಿ "ಸೆಂಟ್ರಲ್ ಅರೆಕನೆಟ್ ಮಾರ್ಕೆಟಿಂಗ್ ಆ್ಯಂಡ್ ಪ್ರೊಸೆಸಿಂಗ್ ಲಿಮಿಟೆಡ್" (ಕ್ಯಾಂಪ್ಕೋ) ಆರಂಭಗೊಂಡಿತು. ಸದಸ್ಯರಿಂದ ಹಾಗೂ ಅಗತ್ಯ

ಬಿದ್ದರೆ ಇತರ ಬೆಳೆಗಾರರಿಂದಲೂ ಏಜೆನ್ಸಿ ಆಧಾರದ ಮೇಲೆ ಅಡಿಕೆ ಖರೀದಿ. ಸದಸ್ಯರ ಗರಿಷ್ಠ ಸೌಕರ್ಯವನ್ನು ಲಕ್ಷ್ಯದಲ್ಲಿರಿಸಿಕೊಂಡು ಅಡಿಕೆ ಉತ್ಪನ್ನಗಳ ಮಾರಾಟ ಮಾಡುವುದು. ಅಡಿಕೆ ಮತ್ತು ಅದರ ಉತ್ಪನ್ನಗಳ ನಿರ್ಯಾತ ಮಾಡುವುದು, ರಿಜಿಸ್ಟ್ರಾರರ ಪೂರ್ವಾನುಮತಿಯ ಮೇರೆಗೆ ಡಿಪೋ, ಗೋದಾಮುಗಳು ಮತ್ತು ಪ್ರದರ್ಶನ ಮಂದಿರಗಳು ತೆರೆಯುವುದು ಮುಂತಾದವುಗಳು ಕ್ಯಾಂಪ್ಕೋದ ಆರಂಭದ ಉದ್ದೇಶಗಳಾಗಿದ್ದವು. ಆರಂಭವಾದ ಒಂದು ವರ್ಷದಲ್ಲೇ ಅಡಿಕೆ ಬೆಳೆಗೆ ಉತ್ತಮ ಮಾರುಕಟ್ಟೆಯನ್ನು ಒದಗಿಸಲು ಸಫಲವಾದ ಕ್ಯಾಂಪ್ಕೋ ಪ್ರಸ್ತುತ ಕರ್ನಾಟಕ ಮತ್ತು ಕೇರಳ ರಾಜ್ಯಗಳಲ್ಲಿ ೧೩೫ ಅಡಿಕೆ ಸಂಸ್ಕರಣ ಕೇಂದ್ರಗಳನ್ನು ಹೊಂದಿದ್ದು ದೇಶದ ವಿವಿಧೆಡೆ ೧೧ ಮಾರಾಟ ಮಳಿಗೆಗಳನ್ನು ಹೊಂದಿದೆ. ಅಡಿಕೆ ಬೆಳೆಗಾರರಿಗೆ ಗುಣಮಟ್ಟದ ಮೈಲುತುತ್ತನ್ನು ಒದಗಿಸುವ ಉದ್ದೇಶದಿಂದ ೧೯೮೨ರಲ್ಲಿ ಸಾಗರದಲ್ಲಿ ಒಂದು ಮೈಲುತುತ್ತು ತಯಾರಿಕಾ ಘಟಕವನ್ನು ಕೂಡಾ ಕ್ಯಾಂಪ್ಕೋ ತೆರೆದಿದೆ. ಅಡಿಕೆಯ ವಿವಿಧ ಉತ್ಪನ್ನಗಳ ಉಪಯುಕ್ತತೆಯ ಬಗ್ಗೆ ಮತ್ತು ಅಡಿಕೆಯ ಪರ್ಯಾಯ ಬಳಕೆಯ ಬಗ್ಗೆ ಸಂಶೋದನೆಗಳನ್ನು ಕೈಗೊಡಿರುವ ಕ್ಯಾಂಪ್ಕೋ ೨೦ ಮೇ ೧೯೯೮ರಲ್ಲಿ "ಅರೆಕ್‌ನೆಟ್ ರಿಸರ್ಚ್ ಆ್ಯಂಡ್ ಡೆವೆಲಪ್‌ಮೆಂಟ್ ಫೌಂಡೇಶನ್" ಎಂಬ ಸಂಸ್ಥೆಯನ್ನು ಧರ್ಮಸ್ಥಳದ ಧರ್ಮಾಧಿಕಾರಿಗಳಾದ ಡಾ. ವೀರೇಂದ್ರ ಹೆಗ್ಡೆಯವರ ಮಾರ್ಗದರ್ಶನದಲ್ಲಿ ಆರಂಭಿಸಿದೆ[೨೪].

ಪ್ರಸ್ತುತ ಕ್ಯಾಂಪ್ಕೋ ಅಡಿಕೆಯನ್ನು ಮತ್ತು ಅಡಿಕೆ ಉತ್ಪನ್ನಗಳಾದ "ಸುಗಂಧಿತ ಸುಫಾರಿ" ಪಾನ್ ಮಸಾಲ, ಗುಟ್ಕಾಗಳನ್ನು ಅಮೇರಿಕಾ, ಕೆನಡಾ, ಇಂಗ್ಲೇಂಡ್, ಅರಬ್ ರಾಷ್ಟ್ರಗಳಿಗೆ ರಫ್ತು ಕೂಡಾ ಮಾಡುತ್ತಿದೆ. ೧೯೮೦ರಲ್ಲಿ ಕೋಕೋ ಬೆಲೆಯಲ್ಲಿ ತೀವ್ರ ಕುಸಿತ ಉಂಟಾದಾಗ ಕರ್ನಾಟಕ ಮತ್ತು ಕೇರಳಗಳಲ್ಲಿ ಕೋಕೋ ಸಂಸ್ಕರಣ ಕೇಂದ್ರಗಳನ್ನು ಆರಂಭಿಸಿದ ಕ್ಯಾಂಪ್ಕೋ ೧೯೮೬ರಲ್ಲಿ ಪುತ್ತೂರು ತಾಲೂಕಿನ ಕೆಮ್ಮಿಂಜೆ ಎಂಬಲ್ಲಿ ಬೃಹತ್ ಚಾಕಲೇಟು ಫ್ಯಾಕ್ಟರಿಯನ್ನು ಕೂಡಾ ತೆರೆಯಿತು. ವಿವಿಧ ಬಗೆಯ ಚಾಕಲೇಟುಗಳು ಹಾಗೂ ಕೋಕೋ ಪೇಯಗಳನ್ನು ತಯಾರಿಸುತ್ತಿರುವ ಈ ಚಾಕಲೇಟು ಫ್ಯಾಕ್ಟರಿಯ ಉತ್ಪನ್ನಗಳು ವಿದೇಶಗಳಿಗೂ ರಫ್ತಾಗುತ್ತಿವೆ[೨೫]. ಈಗಲೂ ಅಡಿಕೆ ಹಾಗೂ ಕೋಕೋ ಬೆಳೆಗಾರರ ಹಿತರಕ್ಷಣೆಗೆ ಶ್ರಮಿಸುತ್ತಿರುವ ಕ್ಯಾಂಪ್ಕೋ ಸಂಸ್ಥೆ ೨೦೦೮-೦೯ ಸಾಲಿನಲ್ಲಿ ಅಡಿಕೆ ವಿಭಾಗದಲ್ಲಿ ೧೪೦೧.೭೫ ಲಕ್ಷ ರೂ. ಹಾಗೂ ಚಾಕಲೇಟ್ ವಿಭಾಗದಲ್ಲಿ ೨೮೫.೪೫ ಲಕ್ಷ ರೂ. ಲಾಭ ಗಳಿಸಿದೆ[೨೬].

ಅಡಿಕೆಗೆ ಉತ್ತಮ ಮಾರುಕಟ್ಟೆ ಒದಗಿಸುವ ಉದ್ದೇಶದೊಂದಿಗೆ ಅಕ್ಟೋಬರ್ ೧, ೨೦೦೧ ರಂದು ನೋಂದಾವಣೆಗೊಂಡು ಆರಂಭವಾದ "ಮ್ಯಾಂಗಳೂರ್ ಅಗ್ರಿಕಲ್ಚರಿಸ್ಟ್‌ನ ಸೌಹಾರ್ದ ಸಹಕಾರಿ ಲಿಮಿಟೆಡ್" (ಮಾಸ್), ಕರ್ನಾಟಕ ಸೌಹಾರ್ದ ಕಾಯಿದೆ ೨೦೦೦ದಡಿಯಲ್ಲಿ ಕಾರ್ಯ ನಿರ್ವಹಿಸುತ್ತಿದೆ. ೨೦೦೦ ಇಸವಿಯಲ್ಲಿ ಅಡಿಕೆ ಬೆಲೆಯಲ್ಲಿ ತೀವ್ರ ಕುಸಿತ ಉಂಟಾದಾಗ

ಮಾರುಕಟ್ಟೆಯಲ್ಲಿ ಮಧ್ಯವರ್ತಿಗಳ ಹಸ್ತಕ್ಷೇಪವನ್ನು ತಪ್ಪಿಸುವ ಮತ್ತು ಕೃಷಿಕರ ಮಾಲನ್ನು ನೇರವಾಗಿ ವ್ಯವಹರಿಸುವ (ಕನ್‌ಸೈನ್‌ಮೆಂಟ್) ಉದ್ದೇಶದೊಂದಿಗೆ ೨೦೦೧ರಲ್ಲಿ ಈ ಸಂಸ್ಥೆಯನ್ನು ಆರಂಭಿಸಲಾಯಿತು. ಈ ಸಂಸ್ಥೆ ಪ್ರಾಥಮಿಕ ಸಹಕಾರಿ ಸಂಘಗಳ ನೆರವಿನೊಂದಿಗೆ ಕಾರ್ಯ ನಿರ್ವಹಿಸುತ್ತಿದೆ. 'ಮಾಸ್' ತನ್ನ ಸದಸ್ಯರ ಅಡಿಕೆ, ತೆಂಗಿನಕಾಯಿ, ಕಾಳುಮೆಣಸು, ವೆನಿಲ್ಲಾ ಮುಂತಾದ ಕೃಷಿ ಉತ್ಪನ್ನಗಳಿಗೆ ಉತ್ತಮ ಮಾರುಕಟ್ಟೆ ಒದಗಿಸುವುದು, ಅಡಿಕೆಯನ್ನು ವಿದೇಶಕ್ಕೆ ರಫ್ತು ಮಾಡುವುದು, ಅಡಿಕೆಯನ್ನು ಸಂಸ್ಕರಿಸುವುದು, ಮಿಶ್ರ ಬೆಳೆಗಳನ್ನು ಬೆಳೆಸಲು ಕೃಷಿಕರಿಗೆ ತರಬೇತಿ ಒದಗಿಸುವುದು ಮುಂತಾದ ಚಟುವಟಿಕೆಗಳನ್ನು ಹಮ್ಮಿಕೊಂಡು ಯಶಸ್ವಿಯಾಗಿ ಅನುಷ್ಠಾನಗೊಳಿಸುತ್ತಿದೆ[೨೭].

**ಭೂ ಅಡಮಾನ ಬ್ಯಾಂಕುಗಳು (ಈಗಿನ ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕುಗಳು)**

೧೯೩೮ರ ಆದಿ ಭಾಗದಲ್ಲಿ ಪುತ್ತೂರು, ಮಂಗಳೂರು ಮತ್ತು ಉಡುಪಿಗಳಲ್ಲಿ ಭೂ ಅಡಮಾನ ಬ್ಯಾಂಕುಗಳು ಸ್ಥಾಪಿಸಲ್ಪಟ್ಟವು[೨೮].

**ಸ್ಥಾಪನೆಯ ಹಿನ್ನೆಲೆ:**

೧೭೯೯ರಲ್ಲಿ ಟಿಪ್ಪುವಿನ ಪತನದ ನಂತರ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯು ಬ್ರಿಟಿಷರ ಆಳ್ವಿಕೆಗೆ ಒಳಪಟ್ಟಿತು ಮತ್ತು ಮದ್ರಾಸ್ ಸಂಸ್ಥಾನದ ಭಾಗವಾಯಿತು. ಬ್ರಿಟಿಷ್ ಕಂದಾಯ ನೀತಿಯ ಪ್ರಕಾರ ರೈತರು ಬ್ರಿಟಿಷ್ ಸರಕಾರಕ್ಕೆ ನಗದು ರೂಪದಲ್ಲಿ ಕಂದಾಯ ಸಲ್ಲಿಸಬೇಕಾಗಿತ್ತು. ಬ್ರಿಟಿಷರು ನಿಗದಿ ಪಡಿಸಿದ ಕಂದಾಯದ ಮೊತ್ತ ಹೆಚ್ಚಾಗಿದ್ದುದರಿಂದ ಬಡ ರೈತರಿಗೆ ಕಂದಾಯ ಸಲ್ಲಿಸಲು ಕಷ್ಟವಾಗುತ್ತಿತ್ತು. ಅಂತಹ ಸಂದರ್ಭದಲ್ಲಿ ಬ್ರಿಟಿಷ್ ಸರಕಾರ ಅವರ ಭೂಮಿಗಳನ್ನು ಹರಾಜು ಹಾಕಿ ತನ್ನ ಕಂದಾಯದ ಮೊತ್ತವನ್ನು ವಸೂಲಿ ಮಾಡುತ್ತಿತ್ತು. ಕೆಲವು ಸಲ ರೈತರು ಸರಕಾರಕ್ಕೆ ಬಾಕಿ ಇರುವ ಕಂದಾಯವನ್ನು ಸಲ್ಲಿಸಲು ಹಣ ಪಡೆಯುವುದಕ್ಕೋಸ್ಕರ ತಮ್ಮ ಜಮೀನುಗಳನ್ನು ಒತ್ತೆ ಇಟ್ಟು ಶ್ರೀಮಂತ ಭೂ ಮಾಲಿಕರಿಂದ ಮತ್ತು ಲೇವಾದೇವಿದಾರರಿಂದ ಸಾಲ ಪಡೆದುಕೊಳ್ಳುತ್ತಿದ್ದರು[೨೯]. ಲೇವಾದೇವಿದಾರರು ಮತ್ತು ಭೂ ಮಾಲಿಕರು ಆರ್ಥಿಕ ಮುಗ್ಗಟ್ಟಿನಲ್ಲಿರುವವರಿಗೆ ಬಡ್ಡಿ ಸಮೇತ ನಿಗದಿತ ಅವಧಿಯೊಳಗೆ ಸಂದಾಯ ಮಾಡುವ ಶರ್ತದ ಮೇಲೆ ಸಾಲ ಕೊಡುತ್ತಿದ್ದರು. ಸಾಲ ಹಿಂತಿರುಗಿಸಲಾಗದ ರೈತರು ತಾವು ಒತ್ತೆ ಇಟ್ಟ ಭೂಮಿ ಹಾಗೂ ಚರಸೊತ್ತುಗಳನ್ನು ಕಳೆದುಕೊಳ್ಳುತ್ತಿದ್ದರು. ೧೯೩೬ರ ವೇಳೆಗೆ ಹಲವು ಶ್ರೀಮಂತ ಭೂ ಮಾಲಿಕರು ಮತ್ತು

ಲೇವಾದೇವಿದಾರರು ಸಾಲ ಪಡೆದುಕೊಂಡು ಸಾಲ ತೀರಿಸಲಾಗದ ರೈತರಿಂದ ಅವರ ಭೂಮಿಗಳನ್ನು ಕೋರ್ಟು, ಕಚೇರಿ ಡಿಕ್ರಿಗಳ ಮೂಲಕ ವಶಪಡಿಸಿಕೊಂಡದ್ದರಿಂದ ಹಲವು ರೈತರು ನಿರಾಶ್ರಿತರಾಗುವ ಪರಿಸ್ಥಿತಿ ಉದ್ಭವವಾಯಿತು. ಅಂತಹ ಪರಿಸ್ಥಿತಿಯಲ್ಲಿ ಮೊಳಹಳ್ಳಿ ಶಿವರಾಯರು ಸಾಲದ ಬವಣೆಯಿಂದ ನೊಂದ ಕೃಷಿಕರಿಗೆ ನೆರವಾಗುವ ಉದ್ದೇಶದಿಂದ ಆಗ ಮದ್ರಾಸ್‌ನಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಭೂ ಅಡಮಾನ ಬ್ಯಾಂಕುಗಳಿಂದ ಪ್ರೇರಿತರಾಗಿ ಜಿಲ್ಲೆಯಲ್ಲಿ ಭೂ ಅಡಮಾನ ಬ್ಯಾಂಕುಗಳನ್ನು ಸ್ಥಾಪಿಸುವ ನಿರ್ಧಾರ ತಳೆದರು.

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಮೊದಲ ಭೂ ಅಡಮಾನ ಬ್ಯಾಂಕು ೧.೫.೧೯೩೮ರಲ್ಲಿ ಪುತ್ತೂರಿನಲ್ಲಿ ಆರಂಭವಾಯಿತು. ೯೫ ಸದಸ್ಯರಿಂದ ಶೇಖರಿಸಿದ ರೂ. ೩೨೩೫ ಪಾಲು ಬಂಡವಾಳದೊಂದಿಗೆ ನೋಂದಾವಣೆಗೊಂಡು ಆರಂಭವಾದ ಪುತ್ತೂರು ವಿಭಾಗದ ಭೂ ಅಡಮಾನ ಬ್ಯಾಂಕು ಮೊದಲ ವರ್ಷದಲ್ಲಿ ಮದರಾಸು ಕೇಂದ್ರ ಭೂ ಅಡಮಾನ ಬ್ಯಾಂಕಿನಿಂದ ೩೪,೫೫೦ ರೂ.ಗಳನ್ನು ತರಿಸಿಕೊಂಡು ೧೫ ಸದಸ್ಯರುಗಳಿಗೆ ಸಾಲ ವಿತರಣೆ ಮಾಡಿತು. ಬ್ಯಾಂಕಿನ ಹೆಸರೇ ಸೂಚಿಸುವಂತೆ ಈ ಬ್ಯಾಂಕಿನಿಂದ ಸಾಲ ವಿತರಣೆಯು ಕೇವಲ ಹಳೇ ಸಾಲ ಸಂದಾಯಕ್ಕೆ ಮಾತ್ರ ಸೀಮಿತವಾಗಿತ್ತು. ಆಗ ಬ್ಯಾಂಕಿನ ಕಾರ್ಯಕ್ಷೇತ್ರವು ಚಂದ್ರಗಿರಿ ಹೊಳೆಯವರೆಗೆ ವ್ಯಾಪಿಸಿದ ಕಾಸರಗೋಡು ತಾಲೂಕು, ಈಗಿನ ಬೆಳ್ತಂಗಡಿ, ಬಂಟ್ವಾಳ, ಸುಳ್ಯ ಮತ್ತು ಪುತ್ತೂರು ತಾಲೂಕುಗಳನ್ನೊಳಗೊಂಡ ೨೯೮ ಗ್ರಾಮಗಳಿಗೆ ವಿಸ್ತರಿಸಲ್ಪಟ್ಟಿತು. ೧೯೫೬ರಲ್ಲಿ ಭಾಷಾವಾರು ಪ್ರಾಂತ್ಯಗಳು ರಚನೆಗೊಂಡು ಕಾಸರಗೋಡು ಕೇರಳದಲ್ಲಿ ವಿಲೀನವಾದ ಮೇಲೆ ಕಾಸರಗೋಡು ಬ್ಯಾಂಕಿನ ಕಾರ್ಯವ್ಯಾಪ್ತಿಯಿಂದ ಹೊರಗುಳಿಯಿತು. ಮುಂದೆ ಬೆಳ್ತಂಗಡಿ, ಬಂಟ್ವಾಳ ಮತ್ತು ಸುಳ್ಯ ತಾಲೂಕುಗಳಲ್ಲಿ ಪ್ರತ್ಯೇಕ ಸಹಕಾರಿ ಭೂ ಅಭಿವೃದ್ಧಿ ಬ್ಯಾಂಕುಗಳು ಅಸ್ತಿತ್ವಕ್ಕೆ ಬಂದ ಮೇಲೆ ಅದರ ಅಧಿಕಾರ ವ್ಯಾಪ್ತಿ ಪುತ್ತೂರು ತಾಲೂಕಿಗೆ ಮಾತ್ರ ಸೀಮಿತಗೊಂಡಿದೆ. ೧೯೭೪ರಲ್ಲಿ ಈ ಬ್ಯಾಂಕಿನ ಹೆಸರನ್ನು "ಪುತ್ತೂರು ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು" ಎಂದು ಬದಲಾಯಿಸಲಾಯಿತು. ಮತ್ತು ಬ್ಯಾಂಕಿನ ವತಿಯಿಂದ ಕೃಷಿಕರ ಭೂ ಅಭಿವೃದ್ಧಿಗೆ ಬೇಕಾಗುವ ಸಾಲವನ್ನು ಒದಗಿಸುವ ವ್ಯವಸ್ಥೆ ಮಾಡಲಾಯಿತು[೩೦].

೧೯೩೮ರಲ್ಲಿ ಮಂಗಳೂರು ಡಿವಿಜನ್ ಸಹಕಾರಿ ಭೂಮಿ ಅಡಮಾನ್ ಬ್ಯಾಂಕು ಮತ್ತು ಉಡುಪಿ ಡಿವಿಜನ್ ಸಹಕಾರಿ ಭೂಮಿ ಅಡಮಾನ್ ಬ್ಯಾಂಕುಗಳು ಮೊಳಹಳ್ಳಿ ಶಿವರಾಯರ ಮಾರ್ಗದರ್ಶನದಂತೆ ಅಸ್ತಿತ್ವಕ್ಕೆ ಬಂದವು. ಪುತ್ತೂರು, ಮಂಗಳೂರು ಮತ್ತು ಉಡುಪಿಯ ಭೂ ಅಡಮಾನ ಬ್ಯಾಂಕುಗಳಿಂದ ಹಳೇ ಸಾಲ ಸಂದಾಯಕ್ಕಾಗಿ ಮಾತ್ರ ಸಾಲ ವಿತರಣೆ ಮಾಡಲಾಗುತ್ತಿತ್ತು. ಆದರೆ ಪ್ರಾರಂಭದ ವರ್ಷಗಳಲ್ಲಿ ಸಾಲದ ನಿಯಮಗಳು ಬಿಗುವಾಗಿದ್ದುದರಿಂದ ಮತ್ತು ಬಂಡವಾಳದ

ಕೊರತೆಯಿಂದಾಗಿ ಬ್ಯಾಂಕುಗಳ ಅಭಿವೃದ್ಧಿಗೆ ಹೆಚ್ಚು ಪ್ರೋತ್ಸಾಹ ದೊರಕಲಿಲ್ಲ[೩೧]. ಪುತ್ತೂರು ಭೂ ಅಡಮಾನ ಬ್ಯಾಂಕು ಮಾತ್ರ ಸ್ವಲ್ಪ ಮಟ್ಟಿನ ಪ್ರಗತಿ ಸಾಧಿಸಿತು. ೧೯೫೧ರಲ್ಲಿ ಉಡುಪಿ ಮತ್ತು ಮಂಗಳೂರು ಬ್ಯಾಂಕುಗಳು ನಷ್ಟದಲ್ಲಿ ನಡೆಯುತ್ತಿದ್ದವು. ಪುತ್ತೂರು ಭೂ ಅಡಮಾನ ಬ್ಯಾಂಕು ಮಾತ್ರ ೧,೦೨೧ ರೂ. ಲಾಭ ಗಳಿಸಿತ್ತು[೩೨]. ೧೯೬೪ರ ನಂತರ ಈ ಎಲ್ಲಾ ಬ್ಯಾಂಕುಗಳನ್ನು ಸಹಕಾರಿ ಭೂ ಅಭಿವೃದ್ಧಿ ಬ್ಯಾಂಕುಗಳು ಎಂದು ಕರೆಯಲ್ಪಡುತ್ತಿವೆ.

೧೯೬೦ರ ದಶಕದಲ್ಲಿ ಬೆಳ್ತಂಗಡಿ (೧೯೬೧), ಕುಂದಾಪುರ (೧೯೬೨), ಬಂಟ್ವಾಳ (೧೯೬೨), ಸುಳ್ಯ (೧೯೬೬) ಮತ್ತು ಕಾರ್ಕಳಗಳಲ್ಲೂ ಸಹಕಾರಿ ಭೂ ಅಭಿವೃದ್ಧಿ ಬ್ಯಾಂಕುಗಳು ಸ್ಥಾಪಿಲ್ಪಟ್ಟವು. ೧೯೬೪ರಲ್ಲಿ ಸಹಕಾರ ಕಾಯಿದೆಯಲ್ಲಿ ತಿದ್ದುಪಡಿಯಾದ ಪ್ರಕಾರ ಸಹಕಾರಿ ಭೂ ಅಭಿವೃದ್ಧಿ ಬ್ಯಾಂಕುಗಳ ದೀರ್ಘಾವಧಿ ಸಾಲ ವಿತರಣಾ ಧೋರಣೆಯಲ್ಲಿ ಬದಲಾವಣೆ ಉಂಟಾಗಿ ಕೊಟ್ಟ ಸಾಲ ಶಾಶ್ವತ ಅಭಿವೃದ್ಧಿಯತ್ತ ಸದುಪಯೋಗವಾಗಬೇಕೆಂಬ ಧೋರಣೆ ಬೆಳೆಯಿತು[೩೩]. ಈಗ ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕುಗಳೆಂದು ಕರೆಯಲ್ಪಡುತ್ತಿರುವ ಈ ಸಹಕಾರಿ ಬ್ಯಾಂಕುಗಳು ಕೃಷಿ ಮತ್ತು ಕೃಷಿಯೇತರ ಸಾಲವನ್ನು ಒದಗಿಸುತ್ತಲಿವೆ. ಪ್ರಸ್ತುತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ (ಉಡುಪಿಯನ್ನು ಹೊರತು ಪಡಿಸಿ) ೫ ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳು ಅಸ್ಥಿತ್ವದಲ್ಲಿವೆ[೩೪].

**೪.೫ ಹಾಲು ಉತ್ಪಾದಕರ ಸಹಕಾರಿ ಸಂಘಗಳು**

ಸ್ವಾತಂತ್ರ್ಯ ಪೂರ್ವದಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕೇವಲ ಬೆರಳೆಣಿಕೆಯಷ್ಟು ಹಾಲು ಉತ್ಪಾದಕರ ಸಹಕಾರಿ ಸಂಘಗಳು ಮಾತ್ರ ಅಸ್ತಿತ್ವದಲ್ಲಿದ್ದವು. ಅವುಗಳಲ್ಲಿ ಹೆಚ್ಚಿನವುಗಳು ಮಂಗಳೂರಿನಲ್ಲಿ ಸ್ಥಾಪಿಸಲ್ಪಟ್ಟಿದ್ದವು. ಅವುಗಳಲ್ಲಿ ಕೊರೆಡೆಲ್ ಹೋಲಿಕ್ರಾಸ್ ಹಾಲು ಉತ್ಪಾದಕರ ಸಹಕಾರಿ ಸಂಘ (೧೯೪೫) ದೇರೆಬೈಲು ಹಾಲು ಉತ್ಪಾದಕರ ಸಹಕಾರಿ ಸಂಘ (೧೯೪೬), ಕಾವೂರು ಪದವು ಹಾಲು ಉತ್ಪಾದಕರ ಸಹಕಾರಿ ಸಂಘ (೧೯೪೫), ವೆಲೆನ್ಸಿಯಾ ಹಾಲು ಉತ್ಪಾದಕರ ಸಹಕಾರಿ ಸಂಘ (೧೯೪೫) ಮತ್ತು ಗೋಕುಲದಾಸ ಹಾಲು ಸರಬರಾಜು ಸಹಕಾರ ಸಂಘ ಪ್ರಮುಖವಾದವುಗಳು[೩೫]. ಆದರೆ ಸ್ವಾತಂತ್ರ್ಯ ಪೂರ್ವದಲ್ಲಿ ಹಾಲು ಉತ್ಪಾದಕರ ಸಹಕಾರ ಸಂಘಗಳು ಹೆಚ್ಚು ಸಂಘಟಿತವಾಗಿರಲಿಲ್ಲ.

ಸ್ವಾತಂತ್ರ್ಯಾ ನಂತರ ಜಿಲ್ಲೆಯ ವಿವಿಧೆಡೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಹಾಲು ಉತ್ಪಾದಕರ ಸಂಘಗಳು ಸ್ಥಾಪಿಸಲ್ಪಟ್ಟವು. ೧೯೭೧ರಲ್ಲಿ ರಾಜ್ಯ ಸರಕಾರವು ೧೦,೦೦೦ ಲೀಟರ್ ಸಾಮರ್ಥ್ಯದ ಹಾಲು ಸಂಸ್ಕರಿಸುವ ಡೈರಿಯನ್ನು ಮಂಗಳೂರಿನಲ್ಲಿ ಆರಂಭಿಸಿತು. ಪ್ರಾರಂಭದಲ್ಲಿ ಈ ಡೈರಿಯು

ದಿನಕ್ಕೆ ೩೦೦೦ ಲೀಟರ್ ಹಾಲನ್ನು ಸಂಗ್ರಹಿಸುತ್ತಿತ್ತು. ಆದರೆ ಅಂದಿನ ದಿನಗಳಲ್ಲಿ ವ್ಯವಸ್ಥಿತ ತಾಂತ್ರಿಕ ಸೌಲಭ್ಯಗಳನ್ನು ನಿರೀಕ್ಷಿತ ಮಟ್ಟದಲ್ಲಿ ಒದಗಿಸಲು ಸಾಧ್ಯವಾಗದೆ ಇದ್ದುದರಿಂದ ಈ ಯೋಜನೆ ಹೆಚ್ಚಿನ ಯಶಸ್ಸು ಗಳಿಸಲಿಲ್ಲ[೩೬].

೧೯೭೪ರಲ್ಲಿ ಟಿ.ಎಂ.ಎ. ಪೈಯವರ ನೇತೃತ್ವದಲ್ಲಿ ಮಣಿಪಾಲದಲ್ಲಿ ಕೆನರಾ ಹಾಲು ಒಕ್ಕೂಟದ ಸ್ಥಾಪನೆಯಾಯಿತು. ೧೯೮೦ರಲ್ಲಿ ಮಣಿಪಾಲ ಕೈಗಾರಿಕಾ ಟ್ರಸ್ಟ್ ಮತ್ತು ರಾಷ್ಟ್ರೀಯ ಹೈನು ಅಭಿವೃದ್ಧಿ ನಿಗಮದವರ ತಾಂತ್ರಿಕ ನಿರ್ದೇಶನದಲ್ಲಿ ಮಣಿಪಾಲದಲ್ಲಿ ೧೦೦೦೦ ಲೀ ಸಾಮರ್ಥ್ಯದ ಡೈರಿ ಕೂಡಾ ಸ್ಥಾಪಿಸಲ್ಪಟ್ಟಿತು. ಉಡುಪಿ, ಕುಂದಾಪುರ, ಕಾರ್ಕಳ ತಾಲೂಕುಗಳಲ್ಲಿ ಸಹಕಾರಿ ತತ್ವದ ಅಡಿಯಲ್ಲಿ ಹಾಲು ಉತ್ಪಾದಕರ ಸಹಕಾರ ಸಂಘಗಳನ್ನು ರಚಿಸಿ ಈ ಸಂಘಗಳಿಂದ ದಿನವೂ ಸರಾಸರಿ ಅಂದಾಜು ೫೦೦೦ ಲೀಟರ್ ಹಾಲನ್ನು ಸಂಗ್ರಹಿಸಿ ಉಡುಪಿ, ಮಣಿಪಾಲ, ಕುಂದಾಪುರ ಹಾಗೂ ಇತರ ಪಟ್ಟಣಗಳ ಗ್ರಾಹಕರಿಗೆ ಹಾಲನ್ನು ಪೂರೈಸುವ ವ್ಯವಸ್ಥೆ ಕೂಡಾ ಆರಂಭಗೊಂಡಿತು[೩೭].

೮.೫.೧೯೮೬ರಲ್ಲಿ "ದಕ್ಷಿಣ ಕನ್ನಡ ಜಿಲ್ಲಾ ಸಹಕಾರಿ ಹಾಲು ಉತ್ಪಾದಕರ ಒಕ್ಕೂಟ" ಅಸ್ತಿತ್ವಕ್ಕೆ ಬಂದಿತು. ೧೯೭೧ರಲ್ಲಿ ಆರಂಭಗೊಂಡ ಮಂಗಳೂರು ಡೈರಿಯನ್ನು ಸೆಪ್ಟೆಂಬರ್ ೧೯೮೮ರಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಸಹಕಾರಿ ಹಾಲು ಉತ್ಪಾದಕರ ಒಕ್ಕೂಟಕ್ಕೆ ಹಸ್ತಾಂತರಿಸಲಾಯಿತು. ಗ್ರಾಮೀಣ ಪ್ರದೇಶಗಳಲ್ಲಿ ಅಮೂಲ್ ಮಾದರಿಯ ಹಾಲು ಉತ್ಪಾದಕರ ಸಹಕಾರ ಸಂಘಗಳನ್ನು ಸ್ಥಾಪಿಸುವುದು, ಸಂಘದ ಸದಸ್ಯರಿಗೆ ಕಡಿಮೆ ವೆಚ್ಚದಲ್ಲಿ ಅಧಿಕ ಹಾಲು ಉತ್ಪಾದನೆಗೆ ಪೂರಕವಾದ ತಾಂತ್ರಿಕ ಸೌಲಭ್ಯಗಳನ್ನು ಒದಗಿಸುವುದು, ಉತ್ಪಾದಿತ ಹಾಲಿಗೆ ಯೋಗ್ಯದರ ಲಭ್ಯವಾಗುವಂತೆ ಖಾಯಂ ಮಾರುಕಟ್ಟೆ ಒದಗಿಸುವುದು, ಸಹಕಾರ ತತ್ವಗಳನ್ನು ಪ್ರಚಾರ ಪಡಿಸಿ ಸೌಹಾರ್ದತೆ ಮೂಡಿಸುವುದು ಒಕ್ಕೂಟದ ಪ್ರಮುಖ ಗುರಿಯಾಗಿರುತ್ತದೆ[೩೮]. ಒಕ್ಕೂಟದ ವತಿಯಿಂದ ೧೯೯೧ರಲ್ಲಿ ಒಂದು ಲಕ್ಷ ಸಾಮರ್ಥ್ಯದ ಹೊಸ ಡೈರಿಯನ್ನು ರಾಷ್ಟ್ರೀಯ ಹೈನು ಅಭಿವೃದ್ಧಿ ನಿಗಮದ ಧನ ಸಹಾಯದಿಂದ ಸ್ಥಾಪಿಸಲಾಗಿದೆ. ಈ ಒಕ್ಕೂಟ ಜಿಲ್ಲೆಯ ಹೈನುಗಾರಿಕೆಯ ಅಭಿವೃದ್ಧಿಗೆ ಹಲವಾರು ಯೋಜನೆಗಳನ್ನು ರೂಪಿಸಿ ಯಶಸ್ವಿಯಾಗಿ ಅನುಷ್ಠಾನಗೊಳಿಸುತ್ತಿದೆ. ಪ್ರಸ್ತುತ ದಕ್ಷಿಣ ಕನ್ನಡದಲ್ಲಿ (ಉಡುಪಿಯನ್ನು ಹೊರತು ಪಡಿಸಿ) ೩೪೯ ಹಾಲು ಉತ್ಪಾಕರ ಸಹಕಾರ ಸಂಘಗಳಿವೆ[೩೯].

## ೪.೬ ಮೀನುಗಾರರ ಸಹಕಾರಿ ಸಂಘಗಳು

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಕರಾವಳಿ ತೀರದಲ್ಲಿ ಮೀನುಗಾರಿಕೆ ಕೂಡಾ ಒಂದು ಪ್ರಮುಖ ಉದ್ಯಮ. ಮೂಲತಃ ಸಂಘ ಜೀವಿಗಳಾದ ಮೀನುಗಾರರನ್ನು ಸಹಕಾರ ತತ್ವದಲ್ಲಿ ಸಂಘಟಿಸಿ ಸಹಕಾರಿ ಸಂಘಗಳನ್ನು ಸ್ಥಾಪಿಸುವ ಕಾರ್ಯ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ

ಸ್ವಾತಂತ್ರ್ಯ ಪೂರ್ವದಲ್ಲೇ ನಡೆದಿದೆ. ೧೯೧೮ರಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮೂರು ಮೀನುಗಾರಿಕಾ ಸಂಘಗಳು ಸ್ಥಾಪಿಸಲ್ಪಟ್ಟವು. ಜೂನ್ ೩೧, ೧೯೧೮ರಲ್ಲಿ ಉದ್ಯಾವರದಲ್ಲಿ ಆರಂಭವಾದ "ಉದ್ಯಾವರ ಮೊಗವೀರ ಸೊಸ್ಯಾಟಿ,"[೪೦] ಅದೇ ವರ್ಷ ಆರಂಭವಾದ ಇಡ್ಯ ಫಿಶರ್ಮೆನ್ ಕೋ-ಓಪರೇಟಿವ್ ಸೊಸ್ಯಾಟಿ ಮತ್ತು ಮೂಲ್ಕಿ ಫಿಶರ್ಮೆನ್ ಕೋ-ಓಪರೇಟಿವ್ ಸೊಸ್ಯಾಟಿಗಳು ಆ ಮೂರು ಮೀನುಗಾರಿಕಾ ಸಹಕಾರಿ ಸಂಘಗಳು. ೧೯೧೯ರಲ್ಲಿ ಹೆಜಮಾಡಿಯಲ್ಲಿ ಹೆಜಮಾಡಿ ಮೀನುಗಾರರ ಸಹಕಾರಿ ಸಂಘ ಆರಂಭವಾಯಿತು[೪೧]. ೧೯೩೪-೩೫ರ ವೇಳೆಗೆ ಜಿಲ್ಲೆಯಲ್ಲಿ ೧೪ ಮೀನುಗಾರರ ಸಹಕಾರಿ ಸಂಘಗಳು ಅಸ್ಥಿತ್ವದಲ್ಲಿದ್ದವು. ಅವುಗಳು ಮದ್ರಾಸ್ ಸರಕಾರದ ಫಿಶರೀಸ್ ಡಿಪಾರ್ಟ್‌ಮೆಂಟ್‌ನ ಮೇಲ್ವಿಚಾರಣೆಗೆ ಒಳಪಟ್ಟಿದ್ದವು[೪೨]. ೧೯೪೧ರ ವೇಳೆಗೆ ಜಿಲ್ಲೆಯಲ್ಲಿ ೧೯ ಮೀನುಗಾರರ ಸಹಕಾರಿ ಸಂಘಗಳಿದ್ದು ಅವುಗಳು ದಕ್ಷಿಣ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕಿನಿಂದ ಸಾಲ ಪಡೆದು ಸದಸ್ಯರಿಗೆ ವಿತರಿಸುವ ಕೆಲಸ ಮಾಡುತ್ತಿದ್ದವು. ಅವುಗಳಲ್ಲಿ ಕಾಸರಗೋಡು ಮತ್ತು ಅಜಾನೂರು ಮೀನುಗಾರರ ಸಹಕಾರಿ ಸಂಘಗಳು ಹಿಡಿದ ಮೀನನ್ನು ಒಟ್ಟುಗೂಡಿಸಿ ರಖಂ ಆಗಿ ಹಸಿಯಾಗಿಯೂ, ಒಣಗಿಸಿಯೂ, ಗೊಬ್ಬರ ಮಾಡಿಯೂ ವಿಕ್ರಯಿಸುವ ಕೆಲಸ ಮಾಡುತ್ತಿದ್ದವು[೪೩]. ಸ್ವಾತಂತ್ರ್ಯ ಪೂರ್ವದಲ್ಲಿ ಮೀನುಗಾರಿಕಾ ಸಹಕಾರಿ ಸಂಘಗಳ ಚಟುವಟಿಕೆಗಳು ಅಷ್ಟು ವಿಸ್ತೃತವಾಗಿರಲಿಲ್ಲ.

೧೯೫೪ ಫೆಬ್ರವರಿ ೨೮ನೇ ತಾರೀಕಿನಿಂದ ನೋಂದಾವಣೆಗೊಂಡು ಅದೇ ವರ್ಷ ಮಾರ್ಚ್ ೧೧ ರಂದು ಮಂಗಳೂರಿನಲ್ಲಿ ಕಾರ್ಯಾರಂಭಿಸಿದ "ದಕ್ಷಿಣ ಕನ್ನಡ ಜಿಲ್ಲಾ ಸಹಕಾರಿ ಮೀನು ಮಾರಾಟ ಫೆಡರೇಶನ್"ನ ಸ್ಥಾಪನೆ ಮೀನುಗಾರಿಕಾ ಸಹಕಾರಿ ಸಂಘಗಳ ಇತಿಹಾಸದಲ್ಲಿ ಒಂದು ಮಹತ್ವದ ಮೈಲಿಗಲ್ಲು. ಆರಂಭಗೊಂಡ ಸ್ವಲ್ಪ ಸಮಯದಲ್ಲೇ ಮೀನುಗಾರಿಕೆಯ ಯಾಂತ್ರೀಕರಣ ಯೋಜನೆಯನ್ನು ಕೈಗೆತ್ತಿಕೊಂಡು ಕಾರ್ಯರೂಪಕ್ಕೆ ಇಳಿಸಿತು[೪೪]. ದಕ್ಷಿಣ ಕನ್ನಡ ಜಿಲ್ಲಾ ಸಹಕಾರಿ ಮೀನು ಮಾರಾಟ ಫೆಡರೇಶನ್ ಯಾಂತ್ರೀಕೃತ ಮೀನುಗಾರಿಕಾ ದೋಣಿಗಳನ್ನು ತರಬೇತಿ ಹೊಂದಿದ ಮೀನುಗಾರ ಪಂಗಡಗಳಿಗೆ ಒದಗಿಸುವುದು, ಮೀನುಗಾರಿಕೆಗೆ ಬೇಕಾದ ಡಿಸೇಲ್ ಸರಬರಾಜು, ಮೀನುಗಾರಿಕಾ ಸಲಕರಣೆಗಳ ಪೂರೈಕೆ ಮುಂತಾದ ಚಟುವಟಿಕೆಗಳನ್ನು ಆರಂಭಿಸಿತು. ೧೯೭೭ರಲ್ಲಿ ರಾಜ್ಯದ ಪ್ರಥಮ ಮೀನುಗಾರರ ಮಹಿಳಾ ಸಹಕಾರ ಸಂಘವು ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಮಲ್ಪೆಯಲ್ಲಿ ಆರಂಭಗೊಂಡಿತು. ೧೯೯೭-೯೮ ರಿಂದ ದಕ್ಷಿಣ ಕನ್ನಡ ಸಹಕಾರಿ ಮೀನು ಮಾರಾಟಗಾರರ ಫೆಡರೇಶನ್ ಸಣ್ಣ ಮೀನುಗಾರರ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ರೂಪಿಸಲಾದ "ಕರ್ನಾಟಕ ಕರಾವಳಿ ಮೀನುಗಾರಿಕಾ ಅಭಿವೃದ್ಧಿ ಯೋಜನೆ"ಯನ್ನು ಅನುಷ್ಠಾನಗೊಳಿಸುತ್ತಿದೆ[೪೫]. ಪ್ರಸ್ತುತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ (ಉಡುಪಿಯನ್ನು

ಹೊರತುಪಡಿಸಿ) ೨೩ ಮೀನುಗಾರರ ಸಹಕಾರಿ ಸಂಘಗಳಿವೆ. ಈ ಸಹಕಾರಿ ಸಂಘಗಳು ಮೀನುಗಾರಿಕಾ ಬೋಟುಗಳ ಖರೀದಿಗೆ ಸಾಲ, ಮೀನುಗಾರರಿಗೆ ಸಬ್ಸಿಡಿ ದರದಲ್ಲಿ ಡಿಸೇಲ್ ಒದಗಿಸುವುದು ಮುಂತಾದ ಚಟವಟಿಕೆಗಳನ್ನು ನಡೆಸುತ್ತಿವೆ.

### ೪.೭ ಜೇನು ವ್ಯವಸಾಯ ಮತ್ತು ಮಾರಾಟ ಸಹಕಾರಿ ಸಂಘಗಳು

ಜೇನು ಕೃಷಿಯನ್ನು ಅಭಿವೃದ್ಧಿಗೊಳಿಸುವ ನಿಟ್ಟಿನಲ್ಲಿ ಸಹಕಾರಿ ಸಂಘಗಳನ್ನು ಸ್ಥಾಪಿಸಿಕೊಳ್ಳುವ ಮೊದಲ ಪ್ರಯತ್ನ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೧೯೩೮ರಲ್ಲಿ ನಡೆಯಿತು. ಮೊಳಹಳ್ಳಿ ಶಿವರಾಯರ ಮಾರ್ಗದರ್ಶನದಲ್ಲಿ ಪೈಲೂರು ಲಕ್ಷ್ಮೀನಾರಾಯಣ ರಾವ್ ಅವರ ನೇತೃತ್ವದಲ್ಲಿ ಜಿಲ್ಲೆಯ ಮೊದಲ ಜೇನು ಸಹಕಾರಿ ಸಂಘ "ಪುತ್ತೂರು ತಾಲೂಕು ಸಹಕಾರಿ ಜೇನು ವ್ಯವಸಾಯ ಜೇನು ಸಂಗ್ರಹ ಮತ್ತು ಮಾರಾಟ ಸಂಘ" ಚೊಕ್ಕಾಡಿಯಲ್ಲಿ (ಸುಳ್ಯ ತಾಲೂಕು) ಆರಂಭವಾಯಿತು. ಶಾಸ್ತ್ರೀಯ ಜೇನು ಕೃಷಿಯ ಕುರಿತು ಮಾಹಿತಿ ನೀಡುವುದು, ಜೇನು ಕೃಷಿಗೆ ಅವಶ್ಯವಾದ ಉಪಕರಣಗಳನ್ನು ಒದಗಿಸುವುದು, ಉತ್ಪಾದಿಸಲ್ಪಟ್ಟ ಜೇನನ್ನು ಖರೀದಿಸಿ ವಿಕ್ರಯಿಸುವುದು ಸಂಘದ ಪ್ರಮುಖ ಉದ್ದೇಶಗಳಾಗಿದ್ದವು. ಈ ಸಂಘವು ಜೇನು ಕೃಷಿಯ ಕುರಿತು ಮಾಹಿತಿ ನೀಡುವ ಶಿಬಿರಗಳನ್ನು ಜಿಲ್ಲೆಯ ವಿವಿಧೆಡೆ ನಡೆಸಿತು. ಸಂಘವು ೧೯೪೨-೪೩ರಲ್ಲಿ ಮಂಗಳೂರಿನ ಕೆನರಾ ಹೈಸ್ಕೂಲಿನಲ್ಲಿ ಅಖಿಲ ಭಾರತ ಜೇನು ವ್ಯವಸಾಯಗಾರರ ಸಮ್ಮೇಳನವನ್ನು ಆಯೋಜಿಸಿತ್ತು. ಆರಂಭದಲ್ಲಿ ಪುತ್ತೂರು ಮತ್ತು ಸುಳ್ಯದ ಕೆಲವು ಗ್ರಾಮಗಳಿಗೆ ಮಾತ್ರ ಸೀಮಿತವಾಗಿದ್ದ ಸಂಘದ ಕಾರ್ಯವ್ಯಾಪ್ತಿಯನ್ನು ೨೫.೧೦.೧೯೪೬ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಗೆ ವಿಸ್ತರಿಸಲಾಯಿತು. ೧೯೫೭ರಲ್ಲಿ ಸಂಘದ ವತಿಯಿಂದ "ಮಧುವನ" ಎಂಬ ಮಾಸ ಪತ್ರಿಕೆಯನ್ನು ಹೊರ ತರಲಾಯಿತು. (ಆದರೆ ಕೆಲವು ವರ್ಷಗಳ ಬಳಿಕ ಚಂದಾದಾರರ ಕೊರತೆಯಿಂದಾಗಿ ಈ ಪತ್ರಿಕೆಯನ್ನು ನಿಲ್ಲಿಸಲಾಯಿತು) ೧೯೬೦ ರಿಂದ ೧೯೬೮ರ ಅವಧಿಯಲ್ಲಿ ಸಂಘದ ಚಟುವಟಿಕೆಗಳು ಕೊಂಚ ಸ್ಥಗಿತಗೊಂಡಿದ್ದವು. ಆದುದರಿಂದ ೧೯೬೮-೬೯ರ ಅವಧಿಯಲ್ಲಿ ಸಂಘವನ್ನು ಪುನರ್ ಸಂಘಟನೆಗೊಳಿಸಲು ಪ್ರಯತ್ನಿಸಲಾಯಿತು ಮತ್ತು ಸಂಘದ ಕಾರ್ಯಾಲಯವನ್ನು ಪುತ್ತೂರಿಗೆ ಸ್ಥಳಾಂತರಿಸಲಾಯಿತು[೪೬].

೧೯೭೩-೭೪ರ ಅವಧಿಯಲ್ಲಿ ಸಂಘದ ವತಿಯಿಂದ ಠೇವಣಿ ಸಂಗ್ರಹಕ್ಕೆ ವಿಶೇಷ ಚಾಲನೆ ನೀಡಲಾಯಿತು ಮತ್ತು ಜೇನು ಸಂಗ್ರಹ, ಜೇನು ವಿಕ್ರಯ ಮತ್ತು ಜೇನು ಪ್ರದರ್ಶನ ಇತ್ಯಾದಿ ಕಾರ್ಯಗಳನ್ನು ಆಯೋಜಿಸಲಾಯಿತು. ೧೯೭೫ - ೧೯೮೦ರ ಅವಧಿಯಲ್ಲಿ ಸಂಘದ ವತಿಯಿಂದ ಮಧು ಸಪ್ತಾಹ ಆಚರಣೆ, ಜಿಲ್ಲೆಯ ವಿವಿಧೆಡೆ ತರಬೇತಿ ಶಿಬಿರಗಳು, ಜೇನು ಖರೀದಿ ವಿಕ್ರಯ ಮುಂತಾದ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಯಿತು. "ಮಧು ಪ್ರಪಂಚ", "ಸ್ಥಳಾಂತರ ಜೇನು ಕೃಷಿ"

ಮತ್ತು "ಮಾಧುರಿ" ಮುಂತಾದ ಪುಸ್ತಕಗಳನ್ನು ಸಂಘದ ವತಿಯಿಂದ ಪ್ರಕಟಸಲಾಯಿತು. ೧೯೮೦ರಲ್ಲಿ ಸುಳ್ಯದಲ್ಲಿ ಸಂಘದ ಶಾಖೆಯನ್ನು ತೆರೆಯಲಾಯಿತು. ಸಂಘದ ವತಿಯಿಂದ ಖಾದಿ ಗ್ರಾಮೋದ್ಯೋಗ ಸಂಸ್ಥೆಗಳ ಉತ್ಪನ್ನಗಳಾದ ಖಾದಿ ಬಟ್ಟೆ, ಸಾಬೂನು, ಗ್ರಂಥದ ಸಾಮಾಗ್ರಿಗಳು ಮುಂತಾದಿ ವಸ್ತುಗಳ ಮಾರಾಟ ವ್ಯವಸ್ಥೆಯನ್ನು ಕೈಗೊಳ್ಳಲಾಯಿತು. ೧೯೮೧ರಲ್ಲಿ ಸಂಘದ ವತಿಯಿಂದ "ಮಧು ಪ್ರಪಂಚ" ಎಂಬ ತ್ರೈಮಾಸಿಕ ಪತ್ರಿಕೆಯು ಕೋಟೆ ಲಕ್ಷ್ಮೀನಾರಾಯಣರಾಯರ ಪ್ರಧಾನ ಸಂಪಾದಕತ್ವದಲ್ಲಿ ಆರಂಭವಾಯಿತು[೪೭]. ಪ್ರಸ್ತುತ ದಕ್ಷಿಣ ಕನ್ನಡ ಜೇನು ವ್ಯವಸಾಯಗಾರರ ಸಹಕಾರಿ ಸಂಘ ಎನ್ನುವ ಹೆಸರಿನಿಂದ ಪುತ್ತೂರಿನಲ್ಲಿ ಕಾರ್ಯ ನಿರ್ವಹಿಸುತ್ತಿರುವ ಈ ಸಂಘ ಜೇನು ಕೃಷಿ ಅಭಿವೃದ್ಧಿಗೆ ಹಲವು ಯೋಜನೆಗಳನ್ನು ರೂಪಿಸಿ ಕಾರ್ಯಗತಗೊಳಿಸಲು ಪ್ರಯತ್ನಿಸುತ್ತಿದೆ.

### ೪.೮ ಗ್ರಾಹಕರ ಸಹಕಾರಿ ಸಂಘಗಳು

ಎರಡನೆಯ ಮಹಾಯುದ್ಧದ ಕಾಲದಲ್ಲಿ ಆಹಾರ ಧಾನ್ಯಗಳ ಕೊರತೆ ಎದುರಾದಾಗ ಆಗಿನ ಮದರಾಸು ಸರಕಾರ ಆಹಾರ ಧಾನ್ಯದ ಕೊರತೆ ನೀಗಿಸಲು ಕಡ್ಡಾಯ ಅಕ್ಕಿ, ಭತ್ತ ಸಂಗ್ರಹಣೆಯನ್ನು ಮತ್ತು ಶಾಸನಬದ್ಧ ನಿಗದಿ ಪಡಿಸಿದ ಪ್ರಮಾಣದ ಅಕ್ಕಿಯನ್ನು ಬಳಕೆದಾರರಿಗೆ ವಿತರಿಸುವ ಕ್ರಮವನ್ನು ಜಿಲ್ಲೆಯಲ್ಲಿ ಜಾರಿಗೊಳಿಸಿತು. ಈ ಹೊಣೆಯನ್ನು ನಿರ್ವಹಿಸಲು ೧೯೪೩ರಲ್ಲಿ ಮಂಗಳೂರಿನಲ್ಲಿ ಮೊಳಹಳ್ಳಿ ಶಿವರಾಯರ ನೇತೃತ್ವದಲ್ಲಿ "ದಕ್ಷಿಣ ಕನ್ನಡ ಸಹಕಾರಿ ಸಗಟು ಮಾರಾಟ ಸಂಸ್ಥೆ" ಸ್ಥಾಪಿಸಲ್ಪಟ್ಟಿತು. ಇದಲ್ಲದೆ ೮೮ ಪ್ರಾಥಮಿಕ ಗ್ರಾಹಕ ಸಂಘಗಳು ಜಿಲ್ಲೆಯ ವಿವಿಧ ಭಾಗಗಳಲ್ಲಿ ಆರಂಭವಾದವು. ಇವುಗಳು ಸರಕಾರದಿಂದ ಒದಗಿಸಲ್ಪಡುವ ನಿಯಂತ್ರಿತ ವಸ್ತುಗಳನ್ನು ಪಡಿತರ ಪದ್ಧತಿಯ ಮೂಲಕ ವಿತರಿಸುವ ಜವಾಬ್ದಾರಿಯನ್ನು ಹೊಂದಿದ್ದವು. ಆದರೆ ನಿಯಂತ್ರಿತ ವಸ್ತುಗಳ ಮಾರಾಟ ಪದ್ಧತಿ ಕೊನೆಗೊಂಡ ಮೇಲೆ ಇವುಗಳಲ್ಲಿ ಹೆಚ್ಚಿನ ಗ್ರಾಹಕ ಸಹಕಾರಿ ಸಂಘಗಳು ಮುಚ್ಚಲ್ಪಟ್ಟವು. ಯಾಕೆಂದರೆ ಅವುಗಳು ಅವುಗಳ ಮುಂದುವರಿಕೆಗೆ ಬೇಕಾದ ಸಂಪನ್ಮೂಲಗಳನ್ನು ಹೊಂದಿರಲಿಲ್ಲ. ಆದರೆ ದಕ್ಷಿಣ ಕನ್ನಡ ಸಹಕಾರಿ ಸಗಟು ಮಾರಾಟ ಕೇಂದ್ರ ಜಿಲ್ಲೆಯಲ್ಲಿ ಅಕ್ಕಿ, ಭತ್ತ ಮತ್ತಿತರ ಆಹಾರ ಧಾನ್ಯಗಳ ಸಂಗ್ರಹ ಕಾರ್ಯದ ಬಗ್ಗೆ ಸರಕಾರದ ಏಕಮಾತ್ರ ಏಜೆಂಟಾಗಿ ಸ್ವಾತಂತ್ರ್ಯ ನಂತರವು ಕಾರ್ಯ ನಿರ್ವಹಿಸುತ್ತಿತ್ತು[೪೮].

೧೯೫೭ರ ವೇಳೆಗೆ ದಕ್ಷಿಣ ಕನ್ನಡ ಸಹಕಾರಿ ಸಗಟು ಮಾರಾಟ ಸಂಘ (ಸೆಂಟ್ರಲ್ ಸ್ಟೋರ್ಸ್) ಆಹಾರ ಧಾನ್ಯಗಳ ಸಂಗ್ರಹ ಮಾತ್ರವಲ್ಲದೆ ಮಿಲ್ ಮತ್ತು ಕೈಮಗ್ಗದ ಬಟ್ಟೆ ವ್ಯಾಪಾರವನ್ನು ನಡೆಸುತ್ತಿತ್ತು. ಈ ಅವಧಿಯಲ್ಲಿ ಜಿಲ್ಲೆಯಲ್ಲಿ ಸುಮಾರು ೬೪ ಪ್ರಾಥಮಿಕ ಗ್ರಾಹಕ ಸಹಕಾರಿ ಸಂಘಗಳಿದ್ದು ಅವುಗಳಲ್ಲಿ ಹೆಚ್ಚಿನವುಗಳು ಕಾಸರಗೋಡು ತಾಲೂಕಿನಲ್ಲಿದ್ದವು. ಸ್ಟೋರು ಚಳುವಳಿ

ಕಾಸರಗೋಡಿನಲ್ಲಿ ಹೆಚ್ಚು ಯಶಸ್ವಿಯಾಗಿತ್ತು[೪೯]. ಪ್ರಸ್ತುತ ಜಿಲ್ಲೆಯಲ್ಲಿ (ಉಡುಪಿಯನ್ನು ಹೊರತುಪಡಿಸಿ) ೨೧ ಗ್ರಾಹಕ ಸಂಘಗಳಿದ್ದು ದಕ್ಷಿಣ ಕನ್ನಡ ಸಹಕಾರಿ ಸಗಟು ಮಾರಾಟ ಸಂಘ ಜನತಾ ಬಜಾರಿನ ಮೂಲಕ ಆಹಾರ ಸಾಮಾಗ್ರಿಗಳು ಹಾಗೂ ಇತರ ವಸ್ತುಗಳನ್ನು ಹೋಲ್‌ಸೇಲ್ ದರದಲ್ಲಿ ವಿತರಿಸುತ್ತಿದೆ.

**೪.೯ ಮಹಿಳಾ ಸಹಕಾರಿ ಸಂಘಗಳು**

ಮಹಿಳೆಯರಲ್ಲಿ ಸ್ವ-ಉದ್ಯೋಗವನ್ನು ಪ್ರೋತ್ಸಾಹಿಸುವ ಉದ್ದೇಶದಿಂದ ಮೊಳಹಳ್ಳಿ ಶಿವರಾಯರ ಮಾರ್ಗದರ್ಶನದಲ್ಲಿ ೧೪.೦೫.೧೯೩೮ ರಂದು ನೋಂದಾವಣೆಗೊಂಡು ಪುತ್ತೂರಿನಲ್ಲಿ ಜಿಲ್ಲೆಯ ಮೊದಲ ಮಹಿಳಾ ಗುಡಿ ಕೈಗಾರಿಕಾ ಸಹಕಾರಿ ಸಂಘ ಆರಂಭಗೊಂಡಿತು[೫೦]. ಆದರೆ ಮಹಿಳಾ ಸದಸ್ಯರಿಂದ ಹಪ್ಪಳ, ಉಪ್ಪಿನಕಾಯಿ ಮುಂತಾದ ಆಹಾರ ವಸ್ತುಗಳ ಖರೀದಿ ಮತ್ತು ಮಾರಾಟಕ್ಕೆ ಮಾತ್ರ ಸಂಘದ ಚಟುವಟಿಕೆಗಳು ಸೀಮಿತಗೊಂಡಿದ್ದವು. ೧೯೪೦-೪೧ರ ವೇಳೆಗೆ ಜಿಲ್ಲೆಯಲ್ಲಿ ಮಂಗಳೂರು ಲೇಡಿಸ್ ಕ್ಲಬ್ ಸ್ಟೋರ್ ಎಂಬ ಮಹಿಳಾ ಗ್ರಾಹಕರ ಸಂಘ ಮತ್ತು ನಾಲ್ಕು ಗುಡಿ ಕೈಗಾರಿಕಾ ಸಂಘಗಳಿದ್ದುವು. ಅವುಗಳಲ್ಲಿ ಎರಡು ಮಂಗಳೂರಿನಲ್ಲೂ, ಒಂದು ಉಡುಪಿಯಲ್ಲೂ, ಒಂದು ಕಾರ್ಕಳದಲ್ಲೂ ಇದ್ದವು[೫೧]. ೧೯೫೧ ಜೂನ್ ೩೦ರ ವೇಳೆಗೆ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೬ ಮಹಿಳಾ ಗುಡಿ ಕೈಗಾರಿಕಾ ಸಂಘಗಳಿದ್ದು ಅವುಗಳಲ್ಲಿ ಪುತ್ತೂರು ಮತ್ತು ಕಾಸರಗೋಡಿನಲ್ಲಿದ್ದ ಮಹಿಳಾ ಗುಡಿ ಕೈಗಾರಿಕಾ ಸಂಘಗಳು ಮಾತ್ರ ಕ್ರಿಯಾಶೀಲವಾಗಿದ್ದು, ಉಡುಪಿ ಮತ್ತು ಕಾರ್ಕಳದ ಸಂಘಗಳು ತಟಸ್ಥವಾಗಿದ್ದವು. ತಾಟಸ್ಥ್ಯ ವಹಿಸಿದ್ದ ಮಂಗಳೂರು ಸಂಘವನ್ನು ಪುನಶ್ಚೇತನಗೊಳಿಸುವ ಪ್ರಯತ್ನಗಳಾದವು[೫೨].

೧೯೭೫ರ ನಂತರ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಹಿಳಾ ವಿವಿಧೋದ್ದೇಶ ಸಹಕಾರಿ ಸಂಘಗಳು, ಮಹಿಳಾ ಹಾಲು ಉತ್ಪಾದಕರ ಸಂಘಗಳು ಆರಂಭಗೊಂಡವು. ೧೯೯೪ರಲ್ಲಿ ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಯ ವ್ಯಾಪ್ತಿಗೆ ಒಳಪಟ್ಟು ಎರಡೂ ಜಿಲ್ಲೆಯ ಮಹಿಳೆಯರಿಗೆ ಸುಲಭ ರೀತಿಯಲ್ಲಿ ಸಾಲ ಸೌಲಭ್ಯ ಒದಗಿಸುವ ಉದ್ದೇಶದೊಂದಿಗೆ ೦೨.೦೮.೧೯೯೪ ರಂದು ನೋಂದಾವಣೆಗೊಂಡು "ದಕ್ಷಿಣ ಕನ್ನಡ ಜಿಲ್ಲಾ ಮಹಿಳಾ ಕೋ-ಓಪರೇಟಿವ್ ಬ್ಯಾಂಕ್" ಮಂಗಳೂರಿನಲ್ಲಿ ಕಾರ್ಯಾರಂಭಿಸಿತು. ಮಹಿಳೆಯರಿಗೆ ಸ್ವ-ಉದ್ಯೋಗ, ಶಿಕ್ಷಣ, ಮೀನುಗಾರಿಕೆ, ಹೊಲಿಗೆ, ಹಪ್ಪಳ, ಸಂಡಿಗೆ ತಯಾರಿ, ಸಣ್ಣ ಕೈಗಾರಿಕೆ, ಗುಡಿ ಕೈಗಾರಿಕೆ ಮುಂತಾದ ಉದ್ದೇಶಗಳಿಗೆ ಸಾಲ ನೀಡುವುದು, ಸಮಾಜದಲ್ಲಿನ ಆರ್ಥಿಕವಾಗಿ ಹಿಂದುಳಿದ ಮತ್ತು ದುರ್ಬಲ ವರ್ಗಗಳ ಮಹಿಳೆಯರ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಲು ಯೋಜನೆಗಳನ್ನು ತಯಾರಿಸಿ ಹಣಕಾಸಿನ ಸೌಲಭ್ಯ ಮಾಡುವುದು ಇವು ಬ್ಯಾಂಕಿನ ಮೂಲ ಉದ್ದೇಶಗಳಾಗಿದ್ದವು[೫೩]. ಪ್ರಸ್ತುತ ಜಿಲ್ಲೆಯಲ್ಲಿ

ಮಹಿಳಾ ಹಾಲು ಉತ್ಪಾದಕರ ಸಹಕಾರಿ ಸಂಘಗಳು, ಮಹಿಳಾ ಗ್ರಾಹಕ ಸಂಘಗಳು, ಮಹಿಳಾ ವಿವಿಧೋದ್ದೇಶ ಸಹಕಾರಿ ಸಂಘಗಳು ಸೇರಿದಂತೆ ೧೦೮ ಮಹಿಳಾ ಸಹಕಾರಿ ಸಂಘಗಳಿವೆ[೫೪].

## ೪.೧೦ ವಿದ್ಯಾರ್ಥಿ ಮತ್ತು ಅಧ್ಯಾಪಕರ ಸಹಕಾರಿ ಸಂಘಗಳು

ವಿದ್ಯಾರ್ಥಿಗಳು ಮತ್ತು ಅಧ್ಯಾಪಕರಲ್ಲಿ ಸಹಕಾರ ತತ್ವವನ್ನು ಪ್ರಚಾರ ಪಡಿಸುವ ಉದ್ದೇಶಕ್ಕಾಗಿ ವಿದ್ಯಾರ್ಥಿ ಮತ್ತು ಅಧ್ಯಾಪಕರ ಸಹಕಾರಿ ಸಂಘಗಳು ಜಿಲ್ಲೆಯಲ್ಲಿ ಸ್ಥಾಪಿಸಲ್ಪಟ್ಟವು. ೧೯೨೩ರಲ್ಲಿ ಪುತ್ತೂರಿನ ಬೋರ್ಡ್ ಹೈಸ್ಕೂಲಿನ ಶಾಲೆಯ ಮಕ್ಕಳ ವಸತಿ ಮತ್ತು ಊಟದ ಸೌಲಭ್ಯ ಒದಗಿಸಲು ದ್ರಾವಿಡ ಬ್ರಾಹ್ಮಣ ಹಾಸ್ಟೇಲ್ ಸ್ಥಾಪಿಸಲ್ಪಟ್ಟಿತು. ಇದಲ್ಲದೆ ವಿದ್ಯಾರ್ಥಿಗಳಿಗೆ ಶಾಲೋಪಯೋಗಿ ವಸ್ತುಗಳನ್ನು ಮಿತದರದಲ್ಲಿ ಒದಗಿಸುವ ಉದ್ದೇಶದಿಂದ ಜಿಲ್ಲೆಯ ವಿವಿಧೆಡೆ ವಿದ್ಯಾರ್ಥಿ ಸಹಕಾರಿ ಸ್ಟೋರುಗಳು ಆರಂಭಗೊಂಡವು. ೧೯೪೦ರ ವೇಳೆಗೆ ಜಿಲ್ಲೆಯಲ್ಲಿ ೬ ವಿದ್ಯಾರ್ಥಿಗಳ ಸ್ಟೇಶನರಿ ಸೊಸ್ಯಾಟಿಗಳು ಅಸ್ಥಿತ್ವದಲ್ಲಿದ್ದು ೧೯೫೧ರಲ್ಲಿ ಅವುಗಳ ಸಂಖ್ಯೆ ೧೯ಕ್ಕೇರಿತು[೫೫]. ಪ್ರಸ್ತುತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ (ಉಡುಪಿಯನ್ನು ಹೊರತುಪಡಿಸಿ) ೧೦ ವಿದ್ಯಾರ್ಥಿ ಸಹಕಾರ ಸಂಘಗಳಿವೆ.

೧೯೧೫ರಲ್ಲಿ ಉಡುಪಿಯಲ್ಲಿ ಶಿರಾಲಿ ಸುಬ್ಬರಾಯರ ನೇತೃತ್ವದಲ್ಲಿ ಸ್ಥಾಪನೆಯಾದ "ಉಡುಪಿ ಕೋ-ಓಪರೇಟಿವ್ ಟೀಚರ್ಸ್ ಸೊಸ್ಯಾಟಿ" ಜಿಲ್ಲೆಯ ಮೊದಲ ಅಧ್ಯಾಪಕರ ಸಂಘ ೧೮.೧೧.೧೯೭೫ರಲ್ಲಿ ಇದು ಟೀಚರ್ಸ್ ಕೋ-ಓಪರೇಟಿವ್ ಬ್ಯಾಂಕ್ ಅಗಿ ಪರಿವರ್ತನೆಗೊಂಡಿತು. ಈ ಬ್ಯಾಂಕ್ ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೧೧ ಶಾಖೆಗಳನ್ನು ಹೊಂದಿದೆ. ೧೯೮೯ರಲ್ಲಿ ಮಂಗಳೂರಿನಲ್ಲಿ ಮಂಗಳೂರು "ಮಂಗಳೂರು ಶಿಕ್ಷಕರ ಸಹಕಾರಿ ಕ್ರೆಡಿಟ್ ಸೊಸ್ಯಾಟಿ" ಸಂಘ ಸ್ಥಾಪಿಸಲ್ಪಟ್ಟಿತು. ೧೯೯೧ರಲ್ಲಿ ಈ ಸಹಕಾರಿ ಸಂಘ ಮಂಗಳೂರಿನ ಸ್ಟೇಟ್‌ಬ್ಯಾಂಕ್ ಬಳಿಯಲ್ಲಿರುವ ಹ್ಯಾಮಿಲ್ಟನ್ ಕಾಂಪ್ಲೆಕ್ಸ್‌ನಲ್ಲಿ "ಶಿಕ್ಷಕ್" ಎಂಬ ಹೆಸರಿನ ಪುಸ್ತಕ ಮಳಿಗೆಯನ್ನು ತೆರೆದಿದ್ದು ಶಿಕ್ಷಣ ಸಂಸ್ಥೆಗಳಿಗೆ, ವಿದ್ಯಾರ್ಥಿಗಳಿಗೆ ಹಾಗೂ ಶಿಕ್ಷಕರಿಗೆ ಉಪಯುಕ್ತವಾಗಿರುವ ಪುಸ್ತಕಗಳು, ಲೇಖನ ಸಾಮಾಗ್ರಿ ಇತ್ಯಾದಿಗಳನ್ನು ಚಿಲ್ಲರೆ ಹಾಗೂ ರಖಂ ದರದಲ್ಲಿ ಮಾರಾಟ ನಡೆಸುತ್ತಿದೆ. ಸರಕಾರಿ ಕಚೇರಿಗಳಿಗೆ ಹಾಗೂ ಶಿಕ್ಷಣ ಸಂಸ್ಥೆಗಳಿಗೆ ಬೇಕಾಗುವ ಅವಶ್ಯ ಸಾಮಾಗ್ರಿಗಳನ್ನು ನಿರ್ದಿಷ್ಟ ಸಮಯದಲ್ಲಿ ಮರು ಪಾವತಿಸುವ ಶರ್ತದೊಂದಿಗೆ ಸಾಲ ರೂಪದಲ್ಲಿಯೂ ಈ ಮಳಿಗೆ ಸರಬರಾಜು ಮಾಡುತ್ತಿದೆ[೫೬].

## ೪.೧೧ ಇತರ ಸಹಕಾರಿ ಸಂಘಗಳು

ಮೇಲಿನ ಸಹಕಾರಿ ಸಂಘಗಳಲ್ಲದೆ ಪ್ರಾಥಮಿಕ ಸೇವಾ ಸಹಕಾರಿ ಸಂಘಗಳು, ನೌಕರರ ಪತ್ತಿನ ಸಹಕಾರಿ ಸಂಘಗಳು, ನೌಕರರ ಪತ್ತಿನ ಸಹಕಾರಿ ಸಂಘಗಳು, ಕೋಳಿ ಸಾಕಣೆದಾರರ ಸಂಘಗಳು, ಉತ್ತಮ ಜೀವನ ಸಂಘಗಳು, ಕೈಗಾರಿಕಾ ಸಹಕಾರಿ ಸಂಘಗಳು, ಪಟ್ಟಣ ಸಹಕಾರಿ ಸಂಘಗಳು, ಬಿಲ್ಡಿಂಗ್ ಸೊಸ್ಯಾಟಿಗಳು, ತಾಳೆಬೆಲ್ಲ ತಯಾರಕ ಸಹಕಾರ ಸಂಘಗಳು, ಕಬ್ಬು ಬೆಳೆಸುವವರ ಸಂಘಗಳು ಹೀಗೆ ಹಲವು ಬಗೆಯ ಸಂಘಗಳು ಸ್ಥಾಪಿಸಲ್ಪಟ್ಟಿವೆ. ಇವುಗಳಲ್ಲಿ ಕೆಲವು ಸಮಾಪನಗೊಂಡರೆ ಇನ್ನೂ ಕೆಲವು ಈಗಲೂ ತಮ್ಮ ಅಸ್ಥಿತ್ವವನ್ನು ಉಳಿಸಿಕೊಂಡಿವೆ. ಜನವರಿ ೧, ೨೦೦೧ರಲ್ಲಿ ಜಾರಿಗೆ ಬಂದ ಕರ್ನಾಟಕ ಸೌಹಾರ್ದ ಸಹಕಾರಿ ಕಾಯಿದೆಯಡಿಯಲ್ಲಿಯೂ ಹಲವು ಸಹಕಾರ ಸಂಘಗಳು ಜಿಲ್ಲೆಯಲ್ಲಿ ಕಾರ್ಯ ನಿರ್ವಹಿಸುತ್ತಿವೆ. ಪ್ರಸ್ತುತ ಜಿಲ್ಲೆಯಲ್ಲಿ ೮೦೧ ಸಹಕಾರ ಸಂಘಗಳು ಅಸ್ತಿತ್ವದಲ್ಲಿವೆ. (ಹೆಚ್ಚಿನ ವಿವರಗಳನ್ನು ಅನುಬಂಧ ೧ ರಲ್ಲಿ ನೀಡಲಾಗಿದೆ)

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಸಹಕಾರ ಚಳುವಳಿಯ ಇತಿಹಾಸವನ್ನು ಅವಲೋಕಿಸಿದಾಗ ಇಲ್ಲಿ ಹಲವು ಬಗೆಯ ಸಹಕಾರ ಸಂಘಗಳು ಬೆಳೆದು ಬಂದಿರುವುದನ್ನು ಕಾಣಬಹುದು. ಜಿಲ್ಲೆಯ ಕೆಲವು ಐತಿಹಾಸಿಕ ಸಹಕಾರ ಸಂಘಗಳು ಅವು ಆರಂಭವಾದಾಗಿನಿಂದ ಇಂದಿನವರೆಗೆ ನಿರಂತರವಾಗಿ ಪ್ರಗತಿ ಕಂಡರೆ ಇನ್ನೂ ಕೆಲವು ತಮ್ಮ ಮೂಲ ಉದ್ದೇಶಗಳನ್ನು ಈಡೇರಿಸಲು ಅಸಮರ್ಥವಾಗಿ ಇಂದು ಅಸ್ಥಿತ್ವದಲ್ಲಿದ್ದರೂ ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸುತ್ತಿಲ್ಲ. ಸ್ವಾತಂತ್ರ್ಯ ಪೂರ್ವದಲ್ಲೇ ಹೆಚ್ಚಿನ ಸಂಖ್ಯೆಯಲ್ಲಿ ಸಹಕಾರ ಸಂಘಗಳು ಸ್ಥಾಪಿಸಲ್ಪಟ್ಟವಾದರೂ ಅವುಗಳ ಸಂಘಟನೆಗೆ ಹೆಚ್ಚು ಒತ್ತು ನೀಡದ ಕಾರಣ ಕೆಲವು ಸಹಕಾರ ಸಂಘಗಳು ಆರಂಭವಾದ ಕೆಲವೇ ವರ್ಷಗಳಲ್ಲಿ ಅಂತ್ಯ ಕಾಣಬೇಕಾಯಿತು. ಸ್ವಾತಂತ್ರ್ಯ ಪೂರ್ವಕ್ಕೆ ಹೋಲಿಸಿದರೆ ಪ್ರಸ್ತುತ ಹೆಚ್ಚಿನ ಸಹಕಾರ ಸಂಘಗಳು ಉತ್ತಮ ರೀತಿಯಲ್ಲಿ ಕಾರ್ಯ ನಿರ್ವಹಿಸುತ್ತಿವೆ.

ಜಿಲ್ಲೆಯ ಮೊದಲ ಸಹಕಾರ ಸಂಘವಾದ "ಪುತ್ತೂರು ರೂರಲ್ ಕ್ರೆಡಿಟ್ ಸೊಸ್ಯಾಟಿ" ಗ್ರಾಮೀಣ ಪ್ರದೇಶದ ರೈತರಿಗೆ ಸಾಲ ಸೌಲಭ್ಯವನ್ನು ಒದಗಿಸುವ ದೃಷ್ಟಿಯಿಂದ ಆರಂಭಗೊಂಡರೂ ಮುಂದೆ ಅದು ಪಟ್ಟಣ ಸಹಕಾರ ಬ್ಯಾಂಕ್ ಆಗಿ ಪರಿವರ್ತನೆಗೊಂಡಿತು. ತನ್ನ ನೂರು ವರ್ಷದ ದೀರ್ಘ ಇತಿಹಾಸದಲ್ಲಿ ಈ ಬ್ಯಾಂಕ್ ಹಂತ ಹಂತವಾಗಿ ಬೆಳೆದು ಬಂದಿದ್ದು ಇಂದು ಕೂಡಾ ಉತ್ತಮ ಪ್ರಗತಿ ಕಾಣುತ್ತಿದೆ. ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಕೂಡಾ ಅದು ಆರಂಭವಾದಾಗಿನಿಂದ ಇಂದಿನವರೆಗೂ ಉತ್ತಮ ಪ್ರಗತಿ ಸಾಧಿಸಿದ್ದು ಸಹಕಾರ ಚಳುವಳಿ ಹೆಚ್ಚು ವಿಸ್ತೃತವಾಗಿ ಬೆಳೆಯಲು ಕಾರಣವಾಗಿದೆ.

ದಕ್ಷಿಣ ಕನ್ನಡ ಜಿಲ್ಲಾ ಸಹಕಾರಿ ಯೂನಿಯನ್ ಕೂಡಾ ಅದು ಆರಂಭವಾದಾಗಿನಿಂದ ಸಹಕಾರಿ ಶಿಕ್ಷಣ ಪ್ರಚಾರ ತರಬೇತಿ ಕಾರ್ಯದಲ್ಲಿ ತೊಡಗಿಸಿಕೊಂಡಿದ್ದರೂ ಆರ್ಥಿಕ ಕೊರತೆಯಿಂದಾಗಿ ಇನ್ನಷ್ಟು ತನ್ನ ಚಟವಟಿಕೆಗಳನ್ನು ವಿಸ್ತರಿಸಿಕೊಳ್ಳಲು ಅಸಮರ್ಥವಾಗಿದೆ. ಕೃಷಿ ಉತ್ಪನ್ನ ಸಹಕಾರ ಮಾರಾಟ ಸಂಘಗಳಲ್ಲಿ ೧೯೧೯ರಲ್ಲಿ ಆರಂಭಗೊಂಡ ದಕ್ಷಿಣ ಕನ್ನಡ ಭಂಡಸಾಲೆ ಸಹಕಾರಿ ಸಂಘ (ಈಗಿನ ದಕ್ಷಿಣ ಕನ್ನಡ ಜಿಲ್ಲಾ ಕೃಷಿಕರ ಸಹಕಾರಿ ಮಾರಾಟ ಸಂಘ) ಇಂದು ಕೂಡಾ ತನ್ನ ಅಸ್ಥಿತ್ವವನ್ನು ಉಳಿಸಿಕೊಂಡಿದ್ದರು. ಇಂದು ಹೆಚ್ಚು ಪರಿಣಾಮಕಾರಿಯಾಗಿ ತನ್ನ ಕಾರ್ಯ ಚಟುವಟಿಕೆಯನ್ನು ನಡೆಸುತ್ತಿಲ್ಲ. ಇದನ್ನು ಪುನರ್ ಸಂಘಟಿಸುವ ಅವಶ್ಯಕತೆ ಇದೆ. ತಾಲೂಕು ಕೃಷಿ ಉತ್ಪನ್ನ ಸಹಕಾರಿ ಮಾರಾಟ ಸಂಘಗಳನ್ನು ಕೂಡಾ ಪುನರ್ ಸಂಘಟಿಸುವ ಅಗತ್ಯ ಇದೆ. ಕೃಷಿ ಉತ್ಪನ್ನ ಸಹಕಾರಿ ಮಾರಾಟ ಸಂಘಗಳಲ್ಲಿ 'ಕ್ಯಾಂಪ್ಕೋ' ಮತ್ತು 'ಮಾಸ್'ಗಳು ಮುಖ್ಯವಾಗಿ ಅಡಿಕೆ ಬೆಳೆಗಾರರ ಹಿತರಕ್ಷಣೆಗೆ ಶ್ರಮಿಸುತ್ತಿವೆ.

೧೯೩೮ರಲ್ಲಿ ರೈತರನ್ನು ಋಣಬಾಧೆಯಿಂದ ಮುಕ್ತಗೊಳಿಸುವ ಉದ್ದೇಶದೊಂದಿಗೆ ಆರಂಭಗೊಂಡ ಭೂ ಅಡಮಾನ ಬ್ಯಾಂಕ್‌ಗಳು (ಆಗ ಜಿಲ್ಲೆಯಲ್ಲಿ ಮೂರು ಭೂ ಅಡಮಾನ ಬ್ಯಾಂಕುಗಳಿದ್ದವು) ೧೯೬೪ರವರೆಗೆ ಕೇವಲ ಹಳೇ ಸಾಲ ಸಂದಾಯಕ್ಕಾಗಿ ಸಾಲ ವಿತರಿಸುತ್ತಿದ್ದುದರಿಂದ ಹೆಚ್ಚಿನ ಅಭಿವೃದ್ಧಿ ಸಾಧಿಸಲಿಲ್ಲ. ೧೯೬೪ರ ನಂತರ ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳು ಎಂದು ಕರೆಯಲ್ಪಡುತ್ತಿರುವ ಈ ಬ್ಯಾಂಕುಗಳು ನಂತರ ತಮ್ಮ ಚಟುವಟಿಕೆಗಳನ್ನು ವೃದ್ಧಿಸಿಕೊಂಡು ಅಭಿವೃದ್ಧಿ ಪಥದಲ್ಲಿ ಸಾಗುತ್ತಿವೆ.

ಸ್ವಾತಂತ್ರ್ಯ ಪೂರ್ವದಲ್ಲೇ ಹಾಲು ಉತ್ಪಾದಕರ ಸಹಕಾರ ಸಂಘಗಳು ಜಿಲ್ಲೆಯ ಕೆಲವು ಭಾಗಗಳಲ್ಲಿ ಸ್ಥಾಪಿಸಲ್ಪಟ್ಟಿದ್ದರೂ ಅವುಗಳು ಹೆಚ್ಚು ಸಂಘಟಿತವಾಗಿರಲಿಲ್ಲ. ೧೯೭೦ರ ನಂತರ ಹೆಚ್ಚಿನ ಸಂಖ್ಯೆಯಲ್ಲಿ ಹಾಲು ಉತ್ಪಾದಕರ ಸಹಕಾರ ಸಂಘಗಳು ಸ್ಥಾಪಿತವಾಗಿದ್ದು, ೧೯೮೬ರಲ್ಲಿ ದಕ್ಷಿಣ ಕನ್ನಡ ಹಾಲು ಉತ್ಪಾದಕರ ಒಕ್ಕೂಟದ ರಚನೆಯಾದ ಮೇಲೆ ಹಾಲು ಉತ್ಪಾದಕರ ಸಹಕಾರ ಸಂಘಗಳು ಅದರ ಮಾರ್ಗದರ್ಶನದಲ್ಲಿ ಕಾರ್ಯ ನಿರ್ವಹಿಸುತ್ತಿದ್ದು ಇದರಿಂದಾಗಿ ಹೈನುಗಾರಿಕೆ ಜಿಲ್ಲೆಯಲ್ಲಿ ಹೆಚ್ಚು ಅಭಿವೃದ್ಧಿ ಹೊಂದುತ್ತಿದೆ.

ಮೀನುಗಾರಿಕಾ ಸಹಕಾರಿ ಸಂಘಗಳು ಕೂಡಾ ಸ್ವಾತಂತ್ರ್ಯ ಪೂರ್ವಕ್ಕೆ ಹೋಲಿಸಿದರೆ ಇಂದು ಅವುಗಳ ಚಟುವಟಿಕೆಗಳನ್ನು ಹೆಚ್ಚಿಸಿಕೊಂಡಿವೆ. ದಕ್ಷಿಣ ಕನ್ನಡ ಜಿಲ್ಲಾ ಸಹಕಾರಿ ಮೀನು ಮಾರಾಟ ಫೆಡರೇಶನ್ ಅಸ್ಥಿತ್ವಕ್ಕೆ ಬಂದ ಮೇಲೆ ಜಿಲ್ಲೆಯಲ್ಲಿ ಮೀನುಗಾರಿಕೆ ಹೆಚ್ಚು ಅಭಿವೃದ್ಧಿಯನ್ನು ಸಾಧಿಸಿದೆ. ದಕ್ಷಿಣ ಕನ್ನಡ ಜಿಲ್ಲಾ ಜೇನು ವ್ಯವಸಾಯ ಸಹಕಾರಿ ಸಂಘವು ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತಿದೆ.

ಸ್ವಾತಂತ್ರ್ಯ ಪೂರ್ವದಲ್ಲೇ ಮಹಿಳಾ ಗುಡಿ ಕೈಗಾರಿಕಾ ಸಹಕಾರಿ ಸಂಘಗಳು ಸ್ಥಾಪಿಸಲ್ಪಟ್ಟಿದ್ದರೂ ಆಗ ಅವುಗಳ ಚಟುವಟಿಕೆಗಳು ಹಪ್ಪಳ, ಸಂಡಿಗೆ ತಯಾರಿ ಮುಂತಾದ ಚಟುವಟಿಕೆಗಳಿಗೆ ಮಾತ್ರ ಸೀಮಿತವಾಗಿತ್ತು. ಆದರೆ ಇತ್ತೀಚಿನ ದಶಕಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳಾ ಸಹಕಾರಿ ಸಂಘಗಳು ಸ್ಥಾಪಿಸಲ್ಪಟ್ಟಿದ್ದು ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತಿವೆ. ಆದರೆ ಹೆಚ್ಚಿನ ಮಹಿಳಾ ವಿವಿಧೋದ್ದೇಶ ಸಹಕಾರಿ ಸಂಘಗಳು ಗ್ರಾಹಕರ ಸಹಕಾರ ಸಂಘಗಳು ಪಟ್ಟಣ ಪ್ರದೇಶಗಳಲ್ಲಿ ಸ್ಥಾಪಿತವಾಗಿರುವುದರಿಂದ ಗ್ರಾಮೀಣ ಮಹಿಳೆಯರ ಭಾಗವಹಿಸುವಿಕೆ ಈ ಸಂಘಗಳಲ್ಲಿ ಕಡಿಮೆ ಇದೆ ಎನ್ನಬಹುದು.

ಜಿಲ್ಲೆಯಲ್ಲಿ ಗ್ರಾಹಕರ ಸಂಘಗಳನ್ನು ಇನ್ನಷ್ಟು ಸಂಘಟಿಸುವ ಅಗತ್ಯ ಇದೆ. ದಕ್ಷಿಣ ಕನ್ನಡ ಜಿಲ್ಲಾ ಸಗಟು ಮಾರಾಟ ಸಂಘ ಮಾತ್ರ ಜನತಾ ಬಜಾರ್‌ನ ಮೂಲಕ ಉತ್ತಮವಾಗಿ ಕಾರ್ಯ ನಿರ್ವಹಿಸುತ್ತಿವೆ. ಆದರೆ ವಿದ್ಯಾರ್ಥಿ ಸಹಕಾರಿ ಸಂಘಗಳನ್ನು ಇನ್ನಷ್ಟು ಸಂಘಟಿಸುವ ಅವಶ್ಯಕತೆ ಇದೆ. ಪ್ರಾಥಮಿಕ ಸಹಕಾರಿ ಸಂಘಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನರ ಏಳಿಗೆಗಾಗಿ ಸ್ಥಾಪಿಸಲ್ಪಟ್ಟಿರುವ ಸಂಘಗಳು, ಪಟ್ಟಣ ಸಹಕಾರಿ ಬ್ಯಾಂಕುಗಳು ಮುಂತಾದ ಸಹಕಾರ ಸಂಘಗಳು ಮುಂತಾದ ಸಹಕಾರಿ ಸಂಘಗಳು ಇಂದು ಹೆಚ್ಚು ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತಿವೆ.

ಮುಖ್ಯವಾಗಿ, ಸ್ವಾತಂತ್ರ್ಯ ಪೂರ್ವ ಕಾಲದಲ್ಲಿ ವಿವಿಧ ಸಹಕಾರ ಸಂಘಗಳು ಜಿಲ್ಲೆಯಲ್ಲಿ ಹುಟ್ಟು ಪಡಕೊಂಡಿದ್ದರೂ ಅವುಗಳು ಕೆಲವೇ ಜನರಿಗೆ ಮಾತ್ರ ಸೀಮಿತಗೊಂಡಿದ್ದವು. ಆದರೆ ಸ್ವಾತಂತ್ರ್ಯಾ ನಂತರದ ದಿನಗಳಲ್ಲಿ ಜಿಲ್ಲೆಯ ಸಹಕಾರ ಕ್ಷೇತ್ರದ ಕಾರ್ಯವ್ಯಾಪ್ತಿ ವಿಸ್ತಾರವಾಗಿದ್ದು, ಸಮಾಜದ ವಿವಿಧ ಸ್ತರಗಳ ಜನರು ಅದರ ಪ್ರಯೋಜನ ಪಡೆಯುತ್ತಿದ್ದಾರೆ. ಆದರೂ ಸಹಕಾರ ಕ್ಷೇತ್ರವನ್ನು ಕಾಡುತ್ತಿರುವ ಸಮಸ್ಯೆಗಳನ್ನು ನಿವಾರಿಸಿ ಜಿಲ್ಲೆಯಲ್ಲಿ ಸಹಕಾರ ಸಂಸ್ಥೆಗಳ ತಳಹದಿಯನ್ನು ಭದ್ರಪಡಿಸುವ ಕಾರ್ಯವನ್ನು ಮುಂದಿನ ದಿನಗಳಲ್ಲಿ ಕೈಗೆತ್ತಿಕೊಳ್ಳುವ ಅವಶ್ಯಕತೆಯಿದೆ.

## ಕೊನೆ ಟಿಪ್ಪಣಿ

೧. ದಿ ಪುತ್ತೂರು ಕೋ–ಓಪರೇಟಿವ್ ಟೌನ್ ಬ್ಯಾಂಕ್ ಲಿ. ಪುತ್ತೂರು ಇದರ ಅಮೃತ ಮಹೋತ್ಸವದ ಸ್ಮರಣ ಸಂಚಿಕೆ ೨೪.೨.೧೯೮೫, ಪು.ಸಂ. ೨ ಮತ್ತು ೩

೨. ಎನ್. ಸುಬ್ರಮಣ್ಯಂ

ಹಿನ್ನೋಟ–ಮುನ್ನೋಟ, "ಬೆಳೆದು ಬಂದ ಹಾದಿ" ದಿ ಪುತ್ತೂರು ಕೋ ಓಪರೇಟಿವ್ ಟೌನ್ ಬ್ಯಾಂಕ್ ಲಿ. ನ ಸ್ಮರಣ ಸಂಚಿಕೆ ೨೮.೯.೨೦೦೪ರಲ್ಲಿ ಪ್ರಕಟವಾದ ಲೇಖನ.

೩. ದಿ ಪುತ್ತೂರು ಕೋ–ಓಪರೇಟಿವ್ ಟೌನ್ ಬ್ಯಾಂಕ್ ಲಿ. ಪುತ್ತೂರು ಇದರ ಅಮೃತ ಮಹೋತ್ಸವದ ಸ್ಮರಣ ಸಂಚಿಕೆ ೨೪.೨.೧೯೮೫, ಪು.ಸಂ. ೩

೪. ಅದೇ ಪು.ಸಂ. ೪,೫

೫. "ಬೆಳೆದು ಬಂದ ಹಾದಿ" ದಿ ಪುತ್ತೂರು ಕೋ–ಓಪರೇಟಿವ್ ಟೌನ್ ಬ್ಯಾಂಕ್ ಲಿ. ಸ್ಮರಣ ಸಂಚಿಕೆ ೨೮.೯.೨೦೦೪ ರಲ್ಲಿನ ಬ್ಯಾಂಕಿನ ಅಭಿವೃದ್ಧಿ ತಖ್ತೆ.

೬. ದಿ ಪುತ್ತೂರು ಕೋ–ಓಪರೇಟಿವ್ ಟೌನ್ ಬ್ಯಾಂಕ್ ಲಿ. ಪುತ್ತೂರು ಇದರ ಅಮೃತ ಮಹೋತ್ಸವದ ಸ್ಮರಣ ಸಂಚಿಕೆ ೨೪.೨.೧೯೮೫, ಪು.ಸಂ. ೫, ೭

೭. ಅದೇ ಪು.ಸಂ. ೫, ೬

೮. ಎನ್. ಸುಬ್ರಮಣ್ಯಂ

ಹಿನ್ನೋಟ–ಮುನ್ನೋಟ, "ಬೆಳೆದು ಬಂದ ಹಾದಿ" ದಿ ಪುತ್ತೂರು ಕೋ ಓಪರೇಟಿವ್ ಟೌನ್ ಬ್ಯಾಂಕ್ ಲಿ.ನ ಸ್ಮರಣ ಸಂಚಿಕೆ ೨೮.೯.೨೦೦೪ರಲ್ಲಿ ಪ್ರಕಟವಾದ ಲೇಖನ.

೯. ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಲಿ. ನ ಸುವರ್ಣ ಮಹೋತ್ಸವದ ಸ್ಮರಣ ಸಂಚಿಕೆ ೧೪.೩.೧೯೬೫, ಪು.ಸಂ. ೯

೧೦. ಮಲ್ಲಿಕಾರ್ಜುನ ಡಿ. ಕಾಂಬಳೆ

ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕು ನಡೆದು ಬಂದ ದಾರಿ, "ದಕ್ಷಿಣ ಕನ್ನಡ ಸಹಕಾರಿ ಪತ್ರಿಕೆ" ಫೆಬ್ರವರಿ – ಮಾರ್ಚ್ ೧೯೯೧ರ ಸಂಚಿಕೆಯಲ್ಲಿ ಪ್ರಕಟಗೊಂಡ ಲೇಖನ ಪು.ಸಂ. ೭

೧೧. ಮಲ್ಲಿಕಾರ್ಜುನ ಡಿ. ಕಾಂಬಳೆ

ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕು ನಡೆದು ಬಂದ ದಾರಿ, "ದಕ್ಷಿಣ ಕನ್ನಡ ಸಹಕಾರಿ ಪತ್ರಿಕೆ" ಫೆಬ್ರವರಿ – ಮಾರ್ಚ್ ೧೯೯೧ರ ಸಂಚಿಕೆಯಲ್ಲಿ ಪ್ರಕಟಗೊಂಡ ಲೇಖನ ಪು.ಸಂ. ೮, ೯

೧೨. ಅದೇ ಪು.ಸಂ. ೮

೧೩. ಅದೇ ಪು.ಸಂ. ೯

೧೪. ಅಣ್ಣಯ್ಯ ಸೇರಿಗಾರ್

ಜಿಲ್ಲೆಯ ಹಳ್ಳಿಗಳ ಅಭಿವೃದ್ಧಿಯಲ್ಲಿ ಸ್ವ–ಸಹಾಯ ಗುಂಪುಗಳ ಪಾತ್ರ, "ಸಮನ್ವಯ" ಅಖಿಲ ಭಾರತ ಸುವರ್ಣ ಸಹಕಾರ ಸಪ್ತಾಹ ೨೦೦೩ರ ಸ್ಮರಣ ಸಂಚಿಕೆಯಲ್ಲಿ ಪ್ರಕಟವಾದ ಲೇಖನ.

೧೫. ದಕ್ಷಿಣ ಕನ್ನಡ ಸಹಕಾರಿ ಪತ್ರಿಕೆ, ನವೆಂಬರ್ ೨೦೦೧, ಪು.ಸಂ. ೯

೧೬. ದಕ್ಷಿಣ ಕನ್ನಡ ಜಿಲ್ಲಾ ಸಹಕಾರಿ ಯೂನಿಯನ್ ನಿ. ಮಂಗಳೂರು ಇದರ ೨೦೦೮-೦೯ನೇ ಸಾಲಿನ ವಾರ್ಷಿಕ ವರದಿ

೧೭. ಕನ್ನಡ ಸಹಕಾರಿ, ಎಪ್ರಿಲ್ ೧೯೫೨, ಪು.ಸಂ. ೧೭

೧೮. ಅಭಿಶಂಕರ್ ಕೆ. (ಪ್ರಸಂ)

ಗಝಟಿಯರ್ ಆಫ್ ಇಂಡಿಯಾ, ಕರ್ನಾಟಕ ಸ್ಟೇಟ್ ಗಝಟಿಯರ್ – ಸೌತ್ ಕೆನರಾ ಡಿಸ್ಟ್ರಿಕ್ಟ್, ೧೯೭೩, ಪು.ಸಂ. ೨೮೯

೧೯. ಕನ್ನಡ ಸಹಕಾರಿ, ಅಕ್ಟೋಬರ್ ೧, ೧೯೪೧, ಪು.ಸಂ. ೨೬

೨೦. ಕನ್ನಡ ಸಹಕಾರಿ, ಎಪ್ರಿಲ್ ೧೯೫೨, ಪು.ಸಂ. ೧೮

೨೧. ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಲಿ. ನ ವಜ್ರ ಮಹೋತ್ಸವದ ಸ್ಮರಣ ಸಂಚಿಕೆ ೧೯೭೩

೨೨. ಕನ್ನಡ ಸಹಕಾರಿ, ಎಪ್ರಿಲ್ ೧೯೫೨, ಪು.ಸಂ. ೧೭, ೧೯

೨೩. ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಲಿ. ನ ವಜ್ರ ಮಹೋತ್ಸವದ ಸ್ಮರಣ ಸಂಚಿಕೆ ೧೯೭೩

೨೪. ರಂಗಮೂರ್ತಿ ಎಸ್.ಆರ್.

ದ ಸ್ಟೋರಿ ಆಫ್ ಸ್ವೀಟ್ ಸಕ್ಸೆಸ್ ಆಫ್ ಎ ಕೋ ಓಪರೇಟಿವ್ ಜಾಯಂಟ್ "ಕ್ಯಾಂಪ್ಕೋ" ಪು.ಸಂ.೨, ೪,೫

೨೫. ಅದೇ ಪು.ಸಂ. ೫

೨೬. ಸುದ್ದಿ ಬಿಡುಗಡೆ ದಿನಪತ್ರಿಕೆ, ೨೫.೦೮.೨೦೦೯

೨೭. ಸಂಧ್ಯಾರಾಣಿ ಕೆ.

ಎ ಸ್ಟಡಿ ಆನ್ ಮಂಗಳೂರು ಅಗ್ರಿಕಲ್ಚರಿಸ್ಟ್ ಸೌಹಾರ್ದ ಸಹಕಾರಿ ಲಿಮಿಟೆಡ್, ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾನಿಲಯಕ್ಕೆ ಎಂ.ಬಿ.ಎ ಪದವಿಗಾಗಿ ಸಲ್ಲಿಸಿದ ಅಧ್ಯಯನ ವರದಿ.

೨೮. ಕನ್ನಡ ಸಹಕಾರಿ, ಎಪ್ರಿಲ್ ೧೯೫೨, ಪು.ಸಂ. ೭

೨೯. ಎನ್. ಶ್ಯಾಮ್ ಭಟ್

ಅರ್ಲಿ ಕೊಲೋನಿಯಲ್ ಎಕ್ಸ್‌ಪಿರಿಯನ್ಸ್, ಕೆನರಾ "ಮೊಲಿ" ೨೦೦೧ರಲ್ಲಿ ಪ್ರಕಟಗೊಂಡ ಲೇಖನ

೩೦. ಕೆಮ್ಮಾರ ಬಾಲಕೃಷ್ಣ ಗೌಡ

ನಡೆದು ಬಂದ ದಾರಿ, "ವಜ್ರಕಲಶ" ಸ್ಮರಣ ಸಂಚಿಕೆ ೧೯೯೯ರಲ್ಲಿ ಪ್ರಕಟವಾದ ಲೇಖನ ಪು.ಸಂ. ೧

೩೧. ಕೆಮ್ಮಾರ ಬಾಲಕೃಷ್ಣ ಗೌಡ

ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕುಗಳು, "ಚೈತನ್ಯ" ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲಾ ಸುವರ್ಣ ಸಹಕಾರಿ ಉತ್ಸವ ೧೯೯೮ರ ಸ್ಮರಣ ಸಂಚಿಕೆಯಲ್ಲಿ ಪ್ರಕಟಗೊಂಡ ಲೇಖನ.

೩೨. ಕನ್ನಡ ಸಹಕಾರಿ, ಎಪ್ರಿಲ್ ೧೯೫೨, ಪು.ಸಂ. ೭

೩೩. ಕೆಮ್ಮಾರ ಬಾಲಕೃಷ್ಣ ಗೌಡ

ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕುಗಳು, "ಚೈತನ್ಯ" ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲಾ ಸುವರ್ಣ ಸಹಕಾರಿ ಉತ್ಸವ ೧೯೯೮ರ ಸ್ಮರಣ ಸಂಚಿಕೆಯಲ್ಲಿ ಪ್ರಕಟಗೊಂಡ ಲೇಖನ.

೩೪. ಈ ಮಾಹಿತಿಯನ್ನು ಸಹಕಾರಿ ಸಂಘಗಳ ಡೆಪ್ಯೂಟಿ ರಿಜಿಸ್ಟ್ರಾರರ ಕಚೇರಿಯಿಂದ ಪಡೆದುಕೊಳ್ಳಲಾಗಿದೆ.

೩೫. ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಲಿ. ನ ವಜ್ರ ಮಹೋತ್ಸವದ ಸ್ಮರಣ ಸಂಚಿಕೆ ೧೯೭೩

೩೬. ಐರೋಡಿ ಜಗದೀಶ ಕಾರಂತ

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹೈನುಗಾರಿಕೆ ಮತ್ತು ಹಾಲು ಉತ್ಪಾದಕರ ಸಹಕಾರ ಸಂಘಗಳು. 'ಚೈತನ್ಯ' ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲಾ ಸುವರ್ಣ ಸಹಕಾರ ಉತ್ಸವ ೧೯೯೮ರ ಸ್ಮರಣ ಸಂಚಿಕೆಯಲ್ಲಿ ಪ್ರಕಟಗೊಂಡ ಲೇಖನ.

೩೭. ಅದೇ

೩೮. ಅದೇ

೩೯. ಈ ಮಾಹಿತಿಯನ್ನು ಸಹಕಾರಿ ಸಂಘಗಳ ಡೆಪ್ಯೂಟಿ ರಿಜಿಸ್ಟ್ರಾರರ ಕಚೇರಿಯಿಂದ ಪಡೆದುಕೊಳ್ಳಲಾಗಿದೆ.

೪೦. ಯಸ್.ಕೆ. ಅಮೀನ್

ಮೀನು ವ್ಯವಸಾಯದಲ್ಲಿ ಸಹಕಾರಿ ಚಳುವಳಿ, ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕಿನ "ಸುವರ್ಣ ಮಹೋತ್ಸವದ" ಸ್ಮರಣ ಸಂಚಿಕೆ ೧೯೬೫ರಲ್ಲಿ ಪ್ರಕಟವಾದ ಲೇಖನ.

೪೧. ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಲಿ. ನ ವಜ್ರ ಮಹೋತ್ಸವದ ಸ್ಮರಣ ಸಂಚಿಕೆ ೧೯೭೩

೪೨. ಅಭಿಶಂಕರ್ ಕೆ. (ಪ್ರಸಂ)

ಗಝೆಟಿಯರ್ ಆಫ್ ಇಂಡಿಯಾ, ಕರ್ನಾಟಕ ಸ್ಟೇಟ್ ಗಝೆಟಿಯರ್ – ಸೌತ್ ಕೆನರಾ ಡಿಸ್ಟ್ರಿಕ್ಟ್, ೧೯೭೩, ಪು.ಸಂ. ೨೮೨

೪೩. ಕನ್ನಡ ಸಹಕಾರಿ. ಆಗಸ್ಟ್ ೧೯೪೧

೪೪. ಯಸ್.ಕೆ. ಅಮೀನ್

ಮೀನು ವ್ಯವಸಾಯದಲ್ಲಿ ಸಹಕಾರಿ ಚಳುವಳಿ, ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕಿನ "ಸುವರ್ಣ ಮಹೋತ್ಸವದ" ಸ್ಮರಣ ಸಂಚಿಕೆ ೧೯೬೫ರಲ್ಲಿ ಪ್ರಕಟಗೊಂಡ ಲೇಖನ.

೪೫. ಪಿ. ಪರಶುರಾಮ್

ಮೀನುಗಾರಿಕಾ ಸಹಕಾರಿ ಸಂಘಗಳು – ಒಂದು ಸಮೀಕ್ಷೆ, 'ಚೈತನ್ಯ' ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲಾ ಸುವರ್ಣ ಸಹಕಾರಿ ಉತ್ಸವ ೧೯೯೮ರ ಸ್ಮರಣ ಸಂಚಿಕೆಯಲ್ಲಿ ಪ್ರಕಟವಾದ ಲೇಖನ.

೪೬. ಪೈಲೂರು ಲಕ್ಷ್ಮೀನಾರಾಯಣ ರಾವ್

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಜೇನು ವ್ಯವಸಾಯದ ಪ್ರಾರಂಭ ಮತ್ತು ಪ್ರಗತಿ, 'ಮಧು ಪ್ರಪಂಚ' ವಿಶೇಷಾಂಕ, ೨೦೦೨ರಲ್ಲಿ ಪ್ರಕಟವಾದ ಲೇಖನ, ಪು. ಸಂ. ೧, ೨

೪೭. ಅದೇ ಪು.ಸಂ. ೨, ೩

೪೮. ಅಭಿಶಂಕರ್ .ಕೆ (ಪ್ರಸಂ)

ಗಝೆಟಿಯರ್ ಆಫ್ ಇಂಡಿಯಾ, ಕರ್ನಾಟಕ ಸ್ಟೇಟ್ ಗಝೆಟಿಯರ್ – ಸೌತ್ ಕೆನರಾ ಡಿಸ್ಟ್ರಿಕ್ಟ್, ೧೯೭೩, ಪು.ಸಂ. ೨೯೧

೪೯. ಕನ್ನಡ ಸಹಕಾರಿ, ಎಪ್ರಿಲ್ ೧೯೫೨, ಪು.ಸಂ. ೨೩

೫೦. ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಲಿ. ನ "ವಜ್ರ ಮಹೋತ್ಸವದ" ಸ್ಮರಣ ಸಂಚಿಕೆ ೧೯೭೩

೫೧. ಕನ್ನಡ ಸಹಕಾರಿ, ಅಕ್ಟೋಬರ್, ೧೯೪೧, ಪು.ಸಂ. ೨೯

೫೨. ಕನ್ನಡ ಸಹಕಾರಿ, ಎಪ್ರಿಲ್ ೧೯೫೨, ಪು.ಸಂ. ೨೫

೫೩. ಪೇರಾಜೆ ಶ್ರೀನಿವಾಸ ರಾವ್(ಸಂ)

'ಸಾಧನೆ' ದಕ್ಷಿಣ ಕನ್ನಡ ಮಹಿಳಾ ಕೋ-ಓಪರೇಟಿವ್ ಬ್ಯಾಂಕ್ ಲಿ. ಮಂಗಳೂರು ಇದರ ದಶಮಾನೋತ್ಸವದ ಸ್ಮರಣ ಸಂಚಿಕೆ ೨೦೦೪

೫೪. ಈ ಮಾಹಿತಿಯನ್ನು ಸಹಕಾರಿ ಸಂಘಗಳ ಡೆಪ್ಯೂಟಿ ರಿಜಿಸ್ಟ್ರಾರರ ಕಚೇರಿಯಿಂದ ಪಡೆದುಕೊಳ್ಳಲಾಗಿದೆ.

೫೫. ಕನ್ನಡ ಸಹಕಾರಿ, ಎಪ್ರಿಲ್ ೧೯೫೨

೫೬. ಮಂಗಳೂರು ಶಿಕ್ಷಕರ ಕ್ರೆಡಿಟ್ ಸಂಘ ನಿ. ಇದರ ೨೦೦೭-೦೮ನೇ ಸಾಲಿನ ವಾರ್ಷಿಕ ವರದಿ.

**********

# ಅಧ್ಯಾಯ ೫

# ದಕ್ಷಿಣ ಕನ್ನಡದ ಪ್ರಮುಖ ಸಹಕಾರಿ ನೇತಾರರು

•

# ಅಧ್ಯಾಯ ೫

# ದಕ್ಷಿಣ ಕನ್ನಡದ ಪ್ರಮುಖ ಸಹಕಾರಿ ನೇತಾರರು

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಹಕಾರ ಚಳುವಳಿ ವ್ಯಾಪಕವಾಗಿ ಹಬ್ಬಲು ಹಲವಾರು ಮಹನೀಯರು ಮತ್ತು ಮಹಿಳೆಯರು ಕಾರಣರಾಗಿದ್ದಾರೆ. ಜಿಲ್ಲೆಯ "ಸಹಕಾರಿ ಪಿತಾಮಹಾ" ಎಂದು ಕರೆಯಲ್ಪಡುವ ಮೊಳಹಳ್ಳಿ ಶಿವರಾಯರು ಮತ್ತು ಅವರ ಸಹವರ್ತಿಗಳು ಜಿಲ್ಲೆಯಲ್ಲಿ ಹುಟ್ಟುಹಾಕಿದ ಸಹಕಾರ ಚಳುವಳಿ ಜಿಲ್ಲೆಯಾದ್ಯಂತ ಪಸರಿಸಿ ಇಂದಿಗೂ ಕೂಡಾ ಜಿಲ್ಲೆಯ ಜನಜೀವನದಲ್ಲಿ ತನ್ನದೇ ಆದ ಪ್ರಭಾವವನ್ನು ಬೀರಿದೆ. ಜಿಲ್ಲೆಯಲ್ಲಿ ಸಹಕಾರ ಚಳುವಳಿಯನ್ನು ಕಟ್ಟಿ ಬೆಳೆಸುವುದರಲ್ಲಿ ನೂರಾರು ಜನ ಸಹಕಾರಿಗಳು ತಮ್ಮದೇ ಆದ ಕೊಡುಗೆಗಳನ್ನು ನೀಡಿದ್ದಾರೆ. ಆದರೆ ಈ ಅಧ್ಯಾಯದಲ್ಲಿ ಜಿಲ್ಲೆಯ ಪ್ರಮುಖ ಸಹಕಾರಿ ನೇತಾರರು ಮತ್ತು ಪ್ರಮುಖ ಮಹಿಳಾ ಸಹಕಾರಿಗಳ ಬಗ್ಗೆ ಮಾತ್ರ ಉಲ್ಲೇಖಿಸಲಾಗಿದೆ.

### ೫.೧. ಹಿರಿಯ ಸಹಕಾರಿ ಮೊಳಹಳ್ಳಿ ಶಿವರಾಯರು.

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಸಹಕಾರ ಚಳುವಳಿಯ ಇತಿಹಾಸದಲ್ಲಿ ಮೊಳಹಳ್ಳಿ ಶಿವರಾಯರಿಗೆ ಉನ್ನತ ಸ್ಥಾನವಿದೆ. ಜಿಲ್ಲೆಯಲ್ಲಿ ಸಹಕಾರ ಚಳುವಳಿ ಗಟ್ಟಿಗೊಳ್ಳಲು ಭದ್ರಬುನಾದಿ ಹಾಕಿಕೊಟ್ಟವರು ಅವರು. ಜಿಲ್ಲೆಯ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಕ್ಷೇತ್ರದಲ್ಲಿ ಅವರು ತಮ್ಮದೇ ಆದ ಕೊಡುಗೆಗಳನ್ನು ನೀಡಿದ್ದಾರೆ. ಮೊಳಹಳ್ಳಿ ಶಿವರಾಯರು ಆಗಸ್ಟ್ ೧೮೮೦ರ ಆಗಸ್ಟ್‌ನಲ್ಲಿ ಪುತ್ತೂರಿನಲ್ಲಿ ಜನಿಸಿದರು. ಅವರು ವೃತ್ತಿಯಲ್ಲಿ ವಕೀಲರಾಗಿದ್ದರು[೧].

ಸಾರ್ವಜನಿಕ ಸೇವೆಯಲ್ಲಿ ಆಸಕ್ತಿ ಹೊಂದಿದ್ದ ಶಿವರಾಯರು ಶಿಕ್ಷಣ, ಕಲೆ, ಸಹಕಾರ ಮತ್ತು ಸಮಾಜ ಸೇವೆ ಹೀಗೆ ಹಲವು ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಗಾಂಧೀಜಿಯವರ ಪ್ರಭಾವಕ್ಕೊಳಗಾಗಿದ್ದ ಶಿವರಾಯರು ಗಾಂಧೀಜಿಯವರ ಜೀವನ ತತ್ವಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡಿದ್ದರು. ೧೯೩೦ರ ನಂತರ ಅವರು ಗಾಂಧಿ ಟೋಪಿ ಮತ್ತು ಖಾದಿ ಬಟ್ಟೆಗಳನ್ನು ಧರಿಸಲಾರಂಭಿಸಿದರು. ಗಾಂಧೀಜಿಯವರ ಪ್ರಭಾವದಿಂದಾಗಿಯೇ ಅವರು ಅಸ್ಪೃಶ್ಯತಾ ನಿವಾರಣೆ ಮತ್ತು ಮದ್ಯಪಾನ ವಿರುದ್ಧ ಜಾಗೃತಿ ಕಾರ್ಯಕ್ರಮಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು[೨]. ಸ್ವಾತಂತ್ರ್ಯ ಹೋರಾಟಗಾರ ಕಾರ್ನಾಡ್ ಸದಾಶಿವ ರಾಯರ ಜೊತೆ ಕೂಡಾ ಅವರು ನಿಕಟ ಸಂಪರ್ಕ ಹೊಂದಿದ್ದರು.

ಶೈಕ್ಷಣಿಕ ಕ್ಷೇತ್ರಕ್ಕೂ ಅಪಾರ ಕೊಡುಗೆ ನೀಡಿರುವ ಅವರು ಪುತ್ತೂರು ತಾಲೂಕಿನಾದ್ಯಂತ ಹಲವಾರು ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ಸ್ಥಾಪನೆಗೆ ಕಾರಣಕರ್ತರಾಗಿದ್ದಾರೆ. ಪುತ್ತೂರಿನ ಬೋರ್ಡ್ ಹೈಸ್ಕೂಲು ಮತ್ತು ಪುತ್ತೂರು ಎಜುಕೇಶನ್ ಸೊಸ್ಯಾಟಿಯ (೧೯೧೬) ಸ್ಥಾಪನೆಯಲ್ಲಿ ಅವರು ಪ್ರಮುಖ ಪಾತ್ರವಹಿಸಿದರು. ಪ್ರಾಥಮಿಕ ಶಿಕ್ಷಣವನ್ನು ಮಕ್ಕಳಿಗೆ ಹೇಗೆ ನೀಡಬೇಕೆಂಬ ಬಗ್ಗೆ ಸ್ಪಷ್ಟವಾದ ಕಲ್ಪನೆ ಹೊಂದಿದ್ದ ಅವರು ಡಾ. ಶಿವರಾಮ ಕಾರಂತರ ಶಿಕ್ಷಣ ಪ್ರಯೋಗಗಳಿಗೆ ಆರ್ಥಿಕ ಮತ್ತು ಬೌದ್ಧಿಕ ಮಾರ್ಗದರ್ಶನ ಒದಗಿಸಿದ್ದಾರೆ. ಅವರು ಸಾಹಿತ್ಯ ಮತ್ತು ಸಾಂಸ್ಕೃತಿಕ ಕ್ಷೇತ್ರದಲ್ಲೂ ವಿಶೇಷ ಆಸಕ್ತಿಯನ್ನು ಹೊಂದಿದ್ದರು. ಡಾ. ಶಿವರಾಮ ಕಾರಂತರ ಜೊತೆ ಆತ್ಮೀಯ ಒಡನಾಟ ಹೊಂದಿದ್ದ ಶಿವರಾಯರು ೧೯೩೦ರಲ್ಲಿ ಕಾರಂತರನ್ನು ಪುತ್ತೂರಿಗೆ ಆಹ್ವಾನಿಸಿ ಅವರು ಪುತ್ತೂರಿನಲ್ಲಿ ನೆಲೆಯೂರುವುದಕ್ಕೆ ಸೌಕರ್ಯ ಮಾಡಿಕೊಟ್ಟರು. ಅಸ್ಪೃಶ್ಯತಾ ನಿವಾರಣೆ ಮತ್ತು ಮದ್ಯಪಾನ ವಿರುದ್ಧ ಜಾಗೃತಿ, ನಾಟಕ ಬರೆಯ ಬೇಕೆಂಬ ಶಿವರಾಯರ ವಿನಂತಿಯ ಮೇರೆಗ ಕಾರಂತರು 'ಡೊಮಿಂಗೋ' ಮತ್ತು 'ಸಾವಿರ ಮಿಲಿಯ' ಎಂಬ ನಾಟಕಗಳನ್ನು ರಚಿಸಿದರು. ಈ ನಾಟಕಗಳನ್ನು ಪ್ರದರ್ಶಿಸಲು ಸಹಾ ಶಿವರಾಯರು ಕಾರಂತರಿಗೆ ನೆರವಾದರು[೩].

೧೯೩೦ರಿಂದ ಪುತ್ತೂರಿನಲ್ಲಿ ದಸರಾ ಸಾಹಿತ್ಯೋತ್ಸವವನ್ನು ಆಯೋಜಿಸಲು ಶಿವರಾಯರು ಕಾರಂತರಿಗೆ ನೆರವು ನೀಡಿದರು[೪]. ಯಕ್ಷಗಾನದಲ್ಲೂ ಶಿವರಾಯರಿಗೆ ಅಪಾರ ಆಸಕ್ತಿ. ಮೌಲ್ಯಯುತ ರಾಜಕಾರಣವನ್ನು ಪ್ರತಿಪಾದಿಸುತ್ತಿದ್ದ ಅವರು ಪುತ್ತೂರಿನ ತಾಲೂಕು ಬೋರ್ಡ್ ಅಧ್ಯಕ್ಷರಾಗಿ, ಜಿಲ್ಲಾ ಬೋರ್ಡಿನ ಸದಸ್ಯರಾಗಿ, ವಿವಿಧ ಸಹಕಾರಿ ಸಂಘಗಳ ಅಧ್ಯಕ್ಷರಾಗಿ, ನಿರ್ದೇಶಕರಾಗಿ ಸೇವೆಸಲ್ಲಿಸಿದ್ದಾರೆ.

**ಶಿವರಾಯರು ಮತ್ತು ಸಹಕಾರ ಚಳುವಳಿ:**

ಮೊಳಹಳ್ಳಿ ಶಿವರಾಯರು ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಸಹಕಾರಿ ಕ್ಷೇತ್ರಕ್ಕೆ ವಿಶಿಷ್ಟ ಕೊಡುಗೆ ನೀಡಿದ್ದಾರೆ. ಸಹಕಾರ ಚಳುವಳಿಯನ್ನು ಜಿಲ್ಲೆಯಲ್ಲಿ ಯಶಸ್ವಿಯಾಗಿ ಅನುಷ್ಠಾನಗೊಳಿಸುವಲ್ಲಿ ಅವರು ಪ್ರಮುಖ ಪಾತ್ರ ವಹಿಸಿದರು. ಬ್ರಿಟಿಷ್ ಸರಕಾರ ೧೯೦೪ರಲ್ಲಿ ಜಾರಿಗೆ ತಂದ ಸಹಕಾರ ಕಾಯಿದೆಯ ಮಹತ್ವವನ್ನು ಮನಗಂಡು, ಮದರಾಸಿನ ರಾಮದಾಸ ಪಂತುಲು, ಕೊಯಮುತ್ತೂರಿನ ಮಹಾಲಿಂಗಂ ಚೆಟ್ಟಿಯಾರ್ ಮೊದಲಾದ ಮಹನೀಯರಿಂದ ಸ್ಫೂರ್ತಿ ಪಡೆದು[೫] ೧೯೦೯ರಲ್ಲಿ ತನ್ನ ಹುಟ್ಟೂರಾದ ಪುತ್ತೂರಿನಲ್ಲಿ ಶಿವರಾಯರು ಜಿಲ್ಲೆಯ ಮೊತ್ತ ಮೊದಲ ಸಹಕಾರ ಸಂಘವಾದ "ಪುತ್ತೂರು ರೂರಲ್ ಕ್ರೆಡಿಟ್ ಸೊಸ್ಯಾಟಿ"ಯನ್ನು ತಮ್ಮ ಸ್ನೇಹಿತರ ನೆರವಿನಿಂದ ಸ್ಥಾಪಿದರು. ಆ ಮೂಲಕ ಜಿಲ್ಲೆಯಲ್ಲಿ ಸಹಕಾರ ಚಳುವಳಿಗೆ ಅಧಿಕೃತ ಚಾಲನೆ ನೀಡಿದರು. ಮುಂದೆ ಈ ಸಂಸ್ಥೆ

"ಪುತ್ತೂರು ಕೋ ಓಪರೇಟಿವ್ ಟೌನ್ ಬ್ಯಾಂಕ್" ಆಗಿ ಪರಿವರ್ತನೆಗೊಂಡಿತು. ಶಿವರಾಯರು ಕಾಲ್ನಡಿಗೆಯಿಂದ ಹಾಗೂ ಎತ್ತಿನ ಗಾಡಿಯಲ್ಲಿ ಜಿಲ್ಲೆಯ ಹಲವೆಡೆ ಸಂಚರಿಸಿ ಸಹಕಾರ ತತ್ವದ ಪ್ರಚಾರ ನಡೆಸಿದರು. "ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕು" ೧೯೧೪ರಲ್ಲಿ ಶಿವರಾಯರ ಮೂಲಕವೇ ಪುತ್ತೂರಿನಲ್ಲಿ ಸ್ಥಾಪಿಸಲ್ಪಟ್ಟಿತು. ಮುಂದೆ ಅದರ ಕೇಂದ್ರ ಕಛೇರಿ ಮಂಗಳೂರಿಗೆ ವರ್ಗಾಯಿಸಲ್ಪಟ್ಟಿತು[೬].

೧೯೧೮ರಲ್ಲಿ ವಿಟ್ಲದಲ್ಲಿ ಅರಂಭವದ ಜಿಲ್ಲಾ ತೋಟಗಾರರ ಸಗಟು ಮಾರಾಟ ಸಹಕಾರಿ ಸಂಘ (S.K. Garden planters Co-operative wholesale Society) ಮತ್ತು ಪುತ್ತೂರಿನಲ್ಲಿ ೧೯೧೯ರಲ್ಲಿ ಆರಂಭವಾದ "ದಕ್ಷಿಣ ಕನ್ನಡ ಭಂಡಸಾಲೆ ಸಹಕರಿ ಸಂಘ"ಗಳ ಸ್ಥಾಪನೆಯಲ್ಲಿ ಶಿವರಾಯರು ಪ್ರಮುಖ ಪಾತ್ರ ವಹಿಸಿದ್ದರು. ೧೯೧೭ರಲ್ಲಿ 'ಸದಾನಂದ ಸಹಕರಿ ಛಾಪಖಾನೆ ಸಹಕಾರಿ ಸಂಘ"ವನ್ನು ಸ್ಥಾಪಿಸಿದ ಶಿವರಾಯರು,[೭] ೧೯೧೯ರಲ್ಲಿ "ಸಹಕಾರಿ" ಎಂಬ ಪತ್ರಿಕೆಯನ್ನು ಆರಂಭಿಸಿ ಅದರ ಸಂಪಾದಕತ್ವವನ್ನು ನಿರ್ವಹಿಸಿದರು[೮]. ೧೯೨೩ರಲ್ಲಿ ಶಿವರಾಯರು ಪುತ್ತೂರಿನಲ್ಲಿ "ದ್ರಾವಿಡ ಬ್ರಾಹ್ಮಣ ಹಾಸ್ಟೇಲ್ ಸಹಕಾರಿ ಸಂಘ"ವನ್ನು ಸ್ಥಾಪಿಸಿದರು. ೧೯೨೯ರಲ್ಲಿ ಸಹಕಾರಿ ಸಂಘಗಳ ಸಿಬ್ಬಂದಿಗಳಿಗೆ ಸರಿಯಾದ ತರಬೇತಿ ನೀಡಬೇಕಾಗಿರುವ ಅವಶ್ಯಕತೆಯನ್ನು ಮನಗಂಡು ಕೆಲವರನ್ನು ಕೊಯಮತ್ತೂರಿನ ಸಹಕಾರಿ ತರಬೇತಿ ಸಂಸ್ಥೆಗಳಿಗೆ ತರಬೇತಿಗಾಗಿ ಕಳುಹಿಸಿದರು.

೧೯೩೪ರಲ್ಲಿ ಕಾಸರಗೋಡಿನ ಹೊಸದುರ್ಗದ ಕೋಟೆಚ್ಚೇರಿಯಲ್ಲಿ ಸ್ಥಾಪಿಸಲ್ಪಟ್ಟ "ಕೋಟೆಚ್ಚೇರಿ ಸಹಕಾರಿ ಸಾಲ ಮತ್ತು ಮಾರಾಟ ಸಹಕಾರಿ ಸಂಘ" ಮತ್ತು ೧೯೩೬ರಲ್ಲಿ ಪುತ್ತೂರಿನಲ್ಲಿ ಅಡಿಕೆ ಕೊಳೆರೋಗ ನಿವಾರಣೆಗೆ ಸಹಾಯ ಮಡುವ ಉದ್ದೇಶದಿಂದ ಸ್ಥಾಪಿಸಲ್ಪಟ್ಟ "ಪುತ್ತೂರು ಮಹಾಳಿ ರೋಗ ನಿವಾರಣಾ ಸಹಕಾರಿ ಸಂಘ", ೧೯೩೮ರಲ್ಲಿ ಮಹಿಳೆಯರಿಗಾಗಿ ಪುತ್ತೂರಿನಲ್ಲಿ ಸ್ಥಾಪಿಸಲ್ಪಟ್ಟ "ಮಹಿಳಾ ಗುಡಿ ಕೈಗಾರಿಕಾ ಸಹಕಾರಿ ಸಂಘ" ಮತ್ತು ೧೯೩೮ರಲ್ಲಿ ಚೊಕ್ಕಾಡಿಯಲ್ಲಿ ಆರಂಭವಾದ "ಸಹಕಾರಿ ಜೇನು ವ್ಯವಸಾಯ ಜೇನು ಸಂಗ್ರಹ ಮತ್ತು ಮಾರಾಟ ಸಂಘ" ಮುಂತಾದ ಸಹಕಾರ ಸಂಘಗಳು ಶಿವರಾಯರ ಮಾರ್ಗದರ್ಶನದಲ್ಲಿ ಸ್ಥಾಪಿಸಲ್ಪಟ್ಟ ಸಂಘಗಳು. ೧೯೩೮ರಲ್ಲಿ ಅವರು ಪುತ್ತೂರು ವಿಭಾಗದ "ಸಹಕಾರಿ ಭೂ ಅಡಮಾನ ಬ್ಯಾಂಕ್"ನ್ನು ಸ್ಥಾಪಿಸಿ ಅದರ ಪ್ರಥಮ ಅಧ್ಯಕ್ಷರಾದರು[೯]. ಶಿವರಾಯರು ಶಾಲೆಗಳಲ್ಲೂ ಸಹಕಾರಿ ತತ್ವದ ಪ್ರಚಾರಕ್ಕೆ ಪ್ರಯತ್ನಿಸಿದರು. ಅವರ ಪ್ರಯತ್ನದಿಂದಾಗಿ ಜಿಲ್ಲೆಯ ಹಲವಾರು ಶಾಲೆ, ಕಾಲೇಜುಗಳಲ್ಲಿ ವಿದ್ಯಾರ್ಥಿ ಸ್ಟೇಷನರಿ ಸಹಕಾರಿ ಸಂಘಗಳು ಮತ್ತು ಅಧ್ಯಾಪಕ ಸಹಕಾರಿ ಸಂಘಗಳು ಆರಂಭಗೊಂಡವು.

ಒಂದನೆಯ ಹಾಗೂ ಎರಡನೆಯ ಮಹಾಯುದ್ಧದ ಸಂದರ್ಭದಲ್ಲಿ ಆಹಾರ ಧಾನ್ಯಗಳ ಕೊರತೆ ನೀಗಿಸಲು ಕೂಡಾ ಅವರು ಪ್ರಯತ್ನಿಸಿದರು. ಒಂದನೆಯ ಮಹಾಯುದ್ಧದ ಸಂದರ್ಭದಲ್ಲಿ

ಶಿವರಾಯರು ರಂಗೂನ್‌ನಿಂದ ಅಕ್ಕಿಯನ್ನು ತರಿಸಿ ಸಹಕಾರಿ ಸಂಘಗಳ ಮೂಲಕ ಬಡವರಿಗೆ ವಿತರಣೆ ಮಾಡುವ ವ್ಯವಸ್ಥೆ ಮಾಡಿದರು[೧೦]. ಎರಡನೆಯ ಮಹಾಯುದ್ಧದ ಕಾಲದಲ್ಲಿ ಜಿಲ್ಲೆಯಲ್ಲಿ ಸರಕಾರದ ನಿಯಮದಂತೆ ರೈತರಿಂದ ಕಡ್ಡಾಯವಾಗಿ ಪಡೆದುಕೊಳ್ಳಬೇಕಾದ ಅಕ್ಕಿ, ಭತ್ತ ಖರೀದಿ ಮತ್ತು ಗ್ರಾಹಕರಿಗೆ ರೇಶನ್ ವಿತರಿಸುವ ಕಾರ್ಯಗಳ ಜವಾಬ್ದಾರಿಯನ್ನು ಮೊಳಹಳ್ಳಿ ಶಿವರಾಯರು ವಹಿಸಿಕೊಂಡಿದ್ದರು[೧೧].

ಸ್ವಾತಂತ್ರ್ಯ ನಂತರವು ಸಹಕಾರಿ ಚಳುವಳಿಯಲ್ಲಿ ಕ್ರಿಯಾತ್ಮಕವಾಗಿ ತಮ್ಮನ್ನು ತೊಡಗಿಸಿಕೊಂಡ ಶಿವರಾಯರು ೧೯೫೩ರಲ್ಲಿ ತಮ್ಮ ಮಗನ ಜೊತೆ ನೆಲೆಸಲು ಮದ್ರಾಸಿಗೆ ಹೋಗುವ ತನಕ ಸಹಕಾರಿ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದರು. (೧೯೩೧ ರಿಂದ ೧೯೫೩ ರವರೆಗೆ ಅವರು ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕಿನ ಅಧ್ಯಕ್ಷರಾಗಿದ್ದರು.) ಅವರು ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಸಹಕಾರಿ ಕ್ಷೇತ್ರಕ್ಕೆ ನೀಡಿರುವ ಕೊಡುಗೆಗಳು ಅವರನ್ನು ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ "ಸಹಕಾರಿ ಚಳುವಳಿಯ ಪಿತಾಮಹಾ" ಎಂದು ಕರೆಯಲಾಗುತ್ತದೆ.[೧೨]

## ಬೈಂದೂರು ರಾಮರಾಯರು

ಮೊಳಹಳ್ಳಿ ಶಿವರಾಯರ ನಿಕಟವರ್ತಿಯಾಗಿದ್ದುಕೊಂಡು ಜಿಲ್ಲೆಯಲ್ಲಿ ಸಹಕಾರ ಚಳುವಳಿಯನ್ನು ಪಸರಿಸಲು ಪ್ರಯತ್ನಿಸಿದ ಇನ್ನೋರ್ವ ಪ್ರಮುಖ ಸಹಕಾರಿ ನೇತಾರರು ಬೈಂದೂರು ರಾಮರಾಯರು. ೧೮೬೭ರಲ್ಲಿ ಜನಿಸಿದ ಇವರು ಎಫ್.ಎ ವರೆಗೆ ಕಲಿತು ಸ್ವಲ್ಪ ಸಮಯ ಸರಕಾರಿ ನೌಕರನಾಗಿ ದುಡಿದು ಮುಂದೆ ಪುತ್ತೂರಿನಲ್ಲಿ ವಕೀಲ ವೃತ್ತಿಯನ್ನು ಕೈಗೆತ್ತಿಕೊಂಡರು. ಮೊಳಹಳ್ಳಿ ಶಿವರಾಯರ ಜೊತೆ ಸೇರಿ "ಪುತ್ತೂರು ರೂರಲ್ ಕ್ರೆಡಿಟ್ ಸೊಸ್ಯಾಟಿ"ಯ ಸ್ಥಾಪನೆಯಲ್ಲಿ ಅವರು ಕೂಡಾ ಪ್ರಮುಖ ಪಾತ್ರ ವಹಿಸಿದ್ದರು ಮತ್ತು ೧೯೦೯ ರಿಂದ ೧೯೧೩ ರವರೆಗೆ ಅವರು ಪುತ್ತೂರು ರೂರಲ್ ಕ್ರೆಡಿಟ್ ಸೊಸ್ಯಾಟಿಯ ಅಧ್ಯಕ್ಷರಾಗಿದ್ದರು[೧೩].

ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್‌ನ ಸ್ಥಾಪನೆಯಲ್ಲೂ ಶಿವರಾಯರ ಜೊತೆ ಸಹಕರಿಸಿದ ಬೈಂದೂರು ರಾಮರಾಯರು ೧೯೧೪ ರಿಂದ ೧೯೨೭ ರವರೆಗೆ ಈ ಸಹಕಾರಿ ಬ್ಯಾಂಕಿನ ಅಧ್ಯಕ್ಷ ಹಾಗೂ ನಿರ್ದೇಶಕರಾಗಿ ಸೇವೆ ಸಲ್ಲಿಸಿದ್ದಾರೆ. ಜಿಲ್ಲೆಯ ಸಹಕಾರ ಚಳುವಳಿಯನ್ನು ಪೋಷಿಸಿ ಬೆಳೆಸಿದವರ ಸಾಲಿನಲ್ಲಿ ಬೈಂದೂರು ರಾಮರಾಯರು ಒಬ್ಬರು.

**ಬೈಂದೂರು ಪ್ರಭಾಕರರಾಯರು (೧೮೯೮ – ೧೯೭೩)**

ಬೈಂದೂರು ರಾಮರಾಯರ ಪುತ್ರರಾಗಿದ್ದ ಬೈಂದೂರು ಪ್ರಭಾಕರರಾಯರು ತಂದೆಯಂತೆಯೇ ಸಹಕಾರ ಚಳುವಳಿಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಇವರು ಪುತ್ತೂರು ರೂರಲ್ ಕ್ರೆಡಿಟ್ ಸೊಸ್ಯಾಟಿಯ, (೧೯೫೪–೬೨) ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕು (೧೯೬೦–೬೪), ದಕ್ಷಿಣ ಕನ್ನಡ ಕೃಷಿಕರ ಮಾರಾಟ ಸಂಘ, ಭೂ ಅಡಮಾನ ಬ್ಯಾಂಕು ಪುತ್ತೂರು, ಪುತ್ತೂರು ತಾಲೂಕು ಕೃಷಿ ಉತ್ಪನ್ನ ಮಾರಾಟ ಸಹಕಾರಿ ಸಂಘ ಇವುಗಳ ಅಧ್ಯಕ್ಷರಾಗಿ ಮತ್ತು ದಕ್ಷಿಣ ಕನ್ನಡ ಜಿಲ್ಲಾ ಹೋಲ್‌ಸೇಲ್ ಸ್ಟೋರ್ಸ್, ಕರ್ನಾಟಕ ಸಹಕಾರಿ ಯೂನಿಯನ್, ಕರ್ನಾಟಕ ರಾಜ್ಯ ಅಪೆಕ್ಸ್ ಬ್ಯಾಂಕಿನ ನಿರ್ದೇಶಕರಾಗಿ ಸಹಕಾರಿ ಚಳುವಳಿಯ ಬೆಳವಣಿಗೆಗೆ ಶ್ರಮಿಸಿದ್ದಾರೆ. ಪುತ್ತೂರು ವಿದ್ಯಾವರ್ಧಕ ಸಂಘ ಇದರ ಅಧ್ಯಕ್ಷರಾಗಿ ಪುತ್ತೂರಿನ ವಿವೇಕಾನಂದ ಕಾಲೇಜಿನ ಸ್ಥಾಪನೆಯಲ್ಲೂ ಅವರು ಪ್ರಮುಖ ಪಾತ್ರ ವಹಿಸಿದ್ದರು[೧೪].

**ಮಂಜೇಶ್ವರ ಅನಂತರಾಯರು (೧೮೮೯ – ೧೯೪೯)**

೧೮೮೯ರಲ್ಲಿ ಪುತ್ತೂರಿನಲ್ಲಿ ಜನಿಸಿದ ಮಂಜೇಶ್ವರ ಅನಂತರಾಯರು ಮದ್ರಾಸು ವಿಶ್ವವಿದ್ಯಾನಿಲಯದಿಂದ ಬಿ.ಎ.ಬಿಎಲ್ ಪದವಿ ಪಡೆದು ವಕೀಲರಾಗಿ ತಮ್ಮ ವೃತ್ತಿ ಜೀವನ ಆರಂಭಿಸಿದರು. ಸಹಕಾರ ತತ್ವದಿಂದ ಆಕರ್ಷಿತರಾಗಿದ್ದ ಅವರು ಮೊಳಹಳ್ಳಿ ಶಿವರಾಯರ ಜೊತೆ "ಪುತ್ತೂರು ರೂರಲ್ ಕ್ರೆಡಿಟ್ ಸೊಸ್ಯಾಟಿ"ಯ ಸ್ಥಾಪನೆಯಲ್ಲೂ ಭಾಗಿಯಾಗಿದ್ದರು. ಅವರು ಈ ಸಹಕಾರಿ ಸಂಘದ ಸಕ್ರಿಯ ಸದಸ್ಯರಾಗಿದ್ದರು. ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಆರಂಭವಾಗಿ (೧೯೧೪) ಅದು ಮಂಗಳೂರಿಗೆ ಸ್ಥಳಾಂತರವಾಗುವವರೆಗೆ ಅವರು ಈ ಸಹಕಾರಿ ಸಂಘದ ಗೌರವ ಕಾರ್ಯದರ್ಶಿಯಾಗಿ ಕೆಲಸ ಮಾಡಿದರು[೧೫].

**ರಾವ್ ಸಾಹೇಬ್ ಎ.ಎಂ. ಮೊಂತೆರೋ**

ಸಹಕಾರ ಚಳುವಳಿಯಲ್ಲಿ ಪ್ರಮುಖ ಪಾತ್ರ ವಹಿಸಿದ ಇನ್ನೋರ್ವ ಮಹನೀಯರೆಂದರೆ ಮಂಗಳೂರಿನ ರಾವ್ ಸಾಹೇಬ್ ಎ.ಎಂ. ಮೊಂತೆರೋರವರು. ಮಂಗಳೂರು ಸೈಂಟ್ ಎಲೋಷಿಯಸ್ ಕಾಲೇಜಿನಲ್ಲಿ ಬಿ.ಎ. ಡಿಗ್ರಿ ಪಡೆದು ಅನಂತರ ಮದರಾಸಿನ ಎಲ್.ಟಿ. ಡಿಗ್ರಿ ಪಡೆದು ಅಧ್ಯಾಪಕರಾಗಿ ತಮ್ಮ ವೃತ್ತಿ ಜೀವನ ಆರಂಭಿಸಿದ ಮೊಂತೆರೋರವರು ಕೂಡಾ ಶಿವರಾಯರ ಪ್ರೇರಣೆಯಿಂದ ಸಹಕಾರ ಚಳುವಳಿಯಲ್ಲಿ ಭಾಗಿಗಳಾದರು. ೧೯೫೩ ರಿಂದ ೧೯೫೬ ರವರೆಗೆ ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕಿನ ಅಧ್ಯಕ್ಷರಾಗಿದ್ದ ಅವರು ಮಂಗಳೂರು ಕೆನರಾ ಕೆಥೊಲಿಕ್

ಸಹಕಾರಿ ಬ್ಯಾಂಕ್ ಮತ್ತು ಕೆನರಾ ಕೆಥೊಲಿಕ್ ಎಜುಕೇಶನ್ ಸಹಕಾರಿ ಸಂಸ್ಥೆಗಳ ಚಟುವಟಿಕೆಗಳಲ್ಲಿ ಸಕ್ರಿಯರಾಗಿ ಭಾಗವಹಿಸುತ್ತಿದ್ದರು.

ಸರಕಾರದಿಂದ "ಕೈಸರ್-ಇ-ಹಿಂದ್' ಮತ್ತು 'ರಾವ್ ಸಾಹೇಬ್' ಬಿರುದುಗಳನ್ನು ಪಡೆದಿದ್ದ ಅವರಿಗೆ ಪೋಪರು "ಪ್ರೊ ಎಕ್ಲೆಸಿಯಾ ಮೊಂತಿಫಿಚೆ" ಎಂಬ ಬಿರುದು ನೀಡಿದ್ದರು[೧೬].

## ಪೇರಾಜೆ ಶ್ರೀನಿವಾಸ ರಾವ್

"ಸಹಕಾರಿ ರಂಗದ ಭೀಷ್ಮ" "ಶ್ರೇಷ್ಠ ಸಹಕಾರಿ" ಮುಂತಾದ ಪ್ರಶಸ್ತಿ ಪಡೆದಿರುವ ಪೇರಾಜೆ ಶ್ರೀನಿವಾಸರಾಯರು ಜನಿಸಿದ್ದು ೦೯.೦೧.೧೯೦೬ರಲ್ಲಿ. ಮೊಳಹಳ್ಳಿ ಶಿವರಾಯರ ಪ್ರೇರಣೆಯಿಂದ ಸಹಕಾರಿ ರಂಗವನ್ನು ಪ್ರವೇಶಿಸಿದ ಅವರು ಇಂದೂ ಕೂಡಾ ಸಹಕಾರಿ ಚಟುವಟಿಕೆಗಳಲ್ಲಿ ಸಕ್ರಿಯರಾಗಿ ಭಾಗವಹಿಸುತ್ತಿದ್ದಾರೆ[೧೭]. ನೇರಳಕಟ್ಟೆ ಸಿ.ಎ. ಬ್ಯಾಂಕಿನ ನಿರ್ದೇಶಕರಾಗಿ ಸುಮಾರು ೩೦ ವರ್ಷ ವರ್ಷಗಳಷ್ಟು ಕಾಲ ಸೇವೆ ಸಲ್ಲಿಸಿದ ಇವರು ತಮ್ಮ ನಿರ್ದೇಶಕತ್ವದ ಅವಧಿಯಲ್ಲಿ ಸದ್ರಿ ಸಂಸ್ಥೆಯಲ್ಲಿ ೧೨ ವರ್ಷಗಳ ಕಾಲ ಗೌರವ ಕಾರ್ಯದರ್ಶಿಯಾಗಿ ಹಾಗೂ ೧೫ ವರ್ಷ ಅಧ್ಯಕ್ಷರಾಗಿ ಸೇವೆ ಸಲ್ಲಿಸಿರುತ್ತಾರೆ. ಇದಲ್ಲದೆ ಇವರು ಬಂಟ್ವಾಳ ವ್ಯವಸಾಯ ಉತ್ಪನ್ನ ಮಾರಾಟ ಸಹಕಾರ ಸಂಘ, ಸ್ಕ್ಯಾಡ್ಸ್ ಮಂಗಳೂರು, ದಕ್ಷಿಣ ಕನ್ನಡ ಜಿಲ್ಲಾ ಕೋಳಿ ಸಾಕಣೆದಾರರ ಸಹಕಾರ ಸಂಘ, ದಕ್ಷಿಣ ಕನ್ನಡ ಜಿಲ್ಲಾ ಸಹಕಾರಿ ಯೂನಿಯನ್, ದಕ್ಷಿಣ ಕನ್ನಡ ಜೇನು ವ್ಯವಸಾಯಗಾರರ ಸಹಕಾರಿ ಸಂಘ, ದಕ್ಷಿಣ ಕನ್ನಡ ಹೋಮಿಯೋಪತಿ ಹೆಲ್ತ್ ಕೋ ಓಪರೇಟಿವ್ ಸೊಸ್ಯಾಟಿ ಲಿಮಿಟೆಡ್, ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಹಾಗೂ ಕರ್ನಾಟಕ ರಾಜ್ಯ ಮಹಾಮಂಡಲ ಮುಂತಾದ ಸಂಸ್ಥೆಗಳ ಅಧ್ಯಕ್ಷರಾಗಿ ಸೇವೆ ಸಲ್ಲಿಸುವವರು. ಇವರು ದಕ್ಷಿಣ ಕನ್ನಡ ಸಹಕಾರಿ ಮಾಸ ಪತ್ರಿಕೆಯ ಗೌರವ ಸಂಪಾದಕರಾಗಿಯೂ ದುಡಿದಿದ್ದಾರೆ[೧೮]. "ಪ್ರಜಾಪ್ರಭುತ್ವಕ್ಕೆ ಸಹಕಾರ ಅತೀ ಅಗತ್ಯವಾಗಿ ಬೇಕಾದ ತತ್ವ" ಎನ್ನುವುದು ಅವರ ನಿಲುವು[೧೯].

## ಒ.ವಿ. ಕಾರಂತ

ಒಡೇರ ಹೋಬಳಿ ವೆಂಕಟರಮಣ ಕಾರಂತ ಅವರು ಜನಿಸಿದ್ದು ೦೪.೦೫.೧೯೨೦ರಲ್ಲಿ. ೧೯೪೯ರಲ್ಲಿ ಸಹಕಾರಿ ರಂಗಕ್ಕೆ ಪಾದಾರ್ಪಣೆ ಮಾಡಿದ ಇವರು ೧೯೪೯ ರಿಂದ ೧೯೭೩ ರವರೆಗೆ ಒಡೇರ ಹೋಬಳಿ ಸಹಕಾರಿ ಸಂಘದ ಅಧ್ಯಕ್ಷರಾಗಿದ್ದರು. ೧೯೭೬ ರಿಂದ ೧೯೮೩ ರವರೆಗೆ ಕುಂದಾಪುರ ವ್ಯವಸಾಯ ಸೇವಾ ಸಹಕಾರಿ ಸಂಘದ ಆಡಳಿತ ಮಂಡಳಿಯ ಸದಸ್ಯರಾಗಿ ದಕ್ಷಿಣ

ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕಿನ ಕುಂದಾಪುರ ಶಾಖಾ ಸಲಹಾ ಸಮಿತಿಯ ಸದಸ್ಯರಾಗಿ, ಕುಂದಾಪುರ ತಾಲೂಕು ಕೃಷಿ ಉತ್ಪನ್ನ ಮಾರಾಟ ಸಹಕಾರಿ ಸಂಘ, ಕುಂದಾಪುರ ಭೂ ಅಭಿವೃದ್ಧಿ ಸಹಕಾರಿ ಬ್ಯಾಂಕಿನ ನಿರ್ದೇಶಕರಾಗಿ, ಕುಂದಾಪುರ ಸ್ಥಳೀಯ ಸಹಕಾರಿ ಯೂನಿಯನ್‌ನ ನಿರ್ದೇಶಕರು ಹಾಗೂ ಅಧ್ಯಕ್ಷರಾಗಿ, ಕುಂದಾಪುರ ಹೆಲ್ತ್ ಸಹಕಾರಿ ಸಂಘದ ಕಾರ್ಯದರ್ಶಿ ಹಾಗೂ ಅಧ್ಯಕ್ಷರಾಗಿ ಸಹಕಾರಿ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿದ್ದಾರೆ[೨೦].

**ಪೈಲೂರು ಲಕ್ಷ್ಮೀ ನಾರಾಯಣರಾವ್**

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಇನ್ನೋರ್ವ ಪ್ರಮುಖ ಸಹಕಾರಿ ಪೈಲೂರು ಲಕ್ಷ್ಮೀ ನಾರಾಯಣರಾಯರು. ಅವರು ಜಿಲ್ಲೆಯಲ್ಲಿ ಆಧುನಿಕ ರೀತಿಯ ಜೇನು ಕೃಷಿಯ ಆರಂಭ ಮತ್ತು ಜೇನು ಕೃಷಿಯ ಮುನ್ನಡೆಗೆ ಸಹಕಾರಿ ಸಂಸ್ಥೆಯ ಸ್ಥಾಪನೆಯಲ್ಲಿ ಪ್ರಮುಖ ಪಾತ್ರ ವಹಿಸಿದರು[೨೧]. ಕೊಡಗಿನಲ್ಲಿ ಜೇನು ಕೃಷಿ ಅಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದ ಪೈಲೂರು ಲಕ್ಷ್ಮೀನಾರಾಯಣರಾಯರು ಕೊಡಗಿನ ವಿರಾಜಪೇಟೆಯಲ್ಲಿ ಸ್ಥಾಪಿತವಾದ ಜೇನು ಕೃಷಿಕರ ಸಹಕಾರಿ ಸಂಘದಿಂದ ಪ್ರೇರಿತರಾಗಿ ತಮ್ಮ ಊರಿನಲ್ಲೂ ಜೇನು ಕೃಷಿ ಅಭಿವೃದ್ಧಿಗಾಗಿ ಸಹಕಾರಿ ಸಂಸ್ಥೆಯೊಂದನ್ನು ಸ್ಥಾಪಿಸುವ ಪ್ರಸ್ತಾಪವನ್ನು ಊರವರ ಮುಂದೆ ಇರಿಸಿದರು. ಆ ನಂತರ ಸಹಕಾರಿ ಕ್ಷೇತ್ರದ ಮುಂದಾಳು ಮೊಳಹಳ್ಳಿ ಶಿವರಾಯರ ಮಾರ್ಗದರ್ಶನ ಪಡೆದು ಕಂಜರ್ಪಣೆ ಗೋಪಾಲಕೃಷ್ಣಯ್ಯ, ಪೈಲೂರು ನಾರಾಯಣ ರಾವ್, ಪೈಲೂರು ಶಿವರಾಮಯ್ಯ, ಪೈಲೂರು ಕೃಷ್ಣಯ್ಯ ಮೊದಲಾದವರ ಸಹಕಾರ ಪಡೆದು ೨೧.೦೫.೧೯೩೮ ರಂದು ಚೊಕ್ಕಾಡಿಯಲ್ಲಿ "ಪುತ್ತೂರು ತಾಲೂಕು ಸಹಕಾರಿ ಜೇನು ವ್ಯವಸಾಯ ಜೇನು ಸಂಗ್ರಹ ಮಾರಾಟ ಸಂಘ"ವನ್ನು ಸ್ಥಾಪಿಸಿದರು[೨೨]. ಜೇನು ವ್ಯವಸಾಯ ಸಹಕಾರ ಸಂಘದ ವತಿಯಿಂದ ಲಕ್ಷ್ಮೀನಾರಾಯಣರಾಯರು ಜಿಲ್ಲೆಯ ವಿವಿಧೆಡೆ ಜೇನು ಕೃಷಿ ತರಬೇತಿಗಳನ್ನು ನಡೆಸಿದರು. ೧೯೪೪ರಲ್ಲಿ "ಜೇನು ವ್ಯವಸಾಯ" ಎಂಬ ಕೃತಿಯನ್ನು ಪ್ರಕಟಿಸಿದರು[೨೩]. ದಿಲ್ಲಿಯಲ್ಲಿ ಜರುಗಿದ ಅಖಿಲ ಭಾರತ ಜೇನು ಕೃಷಿಕರ ಪರಿಷತ್ತಿನಲ್ಲಿ ಜೇನು ವ್ಯವಸಾಯ ಸಹಕಾರಿ ಸಂಘದ ಪ್ರತಿನಿಧಿಯಾಗಿ ಪೈಲೂರುರವರು ಭಾಗವಹಿಸಿದರು.

೧೯೪೬ ರಿಂದ ೧೯೫೪ ರವರೆಗೆ ಪೈಲೂರು ಲಕ್ಷ್ಮೀನಾರಾಯಣ ರಾವ್‌ರವರು ಜೇನು ಸಹಕಾರಿ ಸಂಘದ ಗೌರವ ಕಾರ್ಯದರ್ಶಿಯಾಗಿಯೂ, ೧೯೫೪ ರಿಂದ ೧೯೬೦ ರವರೆಗೆ ಸಂಘದ ಅಧ್ಯಕ್ಷರಾಗಿಯೂ ಕಾರ್ಯ ನಿರ್ವಹಿಸಿದರು. ೧೯೫೭ರಲ್ಲಿ ಜೇನು ವ್ಯವಸಾಯ ಸಂಘದ ವತಿಯಿಂದ ಆರಂಭವಾದ "ಮಧುವನ" ಮಾಸಪತ್ರಿಕೆಯ ಸಂಪಾದಕರಾಗಿದ್ದ ಅವರು, ಈ ಪತ್ರಿಕೆಯ ಮೂಲಕವೂ ಜೇನು ವ್ಯವಸಾಯದ ಕುರಿತು ಜನರಲ್ಲಿ ಅರಿವು ಮೂಡಿಸಲು ಪ್ರಯತ್ನಿಸಿದರು. ಜೇನು

ಸಂಘದ ಅಧ್ಯಕ್ಷ ಸ್ಥಾನದಿಂದ ನಿವೃತ್ತರಾದ ಬಳಿಕವೂ ಜೇನು ಕೃಷಿ ಹಾಗೂ ಸಂಘದ ಮುನ್ನಡೆಗೆ ಬೇಕಾದ ಸಲಹೆ ಸೂಚನೆಗಳನ್ನು ನೀಡುತ್ತಿದ್ದರು[೨೪].

**ಡಿ. ಸುಬ್ಬಣ್ಣ ಗೌಡ**

೨೫.೧೦.೧೯೧೬ರಲ್ಲಿ ಜನಿಸಿದ ಡಿ. ಸುಬ್ಬಣ್ಣ ಗೌಡರು ಸುಳ್ಯ ತಾಲೂಕಿನ ಪ್ರಮುಖ ಸಹಕಾರಿ ನೇತಾರರು. ೧೯೪೦ರಲ್ಲಿ ಸಹಕಾರಿ ಕ್ಷೇತ್ರಕ್ಕೆ ಪಾದಾರ್ಪಣೆ ಮಾಡಿದ ಸುಬ್ಬಣ್ಣ ಗೌಡರು ೧೩ ವರ್ಷಗಳ ಕಾಲ ಸುಳ್ಯ ಸಿ.ಎ. ಬ್ಯಾಂಕಿನ ಅಧ್ಯಕ್ಷರಾಗಿದ್ದರು. ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್, ದಕ್ಷಿಣ ಕನ್ನಡ ಜಿಲ್ಲಾ ಸಹಕಾರಿ ಯೂನಿಯನ್, ದಕ್ಷಿಣ ಕನ್ನಡ ಜಿಲ್ಲಾ ಹಾಲು ಉತ್ಪಾದಕರ ಒಕ್ಕೂಟ ಹಾಗೂ ಸುಳ್ಯ ತಾಲೂಕು ಕೃಷಿ ಉತ್ಪನ್ನ ಮಾರಾಟ ಸಹಕಾರಿ ಸಂಘಗಳ ನಿರ್ದೇಶಕರಾಗಿ ಸಹಕಾರಿ ರಂಗದ ಚಟುವಟಿಕೆಗಳಲ್ಲಿ ಸಕ್ರಿಯರಾಗಿ ಭಾಗವಹಿಸಿದ್ದರು[೨೫].

**ವೆಂಕಪ್ಪಯ್ಯ ಉರಿಮಜಲು**

೧೯೦೦ರಲ್ಲಿ ಜನಿಸಿದ ಉರಿಮಜಲು ವೆಂಕಪ್ಪಯ್ಯನವರು ಒಬ್ಬ ಪ್ರಮುಖ ಸಹಕಾರಿ ನೇತಾರರು ಮತ್ತು ಸ್ವಾತಂತ್ರ್ಯ ಹೋರಾಟಗಾರರೂ ಆಗಿದ್ದರು. ೧೯೫೫ರಲ್ಲಿ ವಿಟ್ಲದಲ್ಲಿ ರೂರಲ್ ಕೋ ಓಪರೇಟಿವ್ ಬ್ಯಾಂಕ್‌ನ್ನು ಸ್ಥಾಪಿಸಿದ ಇವರು ೨೧ ವರ್ಷಗಳ ಕಾಲ ಬ್ಯಾಂಕ್‌ನ ಅಧ್ಯಕ್ಷರಾಗಿದ್ದರು. ೧೯೫೬ರಲ್ಲಿ ವಿಟ್ಲ ಸಹಕಾರಿ ಹಾಲು ಸರಬರಾಜು ಸಂಘವನ್ನು ಸ್ಥಾಪಿಸುವಲ್ಲಿ ಕೂಡಾ ಅವರು ಪ್ರಮುಖ ಪಾತ್ರ ವಹಿಸಿದ್ದರು. ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್‌ನ ಸದಸ್ಯರೂ ಕೂಡಾ ಆಗಿದ್ದರು[೨೬].

**ವೇಣುಗೋಪಾಲ ನಾಯಕ್**

೦೫.೧೧.೧೯೨೦ರಲ್ಲಿ ಜನಿಸಿರುವ ವೇಣುಗೋಪಾಲ ನಾಯಕರು ಕುಂದಾಪುರ ತಾಲೂಕಿನ ಸಹಕಾರಿ ಸ್ವಾತಂತ್ರ್ಯ ಹೋರಾಟಗಾರರು. ಮಹಾತ್ಮಗಾಂಧಿಯವರ ಸತ್ಯಾಗ್ರಹ ಚಳುವಳಿಯಲ್ಲಿ ಭಾಗವಹಿಸಿ ಹಲವು ಬಾರಿ ಸೆರೆವಾಸ ಅನುಭವಿಸಿರುವ ಇವರು ಗಂಗೊಳ್ಳಿ ಗ್ರಾಹಕರ ಸಹಕಾರಿ ಸಂಘ ಹಾಗೂ ಗಂಗೊಳ್ಳಿ ಎಸ್.ಸಿ. ಬ್ಯಾಂಕಿನ ನಿರ್ದೇಶಕರಾಗಿಯೂ ದುಡಿದಿದ್ದಾರೆ[೨೭].

**ಎಸ್. ನಾರಾಯಣ ರೈ**

ಸುಳ್ಯ ತಾಲೂಕಿನ ಸಹಕಾರಿಗಳಾದ ಎಸ್. ನಾರಾಯಣ ರೈಯವರು ೧೯೩೭ರಲ್ಲಿ ಶಿಕ್ಷಕ ವೃತ್ತಿಯನ್ನು ತೊರೆದು ಸಹಕಾರಿ ನೌಕರ ವೃತ್ತಿಯನ್ನು ಆರಂಭಿಸಿದರು. ೧೯೪೩ ರಿಂದ ೧೯೪೬ ರವರೆಗೆ ಸೈನ್ಯದಲ್ಲಿ ಸೇವೆ ಸಲ್ಲಿಸಿದ ಇವರು ೧೯೪೬ರಲ್ಲಿ ಸುಳ್ಯದಲ್ಲಿ ಸಹಕಾರ ಚಳುವಳಿಯ ಕಾರ್ಯಕರ್ತರಾಗಿ ಮೊಳಹಳ್ಳಿ ಶಿವರಾಯರ ಮಾರ್ಗದರ್ಶನದಲ್ಲಿ ತಮ್ಮ ಸ್ನೇಹಿತರೊಂದಿಗೆ ಸುಳ್ಯ ತಾಲೂಕಿನಾದ್ಯಂತ ಸಹಕಾರ ಚಳುವಳಿಯನ್ನು ಯಶಸ್ವಿಯಾಗಿ ಪಸರಿಸಿದರು. ಸುಳ್ಯ ಸಹಕಾರಿ ಯೂನಿಯನ್‌ನಲ್ಲಿ ಇವರು ೧೧ ವರ್ಷ ಗೌರವ ಕಾರ್ಯದರ್ಶಿಗಳಾಗಿ ಸೇವೆ ಸಲ್ಲಿಸಿದ್ದಾರೆ[೨೮].

**ಪಿ. ಭೋಜರಾಜ ಹೆಗ್ಡೆ**

೧೩.೦೩.೧೯೨೩ ರಲ್ಲಿ ಜನಿಸಿದ ಪಿ. ಭೋಜರಾಜ ಹೆಗ್ಡೆಯವರು ಬೆಳ್ತಂಗಡಿಯ ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರು. ಮೊಳಹಳ್ಳಿ ಶಿವರಾಯರ ಪ್ರೇರಣೆಯಿಂದ ೧೯೪೪ರ ನಂತರ ಸಹಕಾರ ಚಳುವಳಿಯನ್ನು ತಮ್ಮನ್ನು ತಾವೇ ತೊಡಗಿಸಿಕೊಂಡ ಭೋಜರಾಜ ಹೆಗ್ಡೆಯವರು ರಬ್ಬರ್ ಬೆಳೆಗಾರರ ಸಹಕಾರಿ ಸಂಘದ ನಿರ್ದೇಶಕರಾಗಿದ್ದರು[೨೯].

**ಗೋವಿಂದ ನಾಯಕ್**

ಸ್ವಾತಂತ್ರ್ಯ ಹೋರಟಗಾರರಾಗಿದ್ದ ಗೋವಿಂದ ನಾಯಕ್‌ರವರು ಉಡುಪಿಯ ಓರ್ವ ಪ್ರಮುಖ ಸಹಕಾರಿ ನೇತಾರರು. ಉಡುಪಿ ಸಹಕಾರಿ ಸಂಘದ ನಿರ್ದೇಶಕರಾಗಿ ಮತ್ತು ಅಧ್ಯಕ್ಷರಾಗಿ, ಕೊರಂಗ್ರಪಾಡಿ ಸೇವಾ ಸಹಕಾರಿ ಸಂಘದ ನಿರ್ದೇಶಕರಾಗಿ ಇವರು ಸಹಕಾರಿ ಕ್ಷೇತ್ರಕ್ಕೆ ತಮ್ಮ ಸೇವೆ ಸಲ್ಲಿಸಿದ್ದಾರೆ[೩೦].

**ಬಂಟ್ವಾಳ ನಾರಾಯಣ ನಾಯಕರು**

೨೬.೦೨.೧೯೧೪ರಲ್ಲಿ ಜನಿಸಿದ ಬಂಟ್ವಾಳ ನಾರಾಯಣ ನಾಯಕರು ಬಂಟ್ವಾಳ ತಾಲೂಕಿನ ಸ್ವಾತಂತ್ರ್ಯ ಹೋರಾಟಗಾರರು ಮತ್ತು ಪ್ರಮುಖ ಸಹಕಾರಿ ನೇತಾರರು. ೧೯೬೦ರಲ್ಲಿ ಸಹಕಾರಿ ರಂಗವನ್ನು ಪ್ರವೇಶಿಸಿದ ಅವರು ೧೯೬೦-೬೪ ರವರೆಗೆ ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕಿನ ಉಪಾಧ್ಯಕ್ಷರಾಗಿ ನಂತರ ಕೆಲವು ವರ್ಷ ಅಧ್ಯಕ್ಷರಾಗಿ ದುಡಿದರು. ಅವರ ಅಧ್ಯಕ್ಷತೆಯಲ್ಲಿ ಬ್ಯಾಂಕ್ ಉತ್ತಮ ಪ್ರಗತಿ ಸಾಧಿಸಿತು. ಅವರು ದಕ್ಷಿಣ ಕನ್ನಡ ಜಿಲ್ಲಾ ಸಹಕಾರಿ ಕೃಷಿ ಅಭಿವೃದ್ಧಿ ಸಂಘದ ಅಧ್ಯಕ್ಷರಾಗಿಯೂ ದುಡಿದಿದ್ದಾರೆ. ಇದಲ್ಲದೆ ದಕ್ಷಿಣ ಕನ್ನಡ ಜಿಲ್ಲಾ ತೋಟಗಾರಿಕಾ ಮಾರಾಟ

ಸಹಕಾರಿ ಸಂಘದ ಅಧ್ಯಕ್ಷರಾಗಿ, ರಾಜ್ಯ ಸಹಕಾರ ಯೂನಿಯನ್ನಿನ ಡೈರೆಕ್ಟರ್ ಆಗಿ, ಜಿಲ್ಲಾ ಸಹಕಾರಿ ಯೂನಿಯನ್ ಕಾರ್ಯದರ್ಶಿಗಳಾಗಿ ಮತ್ತು ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ. ಅನುಸೂಚಿತ ಪಂಗಡ ಮತ್ತು ಪರಿಶಿಷ್ಟ ಜಾತಿಯ ಕೈಗಾರಿಕಾ ಸಹಕಾರಿ ಸಂಘದ ಮೂಲಕ ದುರ್ಬಲ ವರ್ಗದವರಿಗೆ ಕೈಗಾರಿಕಾ ತರಬೇತಿ ನೀಡಲು ಇಂಜಿನಿಯರಿಂಗ್ ವರ್ಕ್‌ಶಾಪ್ ಸ್ಥಾಪಿಸಿ ಆ ಪಂಗಡದವರ ಆರ್ಥಿಕ ಪರಿಸ್ಥಿತಿ ಸುಧಾರಣೆಗೆ ನೆರವಾಗಲು ಮತ್ತು ಮಾರುಕಟ್ಟೆಗೆ ಉತ್ತಮ ಉತ್ಪನ್ನಗಳನ್ನು ಒದಗಿಸಲು ನಾರಾಯಣ ನಾಯಕರು ಶ್ರಮಿಸಿದ್ದಾರೆ. ಕ್ಯಾಂಪ್ಕೋ ಸಂಸ್ಥೆಯ ಸ್ಥಾಪನೆಯಲ್ಲೂ ವಾರಣಾಸಿ ಸುಬ್ರಾಯ ಭಟ್ಟರೊಂದಿಗೆ ನಾರಾಯಣ ನಾಯಕರು ಪ್ರಮುಖ ಪಾತ್ರ ವಹಿಸಿದ್ದರು. ಕೆಲವು ಕಾಲ ಅವರು 'ಕನ್ನಡ ಸಹಕಾರ' ಪತ್ರಿಕೆಯ ಪ್ರಕಾಶಕರೂ ಆಗಿದ್ದರು[೩೧].

**ಕೆಮ್ಮಾರ ಬಾಲಕೃಷ್ಣ ಗೌಡ**

ದಿನಾಂಕ ೨೩.೧೦.೧೯೨೫ ರಂದು ಜನಿಸಿದ ಕೆಮ್ಮಾರ ಬಾಲಕೃಷ್ಣ ಗೌಡರು ೧೯೪೬ ರಿಂದ ೧೯೫೭ ರವರೆಗೆ ಸೈನಿಕರಿಗಾಗಿ ಸೇವೆ ಸಲ್ಲಿಸಿದರು. ೧೯೫೮ರಲ್ಲಿ ಕೊಳ್ತಿಗೆ ಸೇವಾ ಸಹಕಾರಿ ಸಂಘದ ಸ್ಥಾಪಕ ನಿರ್ದೇಶಕರಾಗಿ ಸಹಕಾರಿ ರಂಗವನ್ನು ಪ್ರವೇಶಿಸಿದರು. ೧೯೭೬ ರಿಂದ ೧೯೮೦ ರವರೆಗೆ ಮತ್ತು ೧೯೯೧ ರಿಂದ ೧೯೯೨ ರವರೆಗೆ ಅದೇ ಸಂಘದ ಅಧ್ಯಕ್ಷರಾಗಿದ್ದರು. ಪುತ್ತೂರು ತಾಲೂಕು ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ ನಿರ್ದೇಶಕರಾಗಿ ೧೩ ವರ್ಷಗಳ ಕಾಲ ಸೇವೆ ಸಲ್ಲಿಸಿದರು. ಪುತ್ತೂರು ತಾಲೂಕು ಸಹಕಾರಿ ಯೂನಿಯನ್, ದಕ್ಷಿಣ ಕನ್ನಡ ಜಿಲ್ಲಾ ಕೃಷಿಕರ ಸಹಕಾರಿ ಮಾರಾಟ ಸಂಘ ಹಾಗೂ ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ ನಿರ್ದೇಶಕರಾಗಿಯೂ ಸಹಕಾರಿ ರಂಗದಲ್ಲಿ ಸಕ್ರಿಯರಾಗಿದ್ದರು[೩೨].

**ಕೋಟೆ ವಸಂತಕುಮಾರ್**

ಸುಳ್ಯದ ಪ್ರಮುಖ ಸಹಕಾರಿ ನೇತಾರರಾಗಿದ್ದ ಕೋಟೆ ವಸಂತ ಕುಮಾರ್‌ರವರು ಕಳಂಜ ಬಾಳಿಲ ಸಹಕಾರಿ ವ್ಯವಸಾಯಿಕ ಬ್ಯಾಂಕಿನ ಕಾರ್ಯದರ್ಶಿಯಾಗಿ, ನಿರ್ದೇಶಕರಾಗಿ, ಅಧ್ಯಕ್ಷರಾಗಿ ಹಾಗೂ ಸುಳ್ಯ ಭೂ ಅಭಿವೃದ್ಧಿ ಬ್ಯಾಂಕ್ ಅಧ್ಯಕ್ಷರಾಗಿ, ದಕ್ಷಿಣ ಕನ್ನಡ ಜೇನು ವ್ಯವಸಾಯಗಾರರ ಸಹಕಾರಿ ಸಂಘದ ಅಧ್ಯಕ್ಷರಾಗಿ ಮಂಗಳೂರು ಕೃಷಿ ಉತ್ಪನ್ನ ಮಾರಾಟ ಸಮಿತಿಯ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ[೩೩]. ಅವರು ೧೯೬೮-೬೯ರಲ್ಲಿ ದಕ್ಷಿಣ ಕನ್ನಡ ಜೇನು ವ್ಯವಸಾಯ ಸಂಘದ ಅಧ್ಯಕ್ಷರಾಗಿದ್ದಾಗ ಪುತ್ತೂರಿನಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಜೇನು ವ್ಯವಸಾಯಗಾರರ ಪ್ರಥಮ ಸಮ್ಮೇಳವನ್ನು ಯಶಸ್ವಿಯಾಗಿ ಆಯೋಜಿಸಿದ್ದರು. ಅವರು ಅಧ್ಯಕ್ಷರಾಗಿದ್ದಾಗ ದಕ್ಷಿಣ ಕನ್ನಡ ಜೇನು

ವ್ಯವಸಾಯ ಸಹಕಾರಿ ಸಂಘದ ಕಾರ್ಯವ್ಯಾಪ್ತಿ ಇಡೀ ದಕ್ಷಿಣ ಕನ್ನಡ ಜಿಲ್ಲೆಗೆ ವಿಸ್ತರಿಸಲ್ಪಟ್ಟಿತು. ತಮ್ಮ ಅಧ್ಯಕ್ಷತೆಯ ಸಂದರ್ಭದಲ್ಲಿ ದಕ್ಷಿಣ ಕನ್ನಡ ಜೇನು ವ್ಯವಸಾಯಗಾರರ ಸಹಕಾರಿ ಸಂಘ ಆರ್ಥಿಕ ಬಿಕ್ಕಟ್ಟನ್ನು ಎದುರಿಸಬೇಕಾಗಿ ಬಂದಾಗ ಬೃಹತ್ ಮೊತ್ತದ ಹಣವನ್ನು ಒಂದು ವರ್ಷದ ಮಟ್ಟಿಗೆ ಕೊಟ್ಟು ಸಹಕರಿಸಿದ್ದರು. ಇವರು ಅಧ್ಯಕ್ಷರಾಗಿರುವ ಸಂದರ್ಭದಲ್ಲಿ ಜೇನಿನ ಬಾಟ್ಲ ಪ್ಯಾಕಿಂಗ್ ವ್ಯವಸ್ಥೆ ಕೂಡಾ ಆರಂಭವಾಯಿತು[೩೪].

**ಸೀತಾರಾಮಯ್ಯ ಕೂಸಯ್ಯ ಅಮಿನ್**

೦೬.೦೬.೧೯೧೮ರಲ್ಲಿ ಮೊಗವೀರ ಕುಟುಂಬದಲ್ಲಿ ಜನಿಸಿದ ಸೀತಾರಾಮ ಕೂಸಯ್ಯ ಅಮಿನ್ ಮೊಗವೀರ ಜನಾಂಗದ ಪ್ರಮುಖ ಸಹಕಾರಿ ನೇತಾರರು. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಮೀನುಗಾರರನ್ನು ವ್ಯಾಪಾರಿಗಳು ಮತ್ತು ಮಧ್ಯವರ್ತಿಗಳ ಶೋಷಣೆಯಿಂದ ತಪ್ಪಿಸಲು ಅವರ ನೇತೃತ್ವದಲ್ಲಿ ೧೯೫೪ರಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಸಹಕಾರಿ ಮೀನು ಮಾರಾಟ ಫೆಡರೇಶನ್ ಸ್ಥಾಪಿಸಲ್ಪಟ್ಟಿತು. ಅವರು ೧೯೫೪-೫೯ರಲ್ಲಿ ಅದರ ಕಾರ್ಯದರ್ಶಿಯಾಗಿ ೧೯೫೮-೭೩ರಲ್ಲಿ ಅದರ ಅಧ್ಯಕ್ಷರಾಗಿ ಮತ್ತು ೧೯೭೩-೭೫ ರವರೆಗೆ ಅದರ ನಿರ್ದೇಶಕರಾಗಿ ಸೇವೆ ಸಲ್ಲಿಸಿದರು. ರಾಜ್ಯ ಮೀನುಗಾರರ ಫೆಡರೇಶನ್‌ನ ಸದಸ್ಯರಾಗಿ, ಮಹಾಲಕ್ಷ್ಮೀ ಸಹಕಾರಿ ಬ್ಯಾಂಕಿನ ನಿರ್ದೇಶಕರಾಗಿ ಮಂಗಳೂರು 'ಲ್ಯಾಂಪ್ಸ್' ಸೊಸ್ಯಾಟಿಯ ನಿರ್ದೇಶಕರಾಗಿಯೂ ಕೂಡಾ ಅವರು ಸಹಕಾರಿ ರಂಗಕ್ಕೆ ತಮ್ಮ ಸೇವೆ ಸಲ್ಲಿಸಿದ್ದಾರೆ. ಸಹಕಾರಿ ರಂಗಕ್ಕೆ ಸಲ್ಲಿಸಿದ ಸೇವೆಯನ್ನು ಗುರುತಿಸಿದ ಸರಕಾರ ೧೯೯೧ರಲ್ಲಿ ಅವರಿಗೆ ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಿದೆ[೩೫].

**ವಾರಣಾಸಿ ಸುಬ್ರಾಯ ಭಟ್**

ವಾರಣಾಸಿ ಸುಬ್ರಾಯ ಭಟ್ಟರು ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಓರ್ವ ಪ್ರಮುಖ ಸಹಕಾರಿ ನೇತಾರರು. ದಕ್ಷಿಣ ಕನ್ನಡ ಕೃಷಿಕರ ಮಾರಾಟ ಸಹಕಾರಿ ಸಂಘದ ಸದಸ್ಯರಾಗಿ, ಅಧ್ಯಕ್ಷರಾಗಿ ಹಾಗೂ ನಿರ್ದೇಶಕರಾಗಿ, ಬಂಟ್ವಾಳ ತಾಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರಿ ಸಂಘದ ನಿರ್ದೇಶಕರಾಗಿ, ಬಂಟ್ವಾಳ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ ನಿರ್ದೇಶಕರಾಗಿ ಸೇವೆ ಸಲ್ಲಿಸಿರುವ ಇವರು ಕೇರಳ ಹಾಗೂ ಕರ್ನಾಟಕ ಸರಕಾರದ ಜಂಟಿ ಸಹಯೋಗದಿಂದ ಜನ್ಮ ತಾಳಿದ 'ಕ್ಯಾಂಪ್ಕೋ' ಸಂಸ್ಥೆಯ ಸ್ಥಾಪಕಾಧ್ಯಕ್ಷರಾಗಿದ್ದರು. ಏಷ್ಯಾದ ಅತೀ ದೊಡ್ಡ ಚಾಕಲೇಟ್ ಫ್ಯಾಕ್ಟರಿಯಾದ ಪುತ್ತೂರಿನ 'ಕ್ಯಾಂಪ್ಕೋ' ಚಾಕಲೇಟ್ ಫ್ಯಾಕ್ಟರಿಯ ಸ್ಥಾಪನೆಯಲ್ಲೂ ಇವರು ಪ್ರಮುಖ ಪಾತ್ರ ವಹಿಸಿದ್ದರು. ೧೯೮೭-೮೮ರಲ್ಲಿ ಕರ್ನಾಟಕ ಸಹಕಾರ

ಸಂಘಗಳ ಕಾಯ್ದೆಯ ತಿದ್ದುಪಡಿ ಶಿಫಾರಸು ಮಾಡಲು ರಚಿತವಾದ ಸಮಿತಿಯ ಸದಸ್ಯರು ಆಗಿದ್ದರು[೨೬].

ದಕ್ಷಿಣ ಕನ್ನಡ ಕೃಷಿ ಅಭಿವೃದ್ಧಿ ಸಂಘ ಲಿಮಿಟೆಡ್ ಮಂಗಳೂರು ಎಂಬ ಸಹಕಾರಿ ಸಂಸ್ಥೆಯ ಸ್ಥಾಪಕರಾದ ಟಿ.ಎ. ಪೈಯವರು, ಬ್ರಹ್ಮಯ್ಯ ಶೆಟ್ಟರು, ಎಚ್. ಗಣಪತಿರಾಯರು, ವಿ. ಶ್ರೀನಿವಾಸ ಕಾಮತರು, ಎಸ್. ನರಸಪ್ಪಯ್ಯ, ಖಾನ್ ಅಬ್ದುಲ್ಲಾ ಹಾಜಿ ಕಾಸಿಮ್ ಸಾಹೇಬ್ ಬಹದ್ದೂರ್, ರೆವೆರೆಂಡ್ ಡಿ.ಡಿ. ಎಫ್ ಕೊಯಿಲೋ ಎಸ್.ಜೆ, ಐರ್ಯ ಲಕ್ಷ್ಮೀನಾರಾಯಣ ಆಳ್ವ ಮುಂತಾದ ಸಹಕಾರಿ ನೇತಾರರು ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಸಹಕಾರಿ ಕ್ಷೇತ್ರಕ್ಕೆ ತಮ್ಮದೇ ಆದ ಕೊಡುಗೆ ಸಲ್ಲಿಸಿದ್ದಾರೆ.

ಪ್ರಸ್ತುತ ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕಿನ ಅಧ್ಯಕ್ಷರಾಗಿರುವ **ಎಂ.ಎನ್.ರಾಜೇಂದ್ರ ಕುಮಾರ್‌ರವರು** ಜಿಲ್ಲೆಯಲ್ಲಿರುವ ಸಹಕಾರಿ ನೇತಾರರಲ್ಲಿ ಪ್ರಮುಖರು. ಇವರ ಅಧಿಕಾರಾವಾದಿಯಲ್ಲಿ ಜಿಲ್ಲೆಯ ಸಹಕಾರಿ ರಂಗ ಉತ್ತಮ ಪ್ರಗತಿ ಸಾಧಿಸುತ್ತಿದೆ. ಪ್ರಕೃತ ಇವರು ರಾಜ್ಯ ಕೋ-ಓಪರೇಟಿವ್ ಅಪೆಕ್ಸ್ ಬ್ಯಾಂಕಿನ ಅಧ್ಯಕ್ಷರಾಗಿ, ನವೋದಯ ಗ್ರಾಮ ವಿಕಾಸ ಚಾರಿಟೇಬಲ್ ಟ್ರಸ್ಟ್ ಮಂಗಳೂರು ಇದರ ಆಡಳಿತ ನಿರ್ದೇಶಕರಾಗಿ, ರಿವರ್ ವ್ಯೂ ಕೋ-ಓಪರೇಟಿವ್ ರಿಸಾರ್ಟ್ ಲಿಮಿಟೆಡ್ ಮಂಗಳೂರು ಇದರ ಸ್ಥಾಪಕರಾಗಿ ಮತ್ತು ಅದರ ಅಧ್ಯಕ್ಷರಾಗಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕಿನ ನಿರ್ದೇಶಕರಾಗಿ, ಕಾರ್ಕಳ ತಾಲೂಕು ಕೃಷಿ ಉತ್ಪನ್ನ ಸಹಕಾರಿ ಮಾರಾಟ ಸಂಘ ಇದರ ನಿರ್ದೇಶಕರಾಗಿ, ನವೋದಯ ವಿವಿಧೋದ್ದೇಶ ಸೌಹಾರ್ದ ಸಹಕಾರಿ ನಿಯಮಿತ ಮಂಗಳೂರು ಇದರ ಸ್ಥಾಪಕರಾಗಿ ತಮ್ಮನ್ನು ಸಹಕಾರಿ ಕ್ಷೇತ್ರದಲ್ಲಿ ತೊಡಗಿಸಿಕೊಂಡಿದ್ದಾರೆ. ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕಿನ ಅಧ್ಯಕ್ಷರಾಗಿ ಇವರು ನವೋದಯ ಸ್ವ-ಸಹಾಯ ಗುಂಪು ಯೋಜನೆ, ಮೊಬೈಲ್ ಬ್ಯಾಂಕಿಂಗ್ ಯೋಜನೆ, ನವೋದಯ ಗ್ರಾಮ ವಿಕಾಸ ಚಾರಿಟೇಬಲ್ ಟ್ರಸ್ಟ್‌ನ ಮೂಲಕ ಗ್ರಾಮೀಣ ಪ್ರದೇಶದ ದುರ್ಬಲ ವರ್ಗಗಳ ಸಬಲೀಕರಣ ಹಾಗೂ ಅವರ ಸಾಮಾಜಿಕ ಮತ್ತು ಆರ್ಥಿಕಾಭಿವೃದ್ಧಿಗಾಗಿ ಹಲವು ಯೋಜನೆಗಳು ಮುಂತಾದ ಯೋಜನೆಗಳನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸಿದ್ದಾರೆ. ಇವರ ಅಧಿಕಾರಾವಧಿಯಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ರಾಜ್ಯ ಅಪೆಕ್ಸ್ ಸಹಕಾರಿ ಬ್ಯಾಂಕ್‌ನಿಂದ ಉತ್ತಮ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಪ್ರಶಸ್ತಿ, ನಬಾರ್ಡ್‌ನಿಂದ ಅತೀ ಹೆಚ್ಚು ಸಂಖ್ಯೆಯಲ್ಲಿ ಸ್ವ-ಸಹಾಯ ಗುಂಪುಗಳ ರಚನೆಗಾಗಿ ಪ್ರಶಸ್ತಿ, ಕರ್ನಾಟಕ ರಾಜ್ಯ ಸಹಕಾರಿ ಮಹಾಮಂಡಲದ ವತಿಯಿಂದ ೨೦೦೭ರಲ್ಲಿ ಶ್ರೇಷ್ಠ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಪ್ರಶಸ್ತಿಯನ್ನು ಗಳಿಸಿಕೊಂಡಿದೆ.

## ೫.೨ ಮಹಿಳಾ ಸಹಕಾರಿಗಳು

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಸಹಕಾರ ಚಳುವಳಿಯಲ್ಲಿ ಸ್ವಾತಂತ್ರ್ಯ ಪೂರ್ವದಲ್ಲೇ ಮಹಿಳೆಯರ ಭಾಗವಹಿಸುವಿಕೆಯನ್ನು ಕಾಣಬಹುದಾದರೂ ಸ್ವಾತಂತ್ರ್ಯಪೂರ್ವದಲ್ಲಿ ಶಿಕ್ಷಣದ ಕೊರತೆ, ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆ, ಅವಕಾಶಗಳ ಕೊರತೆಯಿಂದಾಗಿ ಸಹಕಾರ ಕ್ಷೇತ್ರದಲ್ಲಿ ಮಹಿಳೆಯರ ಭಾಗವಹಿಸುವಿಕೆ ಹೆಚ್ಚಾಗಿರಲಿಲ್ಲ. ೧೯೩೮ರಲ್ಲಿ ಪುತ್ತೂರಿನಲ್ಲಿ ಸ್ಥಾಪಿಸಲ್ಪಟ್ಟ ಮಹಿಳಾ ಗುಡಿ ಕೈಗಾರಿಕಾ ಸಹಕಾರಿ ಸಂಘದ ಅಧ್ಯಕ್ಷತೆಯಾಗಿದ್ದ ಸುನಂದಾ ಬಾಳಿಗಾರವರು ಜಿಲ್ಲೆಯ ಪ್ರಥಮ ಸಹಕಾರಿಣಿ ಎನಿಸಿಕೊಂಡಿದ್ದಾರೆ[೩೭]. ಇವರ ಜೊತೆಗೆ ಬೈಂದೂರು ಕೃಷ್ಣಾಬಾಯಿ, ಶಾಂತಾಬಾಯಿ ಸವೂರ, ಲೀಲಾಭಟ್[೩೮] ಸ್ವಾತಂತ್ರ್ಯ ಹೋರಾಟಗಾರ್ತಿಯೂ ಆಗಿದ್ದ ಕಮಲಾವತಿ ಡಿ. ಅಧಿಕಾರಿ ಮುಂತಾದ ಮಹಿಳೆಯರು ಸಹಕಾರ ಚಳುವಳಿಯಲ್ಲಿ ಭಾಗಿಗಳಾಗಿದ್ದರು.

ಸ್ವಾತಂತ್ರ್ಯಾ ನಂತರ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಜಿಲ್ಲೆಯ ಸಹಕಾರ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದನ್ನು ಕಾಣಬಹುದು. ೧೬೬೫ರ ನಂತರದ ಸಹಕಾರಿ ಕಾಯಿದೆ ತಿದ್ದುಪಡಿಯಿಂದಾಗಿ ಎಲ್ಲಾ ಸಹಕಾರಿ ಸಂಸ್ಥೆಗಳಲ್ಲಿ ಒಂದು ಸ್ಥಾನವನ್ನು ಮಹಿಳೆಗೆ ಮೀಸಲಾಗಿಡಲು ಆರಂಭವಾದಾಗಿನಿಂದ ಹೆಚ್ಚು ಹೆಚ್ಚು ಮಹಿಳೆಯರು ಸಹಕಾರಿ ಸಂಸ್ಥೆಗಳಲ್ಲಿ ಅಧ್ಯಕ್ಷೆ, ಉಪಾಧ್ಯಕ್ಷೆ, ನಿರ್ದೇಶಕರು ಹಾಗೂ ಕಾರ್ಯದರ್ಶಿಗಳಾಗಿ, ಸದಸ್ಯೆಯರಾಗಿ ಪಾಲ್ಗೊಳ್ಳಲು ಅವಕಾಶವಾಯಿತು[೩೯].

ಸ್ವಾತಂತ್ರ್ಯಾ ನಂತರ ಸಹಕಾರಿ ಕ್ಷೇತ್ರದಲ್ಲಿ ದಕ್ಷಿಣ ಕನ್ನಡದ ಹಲವು ಮಹಿಳೆಯರು ಸಕ್ರಿಯರಾಗಿ ಭಾಗವಹಿಸಲು ಆರಂಭಿಸಿದರು. ಪುತ್ತೂರು ಮಹಿಳಾ ವಿವಿಧೋದ್ದೇಶ ಸಹಕಾರಿ ಸಂಘ ಪುತ್ತೂರು ಇದರ ಅಧ್ಯಕ್ಷೆಯಾಗಿ, ಜನತಾ ಬಜಾರ್‌ನ ನಿರ್ದೇಶಕರಾಗಿ, ಉಪಾಧ್ಯಕ್ಷರಾಗಿ ಮತ್ತು ಜಿಲ್ಲಾ ಸಹಕಾರಿ ಯೂನಿಯನ್‌ನ ಉಪಾಧ್ಯಕ್ಷೆಯಾಗಿದ್ದ ಕಲಾವತಿ ಪೂವಪ್ಪ, ಸೆಂಟ್ರಲ್ ಕೋ ಓಪರೇಟಿವ್ ಸ್ಟೋರ್‌ನ ನಿರ್ದೇಶಕಿಯಾಗಿದ್ದ ಆನಂದಿರಾವ್, ಸುಬ್ರಹ್ಮಣ್ಯದ ಮಹಿಳಾ ವಿವಿಧೋದ್ದೇಶ ಸಹಕಾರಿ ಸಂಘ ಹಾಗೂ ಪಂಜ ಸಿ.ಎ. ಬ್ಯಾಂಕಿನ ಅಧ್ಯಕ್ಷೆಯಾಗಿದ್ದ ಲೀಲಾವತಿ ಶೆಟ್ಟಿ, ಜಿಲ್ಲಾ ಸಹಕಾರಿ ಯೂನಿಯನ್‌ನ ಉಪಾಧ್ಯಕ್ಷೆಯಾಗಿದ್ದ ಪುಷ್ಪಾ ಜೆ.ರೈ, ಅಲಂಕಾರು ಸಹಕಾರಿ ಬ್ಯಾಂಕಿನ ಅಧ್ಯಕ್ಷೆಯಾಗಿ ದಕ್ಷಿಣ ಕನ್ನಡ ಜಿಲ್ಲಾ ಮಹಿಳಾ ಸಹಕಾರಿ ಬ್ಯಾಂಕಿನ ಅಧ್ಯಕ್ಷೆಯಾಗಿದ್ದ ಶಕುಂತಲಾ ಶೆಟ್ಟಿ, ದಕ್ಷಿಣ ಕನ್ನಡ ಜಿಲ್ಲಾ ಮಹಿಳಾ ಕೋ–ಓಪರೇಟಿವ್ ಬ್ಯಾಂಕಿನ ಸ್ಥಾಪಕಾಧ್ಯಕ್ಷರಾಗಿ, ಕರ್ನಾಟಕ ರಾಜ್ಯ ಮಹಿಳಾ ಸಹಕಾರಿ ಮಹಿಳಾ ಮಂಡಲದ ಅಧ್ಯಕ್ಷೆಯಾಗಿ ಉಡುಪಿ ಮಹಿಳಾ ವಿವಿಧೋದ್ದೇಶ ಸಹಕಾರಿ ಸಂಘದ ನಿರ್ದೇಶಕಿಯಗಿ ಉಡುಪಿ ಜಿಲ್ಲಾ ಸಹಕಾರಿ ಒಕ್ಕೂಟದ ನಿರ್ದೇಶಕಿಯಾಗಿ ಸಹಕಾರಿ ರಂಗದಲ್ಲಿ ಈಗಲೂ ಸಕ್ರಿಯರಾಗಿ ಭಾಗವಹಿಸುತ್ತಿರುವ ಸರಳಾ.ಬಿ ಕಾಂಚನ್ ಮುಂತಾದ ಮಹಿಳೆಯರು ಸಹಕಾರಿ ಕ್ಷೇತ್ರದಲ್ಲಿ ದುಡಿದಿದ್ದಾರೆ[೪೦].

ಪ್ರಸ್ತುತ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಸಹಕಾರಿ ಕ್ಷೇತ್ರದಲ್ಲಿ ಭಾಗವಹಿಸುತ್ತಿದ್ದಾರೆ. ಕೇಂದ್ರ ಸಹಕಾರದ ಯೋಜನೆಯಾದ "ಸ್ವಸಹಾಯ ಗುಂಪುಗಳ" ಯೋಜನೆ ಜಿಲ್ಲೆಯಲ್ಲಿ ದಕ್ಷಿಣ ಕನ್ನಡ ಸಹಕಾರಿ ಬ್ಯಾಂಕ್ ಹಾಗೂ ಪ್ರಾಥಮಿಕ ಸಹಕಾರಿ ಬ್ಯಾಂಕ್‌ಗಳ ಸಹಕಾರದೊಂದಿಗೆ ನವೋದಯ ಎಂಬ ಹೆಸರಿನೊಂದಿಗೆ ಅಸ್ಥಿತ್ವಕ್ಕೆ ಬಂದ ಮೇಲೆ ಗ್ರಾಮೀಣ ಮಹಿಳೆಯರು ಸಹಕಾರ ಕ್ಷೇತ್ರದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗಿಗಳಾಗುತ್ತಿದ್ದಾರೆ.

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಹಕಾರ ಚಳುವಳಿಯನ್ನು ಕಟ್ಟಿ ಬೆಳೆಸುವುದರಲ್ಲಿ ಹಲವು ಮಹನೀಯರು ಪ್ರಮುಖ ಪಾತ್ರ ವಹಿಸಿರುವುದನ್ನು ನೋಡಬಹುದು. ಜಿಲ್ಲೆಯ ಪ್ರಮುಖ ಸಹಕಾರಿ ನೇತಾರರಲ್ಲಿ ಹೆಚ್ಚಿನವರು ಮೇಲ್ವರ್ಗದವರು, ಶಿಕ್ಷಿತರು ಮತ್ತು ಭೂಮಾಲಿಕರು. ಹೆಚ್ಚಿನ ಹಿರಿಯ ಸಹಕಾರಿ ನೇತಾರರು ರಾಷ್ಟ್ರೀಯ ಚಳುವಳಿಯ ಪ್ರಭಾವಕ್ಕೂ ಒಳಗಾಗಿದ್ದರು. ಸಹಕಾರ ಚಳುವಳಿಯನ್ನು ಕಟ್ಟಿ ಬೆಳೆಸುವುದರಲ್ಲಿ ಅವರಲ್ಲಿ ಕೆಲವರಿಗೆ ವೈಯಕ್ತಿಕ ಹಿತಾಸಕ್ತಿಗಳನ್ನು ರಕ್ಷಿಸುವ ಉದ್ದೇಶವಿದ್ದರೂ ಜೊತೆಗೆ ಸಾಮಾಜಿಕ ಕಳಕಳಿಯು ಇರುವುದನ್ನು ಕಾಣಬಹುದು. ಬಹುಶಃ ಮೊಳಹಳ್ಳಿ ಶಿವರಾಯರು ಮತ್ತು ಇತರ ಪ್ರಮುಖ ಸಹಕಾರಿ ನೇತಾರರ ಪ್ರಾಮಾಣಿಕ ಪ್ರಯತ್ನವಲ್ಲದೆ ಹೋಗಿದ್ದರೆ ಇಂದು ಸಹಕಾರ ಚಳುವಳಿ ಇಷ್ಟು ವಿಸ್ತೃತವಾಗಿ ಬೆಳೆಯಲು ಸಾಧ್ಯವಿರಲಿಲ್ಲ.

ಜಿಲ್ಲೆಯ ಸಹಕಾರಿ ಕ್ಷೇತ್ರದಲ್ಲಿ ಸ್ವಾತಂತ್ರ್ಯ ಪೂರ್ವದಲ್ಲೇ ಮಹಿಳೆಯರ ಭಾಗವಹಿಸುವಿಕೆ ಕಂಡು ಬರುತ್ತಾದರೂ ಅವರಿಗೆ ಆಗ ಸಹಕಾರಿ ಕ್ಷೇತ್ರದಲ್ಲಿ ಹೆಚ್ಚಿನ ಪ್ರಾಧಾನ್ಯತೆ ಇರಲಿಲ್ಲ. ಸ್ವಾತಂತ್ರ್ಯ ಪೂರ್ವದಲ್ಲಿ ಮತ್ತು ಆ ನಂತರದ ಕೆಲವು ವರ್ಷಗಳ ಕಾಲ ಮೇಲ್ವರ್ಗದ ಮಹಿಳೆಯರು ಮತ್ತು ಶಿಕ್ಷಿತ ಮಹಿಳೆಯರು ಮಾತ್ರ ಸಹಕಾರಿ ಸಂಘಗಳ ಚಟುವಟಿಕೆಗಳಲ್ಲಿ ಹೆಚ್ಚಾಗಿ ಭಾಗವಹಿಸುತ್ತಿದ್ದರು. ಇತ್ತೀಚಿನ ದಶಕಗಳಲ್ಲಿ ಸಹಕಾರಿ ಕ್ಷೇತ್ರದಲ್ಲಿ ಮಹಿಳೆಯರ ಭಾಗವಹಿಸುವಿಕೆ ಹೆಚ್ಚಾಗಿರುವುದನ್ನು ಕಾಣಬಹುದು. ಸ್ವ ಸಹಾಯ ಗುಂಪು ಯೋಜನೆ ಅನುಷ್ಠಾನಕ್ಕೆ ಬಂದ ಮೇಲೆ ಗ್ರಾಮೀಣ ಪ್ರದೇಶದ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಸಹಕಾರಿ ಕ್ಷೇತ್ರದತ್ತ ಆಕರ್ಷಿತರಾಗುತ್ತಿದ್ದಾರೆ. ಮಹಿಳೆಯರೇ ನಡೆಸುತ್ತಿರುವ ಸ್ವ ಸಹಾಯ ಗುಂಪುಗಳು ಜಿಲ್ಲೆಯಲ್ಲಿ ಹೆಚ್ಚು ಯಶಸ್ವಿಯಾಗಿವೆ. ಆದರೂ ಮಹಿಳಾ ಸಹಕಾರಿ ಸಂಘಗಳಲ್ಲಿ ಮತ್ತು ಇತರ ಸಹಕಾರ ಸಂಘಗಳಲ್ಲೂ ಪ್ರಮುಖ ಹುದ್ದೆಗಳು ಇಂದಿಗೂ ಮೇಲ್ವರ್ಗದ ಮಹಿಳೆಯರಿಗೆ ಮಾತ್ರ ಮೀಸಲಾಗಿವೆ. ಮಹಿಳಾ ಸಹಕಾರಿ ಚಳುವಳಿಯನ್ನು ಬಲಗೊಳಿಸುವ ನಿಟ್ಟಿನಲ್ಲಿ ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಸಮಾಜದ ವಿವಿಧ ವರ್ಗಗಳ ಮಹಿಳೆಯರನ್ನು ಸಹಕಾರ ಚಳುವಳಿಯಲ್ಲಿ ಸೇರಿಸಿಕೊಂಡು ಕಾರ್ಯ ನಿರ್ವಹಿಸಬೇಕಾದುದು ಅನಿವಾರ್ಯ.

## ಕೊನೆಟಿಪ್ಪಣಿ

೧. ಡಾ. ಗಣನಾಥ ಎಕ್ಕಾರು

ಹಿರಿಯ ಸಹಕಾರಿ ಮೊಳಹಳ್ಳಿ ಶಿವರಾಯ, ೨೦೦೯ ಪು.ಸಂ. ೩, ೫, ೬, ೭

೨. ಅದೇ ಪು.ಸಂ. ೭, ೯, ೧೧

೩. ಅದೇ ಪು.ಸಂ. ೮, ೯

೪. ಏರ್ಯ ಲಕ್ಷ್ಮೀ ನಾರಾಯಣ ಆಳ್ವ

ಅಮರ ಚೇತನ, "ಅಮೃತ ವಿಭವ" ದ.ಕ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಲಿ. ನ ಸ್ಮರಣ ಸಂ

೧೯೯೧ರಲ್ಲಿ ಪ್ರಕಟಗೊಂಡ ಲೇಖನ.

೫. ದಕ್ಷಿಣ ಕನ್ನಡ ಸಹಕಾರಿ, ಎಪ್ರಿಲ್ -ಮೇ- ೧೯೯೧, ಪು.ಸಂ. ೧೩

೬. ಅದೇ ಪು.ಸಂ. ೧೩

೭. ಡಾ. ಗಣನಾಥ ಎಕ್ಕಾರು

ಹಿರಿಯ ಸಹಕಾರಿ ಮೊಳಹಳ್ಳಿ ಶಿವರಾಯ, ೨೦೦೯, ಪು.ಸಂ. ೧೩, ೧೫

೮. ಅಭಿಶಂಕರ್ ಕೆ. (ಪು.ಸಂ)

ಗಝೆಟಿಯರ್ ಆಫ್ ಇಂಡಿಯಾ, ಕರ್ನಾಟಕ ಸ್ಟೇಟ್ ಗಝೆಟಿಯರ್ – ಸೌತ್ ಕೆನರಾ ಡಿಸ್ಟ್ರಿಕ್ಟ್ ೧೯

ಪು.ಸಂ ೯೮೩೩

೯. ಡಾ. ಗಣನಾಥ ಎಕ್ಕಾರು

ಹಿರಿಯ ಸಹಕಾರಿ ಮೊಳಹಳ್ಳಿ ಶಿವರಾಯ, ೨೦೦೯, ಪು.ಸಂ. ೧೫

೧೦. ಅದೇ ಪು.ಸಂ. ೧೪, ೧೫

೧೧. ಪೇರಾಜೆ ಶ್ರೀನಿವಾಸ ರಾವ್

ನಮ್ಮ ಜಿಲ್ಲೆಯಲ್ಲಿ ಸಹಕಾರಿ ರಂಗ ಬೆಳೆದು ಬಂದ ದಾರಿ – ಸಹಕಾರಿ ಆಂದೋಲನ, 'ಚೈತನ್ಯ' ದ.ಕ. ಮ

ಉಡುಪಿ ಜಿಲ್ಲಾ ಸುವರ್ಣ ಸಹಕಾರಿ ಉತ್ಸವ ೧೯೯೮ರ ಸ್ಮರಣ ಸಂಚಿಕೆಯಲ್ಲಿನ ಲೇಖನ.

೧೨. ಡಾ. ಗಣನಾಥ ಎಕ್ಕಾರು

ಹಿರಿಯ ಸಹಕಾರಿ ಮೊಳಹಳ್ಳಿ ಶಿವರಾಯ, ೨೦೦೯, ಪು.ಸಂ. ೧೩

೧೩. "ಬೆಳೆದು ಬಂದ ಹಾದಿ ದಿ ಪುತ್ತೂರು ಕೋ ಓಪರೇಟಿವ್ ಟೌನ್ ಬ್ಯಾಂಕ್ ಲಿ. ನ ಸ್ಮರಣ ಸಂಚಿಕೆ ೨೮-೦

೨೦೦೪, ಪು. ಸಂ ೧

೧೪. ದಿ। ಪುತ್ತೂರು ಕೋ ಓಪರೇಟಿವ್ ಟೌನ್ ಬ್ಯಾಂಕ್ ಲಿ. ನ ಅಮೃತ ಮಹೋತ್ಸವ ಸ್ಮರಣ ಸಂಚಿಕೆ ೨೪-೨-೧೯೮

೧೫. ಅದೇ

೧೬. ದ.ಕ ಸಹಕಾರಿ ಪತ್ರಿಕೆ ಫೆಬ್ರವರಿ – ಮಾರ್ಚ್ ೧೯೯೧, ಪು. ಸಂ ೧೪.

೧೭. ವೈಯಕ್ತಿಕ ಸಂದರ್ಶನ ೨೫-೦೫-೨೦೦೯

೧೮. "ಚೈತನ್ಯ" ದ.ಕ ಮತ್ತು ಉಡುಪಿ ಜಿಲ್ಲಾ ಸಹಕಾರಿ ಉತ್ಸವ ೧೯೯೮ರ ಸ್ಮರಣ ಸಂಚಿಕೆ

೧೯. ವೈಯಕ್ತಿಕ ಸಂದರ್ಶನ ೨೫-೦೫-೨೦೦೯

೨೦. "ಚೈತನ್ಯ", ದ.ಕ ಮತ್ತು ಉಡುಪಿ ಜಿಲ್ಲಾ ಸಹಕಾರಿ ಉತ್ಸವ ೧೯೯೮ರ ಸ್ಮರಣ ಸಂಚಿಕೆ

೨೧. ಶಿವರಾಂ ಪೈಲೂರು (ಸಂ)

ನೆರಳು ಚೆಲ್ಲಿದ ಮಾಮರ, ಪೈಲೂರು ಲಕ್ಷ್ಮೀ ನಾರಾಯಣ ರಾವ್ ನೆನಪು, ೨೦೦೪, ಪು.ಸಂ. ೩

೨೨. ಪೈಲೂರು ಲಕ್ಷ್ಮೀ ನಾರಾಯಣ ರಾವ್

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಜೇನು ವ್ಯವಸಾಯದ ಪ್ರಾರಂಭ ಮತ್ತು ಪ್ರಗತಿ, 'ಮಧು ಪ್ರಪಂಚ' ಇದರ ವಿಶೇಷಾಂಕ ೨೦೦೨ ರಲ್ಲಿ ಪ್ರಕಟಗೊಂಡ ಲೇಖನ.

೨೩. ಶಿವರಾಂ ಪೈಲೂರು

ನೆರಳು ಚೆಲ್ಲಿದ ಮಾಮರ, ಪೈಲೂರು ಲಕ್ಷ್ಮೀ ನಾರಾಯಣ ರಾವ್ ನೆನಪು, ೨೦೦೪, ಪು.ಸಂ. ೩

೨೪ ಅದೇ ಪು.ಸಂ. ೬

೨೫ "ಚೈತನ್ಯ", ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲಾ ಸುವರ್ಣ ಸಹಕಾರಿ ಉತ್ಸವ ೧೯೯೮ರ ಸ್ಮರಣ ಸಂಚಿಕೆ

೨೬. ಕೆ. ಕಾಂತಪ್ಪ ಆಳ್ವ

ಬ್ಯಾಂಕ್ ಸ್ಥಾಪಕ – ವೆಂಕಪ್ಪ ಉರಿಮಜಲು, 'ಕನಕ ಸಂಪದ', ವಿಟ್ಲ ಗ್ರಾಮೀಣ ಸಹಕಾರಿ ಬ್ಯಾಂಕ್ ನಿ. ಇದರ ಸುವರ್ಣ ಮಹೋತ್ಸವದ ಸ್ಮರಣ ಸಂಚಿಕೆಯಲ್ಲಿ ಪ್ರಕಟವಾದ ಲೇಖನ, ಪು.ಸಂ. ೫೨, ೫೩

೨೭. "ಚೈತನ್ಯ", ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲಾ ಸಹಕಾರಿ ಉತ್ಸವ ೧೯೯೮ರ ಸ್ಮರಣ ಸಂಚಿಕೆ

೨೮. ಅದೇ

೨೯. ಅದೇ

೩೦. ಅದೇ

೩೧. "ಸಮಾಜ ಮೆಚ್ಚಿದ ಸಹಕಾರಿ", ಶ್ರೀ ಬಂಟ್ವಾಳ ನಾರಾಯಣ ನಾಯಕ್ ಷಷ್ಠ್ಯಬ್ದ ಸಮಿತಿ ಪ್ರಕಟಣೆ ೧೯೩೪

೩೨. "ಚೈತನ್ಯ", ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲಾ ಸಹಕಾರಿ ಉತ್ಸವ ೧೯೯೮ರ ಸ್ಮರಣ ಸಂಚಿಕೆ ಪು.ಸಂ. ೧೯, ೨೩

೩೩. ದಕ್ಷಿಣ ಕನ್ನಡ ಸಹಕಾರಿ ೨೦೦೮ ಪು.ಸಂ. ೫

೩೪. ಪೈಲೂರು ಲಕ್ಷ್ಮೀ ನಾರಾಯಣ ರಾವ್

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಜೇನು ವ್ಯವಸಾಯದ ಪ್ರಾರಂಭ ಮತ್ತು ಪ್ರಗತಿ, 'ಮಧು ಪ್ರಪಂಚ' ಇದ ವಿಶೇಷಾಂಕ ೨೦೦೨ ರಲ್ಲಿ ಪ್ರಕಟಗೊಂಡ ಲೇಖನ. ಪು.ಸಂ ೨ ಮತ್ತು ೩

೩೫. ದಕ್ಷಿಣ ಕನ್ನಡ ಸಹಕಾರಿ ಪತ್ರಿಕೆ ದಶಂಬರ ೧೯೯೦, ಪು. ಸಂ ೫

೩೬. "ಚೈತನ್ಯ", ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲಾ ಸುವರ್ಣ ಸಹಕಾರಿ ಉತ್ಸವ ೧೯೯೮ರ ಸ್ಮರಣ ಸಂಚಿಕೆ

೩೭. ಗೀತಾ ಎಸ್. ಕೊಂಕೋಡಿ

ಸಹಕಾರಿ ಕ್ಷೇತ್ರದಲ್ಲಿ ಮಹಿಳೆ ಅಂದು-ಇಂದು "ಶತಕಾಭರಣ" ಸ್ಮರಣ ಸಂಚಿಕೆ ೨೦೦೪ರಲ್ಲಿ ಪ್ರಕಟಗೊಂ ಲೇಖನ. ಪು.ಸಂ. ೪೫

೩೮. ಕನ್ನಡ ಸಹಕಾರಿ ಫೆಬ್ರವರಿ ೧೯೫೨ರ ಸಂಚಿಕೆ ಪು.ಸಂ ೫

೩೯. ಗೀತಾ ಎಸ್. ಕೊಂಕೋಡಿ

ಸಹಕಾರಿ ಕ್ಷೇತ್ರದಲ್ಲಿ ಮಹಿಳೆ ಅಂದು-ಇಂದು. "ಶತಕಾಭರಣ" ಸ್ಮರಣ ಸಂಚಿಕೆ ೨೦೦೪ರಲ್ಲಿ ಪ್ರಕಟಗೊಂ

ಲೇಖನ. ಪು.ಸಂ. ೪೫

೪೦. ಅದೇ ಪು.ಸಂ. ೪೫, ೪೬

**********

# ಅಧ್ಯಾಯ ೬

# ದಕ್ಷಿಣ ಕನ್ನಡದ ಸಹಕಾರಿ ರಂಗದ ಸಾಮಾಜಿಕ ಕಾರ್ಯಗಳು

೬.೧ : ಜಿಲ್ಲೆಯ ಶೈಕ್ಷಣಿಕ ಮತ್ತು ಸಾಮಾಜಿಕ ಕ್ಷೇತ್ರದ ಪರಿವರ್ತನೆಯಲ್ಲಿ ಸಹಕಾರಿ ರಂಗದಪಾತ್ರ

೬.೨. : ಜಿಲ್ಲೆಯ ಆರ್ಥಿಕ ಅಭಿವೃದ್ಧಿಗೆ ಸಹಕಾರಿ ರಂಗದ ಕೊಡುಗೆ.

# ಅಧ್ಯಾಯ ೬
# ದಕ್ಷಿಣ ಕನ್ನಡ ಸಹಕಾರಿ ರಂಗದ ಸಾಮಾಜಿಕ ಕಾರ್ಯಗಳು

ಸಹಕಾರ ತತ್ವದ ಆಧಾರದ ಮೇಲೆ ಸಮಾಜದ ಆರ್ಥಿಕ ಅಭಿವೃದ್ಧಿಯೇ ಸಹಕಾರದ ಮೂಲ ಉದ್ದೇಶ. ದಕ್ಷಿಣ ಕನ್ನಡ ಜಿಲ್ಲೆಯ ಶೈಕ್ಷಣಿಕ, ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರಗಳ ಬೆಳವಣಿಗೆಯಲ್ಲಿ ಸಹಕಾರ ಕ್ಷೇತ್ರ ತನ್ನದೇ ಆದ ಕೊಡುಗೆಗಳನ್ನು ನೀಡಿದೆ. ಇಂದು ದಕ್ಷಿಣ ಕನ್ನಡ ಹಾಗೂ ಉಡುಪಿ ಜಿಲ್ಲೆಗಳಲ್ಲಿ (ಹಿಂದಿನ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆ) ಸಹಕಾರಿ ಸಂಸ್ಥೆಗಳು ಆರ್ಥಿಕ ಅಭಿವೃದ್ಧಿಯಲ್ಲಿ ಪರಿಣಾಮಕಾರಿ ಪಾತ್ರವಹಿಸುತ್ತಿದ್ದು ಉಭಯ ಜಿಲ್ಲೆಗಳ ಗ್ರಾಮೀಣ ವ್ಯವಸ್ಥೆಯಲ್ಲಿ ಸಹಕಾರಿ ಕ್ಷೇತ್ರ ಅಮೂಲಾಗ್ರ ಬದಲಾವಣೆ ತಂದಿದೆ. ಇಂದು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಹಕಾರಿ ಕ್ಷೇತ್ರವು ವಿಸ್ತಾರವಾಗಿ ಬೆಳೆದಿದ್ದು ಹಲವು ವಿಧದ ಸಹಕಾರ ಸಂಸ್ಥೆಗಳು ಇಲ್ಲಿ ಅಸ್ತಿತ್ವದಲ್ಲಿವೆ. ೧೯೦೯ರಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಹಕಾರ ಚಳುವಳಿ ಆರಂಭವಾದಾಗಿನಿಂದ ಜಿಲ್ಲೆಯ ಶೈಕ್ಷಣಿಕ, ಸಾಮಾಜಿಕ ಆರ್ಥಿಕ ಪ್ರಗತಿಗೆ ಸಹಕಾರಿ ಕ್ಷೇತ್ರ ಪ್ರಾಮುಖ್ಯತೆ ನೀಡಿದೆ.

## ೬.೧. ಜಿಲ್ಲೆಯ ಶೈಕ್ಷಣಿಕ ಮತ್ತು ಸಾಮಾಜಿಕ ಕ್ಷೇತ್ರದ ಪರಿವರ್ತನೆಯಲ್ಲಿ ಸಹಕಾರಿ ರಂಗದ ಪಾತ್ರ

ಅವಿಭಜಿತ ದಕ್ಷಿಣ ಕನ್ನಡ ಜಿಲೆಯ ಸಹಕಾರಿ ರಂಗ ಶಿಕ್ಷಣ ಕ್ಷೇತ್ರಕ್ಕೂ ಸಹಕಾರಿ ತತ್ವಗಳನ್ನು ವಿಸ್ತರಿಸುವ ಪ್ರಯತ್ನ ನಡೆಸಿದೆ. ಜಿಲ್ಲೆಯ ಕೆಲವು ಸಹಕಾರ ಸಂಘಗಳು ಸ್ವಾತಂತ್ರ್ಯ ಪೂರ್ವದಲ್ಲೇ ಶಿಕ್ಷಣಕ್ಕೆ ಮಹತ್ವ ನೀಡಿದ್ದವು. ಜಿಲ್ಲೆಯ ಮೊದಲ ಸಹಕಾರಿ ಸಂಘವಾದ "ಪುತ್ತೂರು ರೂರಲ್ ಕ್ರೆಡಿಟ್ ಸೊಸ್ಯಾಟಿ" ೧೯೨೨ರಲ್ಲೇ ಸಂಘದ ಸಾರ್ವಜನೋಪಕಾರ ನಿಧಿಯಿಂದ ಎರಡು ರಾತ್ರಿ ಶಾಲೆಗಳನ್ನು ನಡೆಸುತ್ತಿತ್ತು[1]. (ಆದರೆ ಕೆಲವು ವರ್ಷಗಳ ನಂತರ ಹಣಕಾಸಿನ ಕೊರತೆಯಿಂದಾಗಿ ಈ ಶಾಲೆಗಳನ್ನು ಮುಚ್ಚಬೇಕಾಯಿತು.)

ಜಿಲ್ಲೆಯ ಸಹಕಾರ ಚಳುವಳಿಯ ಆದ್ಯ ಪ್ರವರ್ತಕರಾದ ಮೊಳಹಳ್ಳಿ ಶಿವರಾಯರು ಕೂಡಾ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ ನೀಡಿದ್ದರು. ಪುತ್ತೂರು ತಾಲೂಕಿನ ಹಲವೆಡೆ ಪ್ರಾಥಮಿಕ ಶಾಲೆಗಳನ್ನು ಸ್ಥಾಪಿಸಿದ ಅವರು ಶಾಲೆಗಳಲ್ಲಿ ಸಹಕಾರ ತತ್ವದ ಪ್ರಚಾರಕ್ಕೆ ಕೂಡಾ ಪ್ರಯತ್ನಿಸಿದರು. ಅವರು ಗ್ರಾಮಗಳಲ್ಲಿ ಪಂಚಾಯತುಗಳನ್ನು ಸ್ಥಾಪಿಸಿ ಅದರ ಮೂಲಕ ಶಾಲೆಗಳನ್ನು ನಡೆಸುವ ಚಿಂತನೆ ನಡೆಸಿದರು. ಅವರು ಈ ಯೋಜನೆಯನ್ನು ಅಂದಿನ ಮದ್ರಾಸ್ ಸರಕಾರದ ಮುಂದಿಟ್ಟು ಸರಕಾರಕ್ಕೆ ಆ ಯೋಜನೆಯ ಮನವರಿಕೆ ಮಾಡಿಸಿ ಅದನ್ನು ಕಾರ್ಯಗತಗೊಳಿಸಲು ಬೇಕಾದ ಅನುಮತಿಯನ್ನು

ಕೂಡಾ ಪಡೆದರು. ಅದರಂತೆ ಪುತ್ತೂರಿನ ಹಲವೆಡೆ ಪ್ರಾಥಮಿಕ ಶಾಲೆಗಳನ್ನು ಸ್ಥಾಪಿಸಿದ ಅವರು ಶಾಲೆಗಳ ಮೇಲ್ವಿಚರಣೆಗೆ ಪಂಚಾಯತುಗಳನ್ನು ಆರಂಭಿಸಿದರು. ಹಲವು ಶಾಲೆಗಳಲ್ಲಿ ಅವರು ವಿದ್ಯಾರ್ಥಿ ಸ್ಟೇಶನರಿ ಸಂಘಗಳನ್ನು ಕೂಡಾ ಸ್ಥಾಪಿಸಿದರು[೨].

ಡಾ. ಶಿವರಾಮ ಕಾರಂತರ 'ಮಕ್ಕಳ ಕೂಟ', 'ಆಟದ ಮೂಲಕ ಶಿಕ್ಷಣ' ಮುಂತಾದ ಶೈಕ್ಷಣಿಕ ಪ್ರಯೋಗಗಳಿಗೆ ಶಿವರಾಯರು ಬೌದ್ಧಿಕ ಮತ್ತು ಆರ್ಥಿಕ ಬೆಂಬಲ ನೀಡಿದರು[೩]. ಮೊಳಹಳ್ಳಿ ಶಿವರಾಯರು, ಬೈಂದೂರು ರಾಮರಾವ್, ಹೊಸದುರ್ಗ ಗಣಪತಿ ರಾವ್, ಬೆಳ್ತಂಗಡಿ ಮಂಗೇಶರಾವ್, ಪುತ್ತೂರು ಬ್ರಹ್ಮಯ್ಯ ಶೆಟ್ಟಿ, ಧರ್ಮಸ್ಥಳದ ಚಂದಯ್ಯ ಹೆಗ್ಗಡೆಯವರು ಮುಂತಾದ ಗಣ್ಯರು ಒಟ್ಟು ಸೇರಿ ೧೯೧೫ರಲ್ಲಿ "ಪುತ್ತೂರು ವಿದ್ಯಾವರ್ಧಕ ಸಂಘ"ವನ್ನು ಸಹಕಾರಿ ತತ್ವದ ಆಧಾರದ ಮೇಲೆ ಸ್ಥಾಪಿಸಿದರು. ೧೯೧೫ ಡಿಸೆಂಬರ್ ೨೩ರಂದು ರಿಜಿಸ್ಟರ್‌ಗೊಂಡ ಈ ಸಂಘವು ಪುತ್ತೂರಿನಲ್ಲಿ ಸೆಕೆಂಡರಿ ಶಾಲೆಯೊಂದನ್ನು ಆರಂಭಿಸಿತು. ಈ ಶಾಲೆಯನ್ನು "ಬೋರ್ಡ್ ಹೈಸ್ಕೂಲು" ಎಂದು ಕರೆಯಲಾಗುತ್ತಿತ್ತು[೪]. ೧೯೨೧ರಲ್ಲಿ ಈ ಹೈಸ್ಕೂಲನ್ನು ಜಿಲ್ಲಾ ಬೋರ್ಡಿಗೆ ವರ್ಗಾಯಿಸಲಾಯಿತು. ಆ ನಂತರ ಸುಪ್ತಾವಸ್ಥೆಯಲ್ಲಿದ್ದ "ಪುತ್ತೂರು ವಿದ್ಯಾವರ್ಧಕ ಸಂಘ" ೧೨.೦೭.೧೯೬೫ರಲ್ಲಿ ಪುತ್ತೂರಿನ ಸಹಕಾರಿ ಟೌನ್ ಬ್ಯಾಂಕ್‌ನ ಕಟ್ಟಡದಲ್ಲಿ ವಿವೇಕಾನಂದ ಕಾಲೇಜನ್ನು ಆರಂಭಿಸಿತು[೫]. (ಈಗ ಈ ಕಾಲೇಜು ನೆಹರೂ ನಗರದಲ್ಲಿ ಸ್ವಂತ ಕಟ್ಟಡದಲ್ಲಿ ಕಾರ್ಯ ನಿರ್ವಹಿಸುತ್ತಿದೆ)

೧೯೨೩ರಲ್ಲಿ ಬೋರ್ಡ್ ಹೈಸ್ಕೂಲಿನ ವಿದ್ಯಾರ್ಥಿಗಳಿಗೆ ವಸತಿ ಮತ್ತು ಊಟದ ಸೌಲಭ್ಯವನ್ನು ಒದಗಿಸಲು "ಪುತ್ತೂರು ದ್ರಾವಿಡ ಬ್ರಾಹ್ಮಣ ಹಾಸ್ಟೇಲ್ ಸಹಕಾರಿ ಸಂಘ" ಸ್ಥಾಪಿಸಲ್ಪಟ್ಟಿತು[೬]. ಇದೇ ಹೈಸ್ಕೂಲಿನಲ್ಲಿ ೧೯೩೩ರಲ್ಲಿ "ಪುತ್ತೂರು ಬೋರ್ಡ್ ಹೈಸ್ಕೂಲು ಸ್ಟೂಡೆಂಟ್ಸ್ ಸ್ಟೇಶನರಿ ಸಹಕಾರಿ ಸಂಘ ಲಿಮಿಟೆಡ್" ಕೂಡಾ ಆರಂಭಿಸಲ್ಪಟ್ಟಿತು[೭].

ಜಿಲ್ಲೆಯ ಇತರ ಕಡೆಗಳಲ್ಲಿ ಕೂಡಾ ಸಹಕಾರಿ ತತ್ವದ ಆಧಾರದ ಮೇಲೆ ಹಲವು ಶಿಕ್ಷಣ ಸಂಸ್ಥೆಗಳು ಮತ್ತು ವಿದ್ಯಾರ್ಥಿ ಸ್ಟೇಶನರಿ ಸಹಕಾರಿ ಸಂಘಗಳು ಆರಂಭಗೊಂಡವು. ಈಗಲೂ ಹಲವು ಸಹಕಾರಿ ಸಂಘಗಳು ಶಾಲೆಗಳಿಗೆ ಪೀಠೋಪಕರಣ ಪೂರೈಕೆಗೆ ಧನಸಹಾಯ ನೀಡುವುದರ ಮೂಲಕ, ಪ್ರತಿಭಾವಂತ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ ಕೊಡುವುದರ ಮೂಲಕ ಶೈಕ್ಷಣಿಕ ಕ್ಷೇತ್ರವನ್ನು ಪ್ರೋತ್ಸಾಹಿಸುತ್ತಿವೆ.

**ಸಹಕಾರಿ ಶಿಕ್ಷಣ**

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಸಹಕಾರ ಕ್ಷೇತ್ರ ಸ್ವಾತಂತ್ರ್ಯ ಪೂರ್ವದಲ್ಲೇ ಸಹಕಾರ ಶಿಕ್ಷಣ, ತರಬೇತಿ ಮತ್ತು ಪ್ರಚಾರಕ್ಕೆ ಆದ್ಯತೆ ನೀಡಿತ್ತು. ಸಹಕಾರ ಸಂಘಗಳ ಸಿಬ್ಬಂದಿಗಳಿಗೆ ತರಬೇತಿ ನೀಡಲು ಆಗ ಅವರನ್ನು ಹೆಚ್ಚಾಗಿ ಕೊಯಮತ್ತೂರಿನ ಸಹಕಾರಿ ತರಬೇತಿ ಕೇಂದ್ರಕ್ಕೆ ಕಳುಹಿಸಿಕೊಡಲಾಗುತ್ತಿತ್ತು[೮]. ೧೯೩೮ರಲ್ಲಿ ಸಹಕಾರಿ ಶಿಕ್ಷಣ ಪ್ರಚಾರ ಕಾರ್ಯವನ್ನೇ ಮುಖ್ಯ ಉದ್ದೇಶವಾಗಿಟ್ಟುಕೊಂಡು ಮಂಗಳೂರಿನಲ್ಲಿ "ಸಹಕಾರ ಎಡ್ವಾನ್ಸ್‌ಮೆಂಟ್ ಸೊಸ್ಯಾಟಿ"ಯನ್ನು ಸ್ಥಾಪಿಸಲಾಯಿತು. ಈ ಸಂಸ್ಥೆ ಸಹಕಾರ ಶಿಕ್ಷಣ, ತರಬೇತಿ ಮತ್ತು ಪ್ರಚಾರಕ್ಕಾಗಿ ಸಭೆ ಸಮ್ಮೇಳನಗಳನ್ನು ಆಯೋಜಿಸುವ, ಸಹಕಾರಿ ಶಿಕ್ಷಣ ತರಗತಿಗಳನ್ನು ನಡೆಸುವ, ಪುಸ್ತಕ ಭಂಡಾರಗಳನ್ನು ತೆರೆಯುವ ಚಟುವಟಿಕೆಗಳನ್ನು ನಡೆಸುತ್ತಿತ್ತು. ೧೯೩೮ರ ನಂತರ ಕನ್ನಡ ಸಹಕಾರಿ ಪತ್ರಿಕೆಯನ್ನು ಕೂಡಾ ಸಹಕಾರ ಅಡ್ವಾನ್ಸ್‌ಮೆಂಟ್ ಸೊಸ್ಯಾಟಿಯ ಮೂಲಕ ಪ್ರಕಟಿಸಲಾಗುತ್ತಿತ್ತು.

ಸಹಕಾರ ಸಂಘಗಳ ಸದಸ್ಯರಿಗೆ ಮತ್ತು ಸಿಬ್ಬಂದಿಗಳಿಗೆ ತರಬೇತಿ ನೀಡುವ ಉದ್ದೇಶದಿಂದ ರಿಫ್ರೆಶರ್ ಕೋರ್ಸ್‌ಗಳು ಮತ್ತು ಸಹಕಾರಿ ಶಿಕ್ಷಣ ತರಗತಿಗಳನ್ನು ಆಯೋಜಿಸುವ ಕೆಲಸ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸ್ವಾತಂತ್ರ್ಯ ಪೂರ್ವದಲ್ಲೇ ನಡೆಯುತ್ತಿತ್ತು. ೧೯೪೦-೪೧ರಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಸಹಕಾರಿ ಸಂಘಗಳ ಪಂಚಾಯತರಿಗೆ ೨೦ ಕೇಂದ್ರಗಳಲ್ಲಿ ಸಹಕಾರ ತರಬೇತಿ ತರಗತಿಗಳನ್ನು ನಡೆಸಿತ್ತು. ಆ ತರಗತಿಗಳಿಗೆ ಜಿಲ್ಲೆಯ ೫೦ ಸಂಘಗಳ ೬೪೪ ಸದಸ್ಯರು ಮತ್ತು ೧೧೦೩ ಸದಸ್ಯರಲ್ಲದವರು ಹಾಜರಾಗಿದ್ದರು. ೧೯೪೦-೪೧ರ ಅವಧಿಯಲ್ಲಿ ಸಹಕಾರ ಸಂಘಗಳ ಸಿಬ್ಬಂದಿಗಳಿಗೆ ತರಬೇತಿ ನೀಡುವ ನಿಟ್ಟಿನಲ್ಲಿ ಒಬ್ಬ ವಿದ್ಯಾ ಇನ್‌ಸ್ಪೆಕ್ಟರರು ೪೨ ಕೇಂದ್ರಗಳಲ್ಲಿ ೨೪೯ ಸಂಘಗಳ ಪಂಚಾಯತರಿಗೆ ಸಹಕಾರಿ ಶಿಕ್ಷಣ ಮತ್ತು ತರಬೇತಿ ನೀಡಿದ್ದರು[೯].

ಸ್ವಾತಂತ್ರ್ಯ ನಂತರ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆ ೧೯೫೬ರಲ್ಲಿ ಮೈಸೂರು ರಾಜ್ಯದಲ್ಲಿ ವಿಲೀನಗೊಂಡ ಮೇಲೆ ಮೈಸೂರು ರಾಜ್ಯ ಸಹಕಾರ ಯೂನಿಯನ್‌ನ (ಈಗಿನ ಕರ್ನಾಟಕ ರಾಜ್ಯ ಸರ್ಕಾರ ಮಹಾಮಂಡಲ) ಮೇಲ್ವಿಚಾರಣೆಯಲ್ಲಿ ಜಿಲ್ಲೆಯಲ್ಲಿ ಕೂಡಾ ರಾಷ್ಟ್ರೀಯ ಸಹಕಾರ ಯೂನಿಯನ್ ೧೯೫೭ರಲ್ಲಿ ಫೆಬ್ರವರಿಯಲ್ಲಿ ಜಾರಿಗೊಳಿಸಿದ ಸದಸ್ಯ ಶಿಕ್ಷಣ ಯೋಜನೆಯನ್ನು ಅನುಷ್ಠಾನಗೊಳಿಸಲು ಕ್ರಮಕೈಗೊಳ್ಳಲಾಯಿತು. ೧೯೬೦ರಲ್ಲಿ ಅಸ್ತಿತ್ವಕ್ಕೆ ಬಂದ ಜಿಲ್ಲಾ ಸಹಕಾರಿ ಯೂನಿಯನ್ ಆನಂತರ ಜಿಲ್ಲೆಯಲ್ಲಿ ಮೈಸೂರು ರಾಜ್ಯ ಸಹಕಾರ ಯೂನಿಯನ್‌ನ ಮೇಲ್ವಿಚಾರಣೆಯಲ್ಲಿ ಸಹಕಾರ ಶಿಕ್ಷಣ ತರಬೇತಿ ಮತ್ತು ಸಹಕಾರ ಸಪ್ತಾಹ ಆಚರಣೆ ಮುಂತಾದ ಚಟುವಟಿಕೆಗಳನ್ನು ನಡೆಸಲು ಆರಂಭಿಸಿತು[೧೦].

ಪ್ರಸ್ತುತ ಜಿಲ್ಲಾ ಸಹಕಾರಿ ಯೂನಿಯನ್ ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಲದ ಮೇಲ್ವಿಚಾರಣೆಯಲ್ಲಿ ಸದಸ್ಯ ಶಿಕ್ಷಣ ಯೋಜನೆಯಡಿಯಲ್ಲಿ ಗ್ರಾಮೀಣ ಮಟ್ಟದಲ್ಲಿ ಮೂರು ಅಥವಾ ನಾಲ್ಕು ಸಹಕಾರ ಸಂಘಗಳನ್ನು ಗುಂಪುಗೂಡಿಸಿ ಕ್ಲಸ್ಟರ್ ಮಾದರಿಯಲ್ಲಿ ಆಡಳಿತ ಮಂಡಳಿ ಸದಸ್ಯರಿಗೆ, ಮಹಿಳಾ ಸದಸ್ಯರಿಗೆ ಹಾಗೂ ಯುವಜನರಿಗೆ ಅಗತ್ಯ ಇರುವ ವಿಷಯಗಳ ಕುರಿತು ತರಬೇತಿ ಕಾರ್ಯಕ್ರಮಗಳನ್ನು ನಡೆಸುತ್ತಾ ಬರುತ್ತಿದೆ. ಇದರ ಜೊತೆಗೆ ಜಿಲ್ಲಾ ಯೂನಿಯನ್ ಪ್ರೌಢಶಾಲಾ ಹಾಗೂ ಪದವಿ ಪೂರ್ವ ಕಾಲೇಜು ವಿದ್ಯಾರ್ಥಿಗಳಿಗೆ ಜಿಲ್ಲಾ ಮಟ್ಟದಲ್ಲಿ ಸಹಕಾರ ಕುರಿತ ಪ್ರಬಂಧ ಸ್ಪರ್ಧೆಗಳನ್ನು ಆಯೋಜಿಸುವುದರ ಮೂಲಕ ಸಹಕಾರ ಶಿಕ್ಷಣಕ್ಕೆ ಪ್ರೋತ್ಸಾಹ ನೀಡುತ್ತಿದೆ.

ಮಹಿಳೆಯರಲ್ಲಿ ಸಹಕಾರ ಶಿಕ್ಷಣಕ್ಕೆ ಪ್ರೋತ್ಸಾಹ ನೀಡುವ ಉದ್ದೇಶದಿಂದ ದಕ್ಷಿಣ ಕನ್ನಡ ಜಿಲ್ಲಾ ಸಹಕಾರ ಯೂನಿಯನ್ ಮಹಿಳಾ ಸದಸ್ಯ ಶಿಕ್ಷಣ ಯೋಜನೆಯಡಿಯಲ್ಲಿ ಮಹಿಳಾ ಶಿಕ್ಷಕಿಯರುಗಳ ಮೂಲಕ ಮಹಿಳಾ ಸಹಕಾರ ಸಂಘಗಳ ಆಡಳಿತ ಮಂಡಳಿ ಸದಸ್ಯರಿಗೆ ತರಬೇತಿ, ಮಹಿಳಾ ಸಹಕಾರ ಸಂಘಗಳ ಸಾಮಾನ್ಯ ಸದಸ್ಯರಿಗೆ ತರಬೇತಿ, ಸ್ವ ಸಹಾಯ ಸಂಘದ ಮಹಿಳಾ ಸದಸ್ಯರಿಗೆ ತರಬೇತಿ, ವಿವಿಧ ಸಹಕಾರ ಸಂಘಗಳ ಮಹಿಳಾ ಸದಸ್ಯರಿಗೆ ತರಬೇತಿ, ಯುವತಿಯರಿಗೆ ಸಹಕಾರಿ ತರಬೇತಿಗಳನ್ನು ನಡೆಸುತ್ತಿದೆ.[೧೧]

೧೯೮೭ರಲ್ಲಿ ಸಹಕಾರಿ ಶಿಕ್ಷಣ ತರಬೇತಿಗಾಗಿ ಮೂಡಬಿದ್ರೆಯಲ್ಲಿ ಸ್ಥಾಪಿಸಲ್ಪಟ್ಟ ಕೋ ಓಪರೇಟಿವ್ ಟ್ರೈನಿಂಗ್ ಸೆಂಟರ್ ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಲದ ಮೇಲ್ವಿಚಾರಣೆಯಲ್ಲಿ ಸಹಕಾರಿ ತರಬೇತಿ ತರಗತಿಗಳನ್ನು ನಡೆಸುತ್ತಿತ್ತು. ೨೦೦೭ರಲ್ಲಿ ಈ ಸಂಸ್ಥೆಯ ಹೆಸರನ್ನು "ಕರ್ನಾಟಕ ಇನ್‌ಸ್ಟಿಟ್ಯೂಟ್ ಆಫ್ ಕೋ ಓಪರೇಟಿವ್ ಮ್ಯಾನೇಜ್‌ಮೆಂಟ್ (Karnataka Institute of co-operative Management) ಎಂದು ಬದಲಾಯಿಸಲಾಯಿತು. ಈ ಸಂಸ್ಥೆ "ಡಿಪ್ಲೋಮ ಇನ್ ಕೋ– ಓಪರೇಟಿವ್ ಮ್ಯಾನೆಜ್‌ಮೆಂಟ್ ಕೋರ್ಸ್"ನ್ನು ನಡೆಸುತ್ತಿದೆ[೧೨].

## ಗ್ರಂಥಾಲಯ ಮತ್ತು ಪತ್ರಿಕೋದ್ಯಮ

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಸಹಕಾರಿ ಕ್ಷೇತ್ರ ಗ್ರಂಥಾಲಯಗಳನ್ನು ತೆರೆಯುವ ಮತ್ತು ನಿರ್ವಹಿಸುವ ಕೆಲಸವನ್ನು ಕೂಡಾ ನಡೆಸಿದೆ. ಜಿಲ್ಲೆಯ ಮೊದಲ ಸಹಕಾರ ಸಂಘವಾದ "ಪುತ್ತೂರು ರೂರಲ್ ಕ್ರೆಡಿಟ್ ಸೊಸ್ಯಾಟಿ" ೧೯೧೯ರಲ್ಲೇ ತನ್ನ ಕಟ್ಟಡದಲ್ಲಿ ಒಂದು ಗ್ರಂಥಾಲಯವನ್ನು ನಡೆಸುತ್ತಿತ್ತು[೧೩]. (೧೯೭೧ರಲ್ಲಿ ಸರಕಾರಿ ಗ್ರಂಥಾಲಯ ಪುತ್ತೂರಿನಲ್ಲಿ ಆರಂಭವಾದಾಗ ಬ್ಯಾಂಕಿನ ಗ್ರಂಥಾಲಯ ಪುಸ್ತಕಗಳನ್ನು ಸರಕಾರಿ ಗ್ರಂಥಾಲಯಕ್ಕೆ ದಾನ ನೀಡಲಾಯಿತು.) ೧೯೩೯ರಲ್ಲಿ ಸ್ಥಾಪಿಸಲ್ಪಟ್ಟ ಸಹಕಾರ ಅಡ್ವಾನ್ಸ್‌ಮೆಂಟ್ ಸೊಸ್ಯಾಟಿ ಕೂಡಾ ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ

ಬ್ಯಾಂಕಿನ ಸಹಾಯದಿಂದ ಪುಸ್ತಕ ಭಂಡಾರಗಳನ್ನು ಸ್ಥಾಪಿಸಿತ್ತು[೧೪]. ೧೯೬೦ರಲ್ಲಿ ಆರಂಭವಾದ ದಕ್ಷಿಣ ಕನ್ನಡ ಜಿಲ್ಲಾ ಸಹಕಾರಿ ಯೂನಿಯನ್ ಕೂಡಾ ಗ್ರಂಥಾಲಯವನ್ನು ನಡೆಸುತ್ತಾ ಬರುತ್ತಿದೆ.

ಪತ್ರಿಕೋದ್ಯಮಕ್ಕೆ ಕೂಡಾ ಸಹಕಾರಿ ರಂಗ ತನ್ನದೇ ಆದ ಕೊಡುಗೆ ನೀಡಿದೆ. ಮೊಳಹಳ್ಳಿ ಶಿವರಾಯರು "ಸದಾನಂದ ಸಹಕಾರಿ ಛಾಪಖಾನೆ ಸಂಘ" ಎಂಬ ಸಹಕಾರಿ ಮುದ್ರಣಾಲಯವನ್ನು ೧೯೨೬ರಲ್ಲಿ ಆರಂಭಿಸಿದರು. ೧೯೧೯ರಲ್ಲಿ ಮೊಳಹಳ್ಳಿ ಶಿವರಾಯರ ಸಂಪಾದಕತ್ವದಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಮೊದಲ ಸಹಕಾರಿ ಪತ್ರಿಕೆ "ಸಹಕಾರಿ" ಎಂಬ ಪತ್ರಿಕೆ ಆರಂಭವಾಯಿತು. ಮುಂದೆ ೧೯೨೯ರಲ್ಲಿ ಉಳ್ಳಾಲ ಮಂಗೇಶ್ ರಾವ್‌ರ ನೇತೃತ್ವದಲ್ಲಿ ಅದೇ ಪತ್ರಕ್ಕೆ "ಕನ್ನಡ ಸಹಕಾರಿ" ಎಂಬ ಹೆಸರಿನಲ್ಲಿ ಪ್ರಕಟಿಸಲ್ಪಡಿತಿತ್ತು[೧೫].ಈ ಪತ್ರಿಕೆಯನ್ನು ಮುಂದೆ ದಕ್ಷಿಣ ಜಿಲ್ಲಾ ಅಭಿವೃದ್ಧಿ ಸಹಕಾರಿ ಸಂಘ ಅಥವಾ ದಕ್ಷಿಣ ಕನ್ನಡ ಸಹಕಾರ ಅಡ್ವಾನ್ಸ್‌ಮೆಂಟ್ ಸೊಸ್ಯಾಟಿ ಪ್ರಕಟಿಸುತಿತ್ತು. ಜಿಲ್ಲಾ ಸಹಕಾರ ಯೂನಿಯನ್ ಅಸ್ಥಿತ್ವಕ್ಕೆ ಬಂದ ಮೇಲೆ ಈ ಪತ್ರಿಕೆ "ದಕ್ಷಿಣ ಕನ್ನಡ ಸಹಕಾರಿ" ಎಂಬ ಹೆಸರಿನೊಂದಿಗೆ ಪ್ರತಿ ತಿಂಗಳು ಪ್ರಕಟಿಸಲ್ಪಡುತ್ತಿದೆ. ಈ ಸಹಕಾರಿ ಪತ್ರಿಕೆ ಅದು ಆರಂಭವಾದಾಗಿನಿಂದಲೂ ಸಹಕಾರಕ್ಕೆ ಸಂಬಂಧಿಸಿದ ಮಾಹಿತಿಗಳನ್ನು ಪ್ರಕಟಿಸುತ್ತಾ ಬರುತ್ತಿದೆ. ಕನ್ನಡ ಸಹಕಾರಿ ಎಂಬ ಹೆಸರಿನಲ್ಲಿ ಪತ್ರಿಕೆ ಪ್ರಕಟಗೊಳ್ಳುತ್ತಿದ್ದಾಗ ಈ ಪತ್ರಿಕೆಯಲ್ಲಿ ಶಿಕ್ಷಣ ಸಂಬಂಧಿ ವಿಷಯಗಳು ಕೂಡಾ ಪ್ರಕಟಿಸಲ್ಪಡುತ್ತಿದ್ದವು.

**ಸಾಮಾಜಿಕ ಕ್ಷೇತ್ರ**

ಜನಸಾಮಾನ್ಯರ ಸಾಮಾಜಿಕ ಉನ್ನತಿಗೆ ಸಹಕಾರ ಉತ್ತಮ ಮಾರ್ಗ. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಸಹಕಾರ ಸಂಘಗಳು ಸಾಮಾಜಿಕ ಕಳಕಳಿಯನ್ನು ಹೊಂದಿದ್ದವು. ಕೆಲವು ಸಹಕಾರ ಸಂಘಗಳು ಸಮಾಜ ಕಲ್ಯಾಣಕ್ಕಾಗಿ ಕೆಲವು ಯೋಜನೆಗಳನ್ನು ಕೈಗೆತ್ತಿಕೊಂಡಿದ್ದವು. ಜಿಲ್ಲೆಯ ಹಲವು ಸಹಕಾರಿ ನೇತಾರರು ಕೂಡಾ ಸಮಾಜ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು.

ಸ್ವಾತಂತ್ರ್ಯ ಪೂರ್ವದಲ್ಲೇ ಜಿಲ್ಲೆಯ ಸಹಕಾರ ಸಂಘಗಳು ಸಾರ್ವಜನೋಪಕಾರ ನಿಧಿಗಳನ್ನು ಸಂಗ್ರಹಸಿ ಆ ನಿಧಿಯನ್ನು ಜನೋಪಯೋಗಿ ಕೆಲಸಗಳಿಗೆ ಬಳಸಿಕೊಳ್ಳುತ್ತಿದ್ದವು. ೧೯೪೧ರಲ್ಲಿ ಎಲ್ಲಾ ಸಹಕಾರ ಸಂಘಗಳ ಸಾರ್ವಜನೋಪಕಾರ ನಿಧಿಯ ಮೊತ್ತ ೧೫,೩೭೯ ಆಗಿತ್ತು. ಆ ವರ್ಷದಲ್ಲಿ ೧೬೦ ಸಂಘಗಳು ಸಾರ್ವಜನಿಕೋಪಯೋಗಿ ಕೆಲಸಗಳಿಗೆ ೧೬೦೨ ರೂ.ಗಳನ್ನು ಖರ್ಚು ಮಾಡಿದ್ದವು. ಇದರಲ್ಲಿ ಅರ್ಧಾಂಶ ಹಣವನ್ನು ಯುದ್ಧ ನಿಧಿ ವಂತಿಗೆಗಾಗಿ ವಿದ್ಯಾಭ್ಯಾಸಕ್ಕಾಗಿ, ಆರೋಗ್ಯ ರಕ್ಷಣೆಗಾಗಿ, ವಾಚನಾಲಯ ಮತ್ತು ಗ್ರಂಥ ಭಂಡಾರಗಳಿಗಾಗಿ, ಬಡಜನರ ಸಹಾಯಕ್ಕಾಗಿ ಮತ್ತು ಗ್ರಾಮ ನೈರ್ಮಲ್ಯಕ್ಕಾಗಿ ಬಳಸಿಕೊಳ್ಳಲಾಗಿತ್ತು[೧೬]. ಜಿಲ್ಲೆಯ ಮೊದಲ ಸಹಕಾರ ಸಂಘವಾದ

ಪುತ್ತೂರು ರೂರಲ್ ಕ್ರೆಡಿಟ್ ಸೊಸ್ಯಾಟಿ ೧೯೧೩ರಲ್ಲಿ ಪುತ್ತೂರಿನ ಬೀದಿಗಳಿಗೆ ಬೀದಿ ದೀಪ ಅಳವಡಿಸುವ ಮೂಲಕ, ೧೯೩೮ರಲ್ಲಿ ಪಶುತಳಿಯ ಅಭಿವೃದ್ಧಿಗಾಗಿ ಬೀಜದ ಹೋರಿಯೊಂದನ್ನು ಸಾಕುವುದರ ಮೂಲಕ (ಆದರೆ ಈ ಯೋಜನೆ ಯಶಸ್ವಿಯಾಗಲಿಲ್ಲ), ಗುಜರಾತಿನಲ್ಲಿ ಭೀಕರ ಭೂಕಂಪ ಸಂಭವಿಸಿದಾಗ ಸಂತ್ರಸ್ತರಿಗೆ ಧನ ಸಹಾಯ ನೀಡುವುದರ ಮೂಲಕ, ಪುತ್ತೂರಿನ ರಾಮಕೃಷ್ಣ ಸೇವಾ ಸಮಾಜದ ಅನಾಥ ಮಕ್ಕಳ ಪಾಲನೆಗೆ ಧನ ಸಹಾಯ ನೀಡುವುದರ ಮೂಲಕ ತನ್ನ ಸಾಮಾಜಿಕ ಕಳಕಳಿಯನ್ನು ವ್ಯಕ್ತಪಡಿಸಿದೆ[೧೭].

ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಎರಡನೆಯ ಜಾಗತಿಕ ಯುದ್ಧದ ಸಂದರ್ಭದಲ್ಲಿ ಆಹಾರದ ಅಭಾವ ತಲೆದೋರಿದಾಗ ಆಹಾರ ಧಾನ್ಯಗಳನ್ನು ವಿತರಣೆ ಮಾಡಲು ಸ್ಥಾಪಿಸಲ್ಪಟ್ಟ ಸೆಂಟ್ರಲ್ ಸ್ಟೋರ್‌ಗೆ ಧನ ಸಹಾಯ ಮಾಡುವ ಮೂಲಕ ಅಂದಿನ ವಿಷಮ ಪರಿಸ್ಥಿತಿಯಲ್ಲಿ ಜನಪರ ಕಾಳಜಿ ವ್ಯಕ್ತಪಡಿಸಿತ್ತು[೧೮]. ಪ್ರಸ್ತುತ ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಮಹಿಳೆಯರು ಹಾಗೂ ದುರ್ಬಲ ವರ್ಗದವರನ್ನು ಸ್ವಾವಲಂಬಿಗಳನ್ನಾಗಿಸುವ ನಿಟ್ಟಿನಲ್ಲಿ ಹಲವಾರು ಯೋಜನೆಗಳನ್ನು ಕೈಗೆತ್ತಿಕೊಂಡಿದೆ. ಸ್ವಸಹಾಯ ಗುಂಪುಗಳ ರಚನೆ ಮತ್ತು ಯಶಸ್ವಿ ಅನುಷ್ಠಾನ, ಮಹಿಳೆಯರ ಅಭಿವೃದ್ಧಿಗಾಗಿ ಮಹಿಳಾ ಅಭಿವೃದ್ಧಿ ಘಟಕದ ಸ್ಥಾಪನೆ, (ಈ ಘಟಕ ನಬಾರ್ಡ್‌ನ ಸಹಯೋಗದೊಂದಿಗೆ ೧೯೯೭ರಲ್ಲಿ ಆರಂಭಿಸಲ್ಪಟ್ಟಿದೆ) ಸರಕಾರದ ಯೋಜನೆಗಳಾದ ಯಶಸ್ವಿನಿ ಸಹಕಾರಿ ರೈತ ಆರೋಗ್ಯ ರಕ್ಷಣ ಯೋಜನೆ, ಚೈತನ್ಯ ವಿಮಾ ಯೋಜನೆಯ ಯಶಸ್ವಿ ಅನುಷ್ಠಾನ, ಮೊಬೈಲ್ ಬ್ಯಾಂಕಿಂಗ್ ಯೋಜನೆ ಮುಂತಾದ ಯೋಜನೆಗಳ ಮೂಲಕ ಸಮಾಜದ ಅಭಿವೃದ್ಧಿಗಾಗಿ ಶ್ರಮಿಸುತ್ತಿದೆ.

ಸಮಾಜದಲ್ಲಿ ಹಿಂದುಳಿದ ವರ್ಗಗಳು ಮತ್ತು ಶೋಷಿತ ವರ್ಗಗಳನ್ನು ಸಹಕಾರ ತತ್ವದ ಆಧಾರದ ಮೇಲೆ ಸಂಘಟಿಸಿ ಅವರ ಜೀವನ ಮಟ್ಟವನ್ನು ಸುಧಾರಿಸುವ ಯತ್ನವನ್ನು ಕೂಡ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಸಹಕಾರಿ ರಂಗ ಸ್ವಾತಂತ್ರ್ಯ ಪೂರ್ವದಲ್ಲೇ ಕೈಗೊಂಡಿತ್ತು. ೧೯೨೬-೨೭ರ ಅವಧಿಯಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೮೦ ಹಿಂದುಳಿದ ವರ್ಗಗಳ ಸಹಕಾರಿ ಸಂಘಗಳು ಅಸ್ತಿತ್ವದಲ್ಲಿದ್ದವು[೧೯]. ಸ್ವಾತಂತ್ರ್ಯ ಪೂರ್ವದಲ್ಲಿ ಈ ಸಂಘಗಳು ತಮ್ಮ ಉದ್ದೇಶಗಳನ್ನು ಈಡೇರಿಸಲು ಹೆಚ್ಚು ಸಫಲವಾಗದಿದ್ದರೂ ಇತ್ತೀಚಿನ ದಶಕಗಳಲ್ಲಿ ಹಿಂದುಳಿದ ವರ್ಗಗಳ ಸಹಕಾರ ಸಂಘಗಳು ಈ ವರ್ಗಗಳ ಸಾಮಾಜಿಕ ಅಭಿವೃದ್ಧಿಯಲ್ಲಿ ಹೆಚ್ಚು ಪರಿಣಾಮಕಾರಿ ಪಾತ್ರ ವಹಿಸುತ್ತಿವೆ. ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಪ್ರಾಥಮಿಕ ಸಹಕಾರಿ ಬ್ಯಾಂಕ್‌ಗಳ ಸಹಯೋಗದೊಂದಿಗೆ ಕೇಂದ್ರ ಸರಕಾರದ ಯೋಜನೆಯಾದ ಸ್ವ-ಸಹಾಯ ಗುಂಪುಗಳ ಯೋಜನೆಯನ್ನು ಜಿಲ್ಲೆಯಲ್ಲಿ 'ನವೋದಯ' ಎಂಬ ಹೆಸರಿನೊಂದಿಗೆ ಅನುಷ್ಠಾನಗೊಳಿಸಿದ ಮೇಲೆ

ಜಿಲ್ಲೆಯ ಹಿಂದುಳಿದ ವರ್ಗಗಳ ಜನರು ಹೆಚ್ಚು ಸಂಖ್ಯೆಯಲ್ಲಿ ಈ ಸ್ವ-ಸಹಾಯ ಗುಂಪುಗಳ ಸದಸ್ಯರಾಗಿ ತಮ್ಮ ಸಾಮಾಜಿಕ ಉನ್ನತಿಯನ್ನು ಕಂಡುಕೊಳ್ಳುತ್ತಿದ್ದಾರೆ. ಹಿಂದುಳಿದ ವರ್ಗಗಳ ಸಾಮಾಜಿಕ ಪರಿವರ್ತನೆಯಲ್ಲಿ ಸ್ವ-ಸಹಾಯ ಗುಂಪುಗಳು ಇಂದು ಮಹತ್ವದ ಪಾತ್ರ ವಹಿಸುತ್ತಿವೆ. ಈ ಯೋಜನೆ ಈ ವರ್ಗಗಳ ಜನರನ್ನು ಸ್ವಾವಲಂಭಿಗಳನ್ನಾಗಿಸುವಲ್ಲಿ, ಕುಡಿತದಂತಹ ಸಾಮಾಜಿಕ ಪಿಡುಗನ್ನು ನಿವಾರಿಸುವಲ್ಲಿ ಮಹತ್ತರ ಪಾತ್ರ ನಿರ್ವಹಿಸುತ್ತಿದೆ.

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಸಹಕಾರಿ ರಂಗ ಜಿಲ್ಲೆಯ ಮಹಿಳೆಯರ ಸಾಮಾಜಿಕ ಸ್ಥಿತಿಗತಿಗಳಲ್ಲೂ ಮಹತ್ತರ ಬದಲಾವಣೆ ತಂದಿದೆ. ಸ್ವಾತಂತ್ರ್ಯ ಪೂರ್ವದಲ್ಲೇ ಮಹಿಳೆಯರನ್ನು ಸಹಕಾರ ತತ್ವದ ಆಧಾರದಲ್ಲಿ ಸಂಘಟಿಸುವ ಮತ್ತು ಅವರಲ್ಲಿ ಸ್ವ-ಉದ್ಯೋಗಗಳನ್ನು ಪ್ರೋತ್ಸಾಹಿಸುವ ಉದ್ದೇಶದೊಂದಿಗೆ ಮಹಿಳಾ ಸಹಕಾರಿ ಸಂಘಗಳು ಸ್ಥಾಪಿಸಲ್ಪಟ್ಟಿದ್ದವು. ಆದರೆ ಈ ಸಂಘಗಳು ಹೆಚ್ಚು ಸಂಘಟಿತವಾಗಿರಲಿಲ್ಲ ಮತ್ತು ಕೇವಲ ಉನ್ನತ ವರ್ಗದ ಮತ್ತು ಶಿಕ್ಷಿತ ಮಹಿಳೆಯರು ಮಾತ್ರ ಅದರ ಚಟುವಟಿಕೆಗಳಲ್ಲಿ ಹೆಚ್ಚು ಭಾಗಿಗಳಾಗುತ್ತಿದ್ದರು. ಆದರೆ ಸ್ವಾತಂತ್ರ್ಯಾ ನಂತರ ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರ ಸಂಘಗಳು ಅಸ್ಥಿತ್ವಕ್ಕೆ ಬಂದಿದ್ದು ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಅದರ ಚಟುವಟಿಕೆಗಳಲ್ಲೂ ಭಾಗವಹಿಸುತ್ತಿದ್ದಾರೆ. ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕಿನಲ್ಲಿ "ಮಹಿಳಾ ಅಭಿವೃದ್ಧಿ ಘಟಕ" ೧೯೯೭ರಲ್ಲಿ ಸ್ಥಾಪನೆಯಾದ ಮೇಲೆ ಈ ಘಟಕವು ಗ್ರಾಮೀಣ ಮಹಿಳೆಯರಲ್ಲಿ ಸ್ವ-ಉದ್ಯೋಗದ ಬಗ್ಗೆ ಆಸಕ್ತಿಯನ್ನು ಹೆಚ್ಚಿಸಿ ಆ ಮೂಲಕ ಸ್ವಾವಲಂಬನೆಯನ್ನು ಸಾಧಿಸುವಲ್ಲಿ ಮಹಿಳೆಯರಿಗೆ ನೆರವಾಗಲು ಶ್ರಮಿಸುತ್ತಿದೆ. ಈ ಘಟಕದ ಸ್ಥಾಪನೆಯ ನಂತರ ಟೈಲರಿಂಗ್, ಬ್ಯೂಟಿ ಪಾರ್ಲರ್, ಡೈರಿ ಯೋಜನೆ, ಎಸ್.ಟಿ.ಡಿ.ಬೂತ್, ಹಪ್ಪಳ, ಸಂಡಿಗೆ ತಯಾರಿ, ಸಿದ್ಧ ಉಡುಪು ತಯಾರಿ, ಪಶು ಆಹಾರ ತಯಾರಿ ಘಟಕ, ಲಘು ಪಾನೀಯ ತಯಾರಿ ಘಟಕ ಮುಂತಾದ ಘಟಕಗಳನ್ನು ನಡೆಸಲು ಗ್ರಾಮೀಣ ಮಹಿಳೆಯರು ಮುಂದೆ ಬರುತ್ತಿದ್ದಾರೆ[೨೦]. ಮತ್ತು ಕೆಲವು ಘಟಕಗಳು ಸ್ಥಾಪನೆಯಾಗಿ ಯಶಸ್ವಿಯಾಗಿ ಮುನ್ನಡೆಯುತ್ತಿವೆ. ನವೋದಯ ಸ್ವ-ಸಹಾಯ ಗುಂಪುಗಳಲ್ಲಿ ಮಹಿಳಾ ಸ್ವ-ಸಹಾಯ ಗುಂಪುಗಳು ಹೆಚ್ಚಿನ ಸಂಖ್ಯೆಯಲ್ಲಿದ್ದು ಗ್ರಾಮೀಣ ಮಹಿಳೆಯರ ಸಾಮಾಜಿಕ ಹಾಗೂ ಆರ್ಥಿಕ ಜೀವನದಲ್ಲಿ ಅವು ಪರಿಣಾಮಕಾರಿ ಬದಲಾವಣೆಗಳನ್ನು ತರುತ್ತಿವೆ. ಪ್ರಸ್ತುತ ಜಿಲ್ಲೆಯಲ್ಲಿ ೧೩,೯೩೪ ಮಹಿಳಾ ಸ್ವ-ಸಹಾಯ ಗುಂಪುಗಳಿವೆ.

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಸಹಕಾರಿ ನೇತಾರರು ಕೂಡಾ ಸಮಾಜ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಮೊಳಹಳ್ಳಿ ಶಿವರಾಯರು ಅಸ್ಪೃಶ್ಯತಾ ನಿವಾರಣೆ ಮತ್ತು ಮಧ್ಯಪಾನ ವಿರೋಧಿ ಕಾರ್ಯಕ್ರಮಗಳನ್ನು ಸ್ವಾತಂತ್ರ್ಯ ಪೂರ್ವದಲ್ಲೇ ಹಮ್ಮಿಕೊಂಡಿದ್ದರು. ಸ್ತ್ರೀಯರ ಹಾಗೂ ಶೋಷಿತ ವರ್ಗಗಳ ಬಗ್ಗೆ ವಿಶೇಷ ಕಾಳಜಿ ಹೊಂದಿದ್ದ ಅವರು ಸ್ತ್ರೀಯರ ಸಹಕಾರ ಸಂಘಗಳು

ಹಾಗೂ ಪರಿಶಿಷ್ಟ ಜಾತಿಯವರ ಸಹಕಾರಿ ಸಂಘಗಳ ಸ್ಥಾಪನೆಗೆ ಕೂಡಾ ಕಾರಣಕರ್ತರಾಗಿದ್ದಾರೆ[೨೧]. ಜಿಲ್ಲೆಯ ಇನ್ನೋರ್ವ ಪ್ರಮುಖ ಸಹಕಾರಿ ನೇತಾರರಾಗಿದ್ದ ಬಂಟ್ವಾಳ ನಾರಾಯಣ ನಾಯಕರು ೧೯೩೬ರಲ್ಲಿ ಹರಿಜನ ಸೇವಕ ಸಂಘದ ಕಾರ್ಯದರ್ಶಿಯಾಗಿ ದೇವಾಲಯ ಪ್ರವೇಶ ಕಾರ್ಯಕ್ರಮಗಳನ್ನು ಸಂಘಟಸಿದ್ದರು. ಸ್ವಾತಂತ್ರ್ಯ ನಂತರವು ಶೋಷಿತ ವರ್ಗಗಳ ಬಗ್ಗೆ ವಿಶೇಷ ಕಾಳಜಿ ಹೊಂದಿದ್ದ ಅವರು ಜಿಲ್ಲಾ ಹರಿಜನ ಸೇವಕ ಸಂಘದ ಅಧ್ಯಕ್ಷರಾಗಿ ಪರಿಶಿಷ್ಟ ಜಾತಿಯ ಜನರ ಅಭಿವೃದ್ಧಿಗಾಗಿ ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದರು[೨೨]. ಪೇರಾಜೆ ಶ್ರೀನಿವಾಸರಾಯರು, ಉರಿಮಜಲು ವೆಂಕಪ್ಪಯ್ಯನವರು, ಟಿ.ಎ. ಪೈಯವರು, ವಾರಣಾಸಿ ಸುಬ್ರಾಯ ಭಟ್ಟರು ಮುಂತಾದ ಸಹಕಾರಿ ನೇತಾರರು ಕೂಡಾ ಸಮಾಜ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು.

## ೬.೨ ಜಿಲ್ಲೆಯ ಆರ್ಥಿಕ ಅಭಿವೃದ್ಧಿಗೆ ಸಹಕಾರಿ ರಂಗದ ಕೊಡುಗೆ

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಆರ್ಥಿಕ ಅಭಿವೃದ್ಧಿಯಲ್ಲಿ ಸಹಕಾರಿ ಸಂಘಗಳು ಪ್ರಮುಖ ಪಾತ್ರ ವಹಿಸಿವೆ. ಜಿಲ್ಲೆಯ ಗ್ರಾಮೀಣ ಅಭಿವೃದ್ಧಿಗೂ ಸಹಕಾರಿ ರಂಗ ಗಣನೀಯ ಕೊಡುಗೆ ನೀಡಿದೆ. ಜಿಲ್ಲೆಯ ಕೃಷಿ, ಕೈಗಾರಿಕೆ, ಹೈನುಗಾರಿಕೆಗಳ ಅಭಿವೃದ್ಧಿಯಲ್ಲಿ ಸಹಕಾರಿ ರಂಗ ಮಹತ್ತರ ಪಾತ್ರ ವಹಿಸಿದೆ. ಸಾಕಷ್ಟು ಉದ್ಯೋಗಾವಕಾಶಗಳನ್ನು ಸಹಕಾರಿ ರಂಗ ಸೃಷ್ಟಿಸಿದೆ. ಇಂದು ಸಹಕಾರಿ ಸಂಸ್ಥೆಗಳು ಉಭಯ ಜಿಲ್ಲೆಗಳಲ್ಲೂ ಪ್ರಬಲ ಆರ್ಥಿಕ ಸಂಸ್ಥೆಗಳಾಗಿ ಬೆಳೆದಿವೆ.

ಜಿಲ್ಲೆಯ ಕೃಷಿ ಕ್ಷೇತ್ರದ ವಿಸ್ತರಣೆಯಲ್ಲಿ ಸಹಕಾರಿ ಸಂಘಗಳು ಸ್ವಾತಂತ್ರ್ಯ ಪೂರ್ವದಿಂದಲೇ ಪ್ರಮುಖ ಪಾತ್ರ ವಹಿಸುತ್ತಾ ಬಂದಿವೆ. ಸ್ವಾತಂತ್ರ್ಯ ಪೂರ್ವದಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ರೈತರ ಸಾಲದ ಅವಶ್ಯಕತೆಯನ್ನು ಸೀಮಿತ ನೆಲೆಯಲ್ಲಿ ಪೂರೈಸುತ್ತಿದ್ದ ಗ್ರಾಮೀಣ ಲೇವಾದೇವಿ ಸಂಘಗಳು ಇಂದು ಪ್ರಾಥಮಿಕ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕುಗಳಾಗಿ ಗ್ರಾಮಗಳಲ್ಲಿ ಕಾರ್ಯವೆಸಗುತ್ತಿದ್ದು ಅಲ್ಪಾವಧಿ ಬೆಳೆ ಸಾಲ, ದೀರ್ಘಾವಧಿ ಕೃಷಿ ಹಾಗೂ ಕೃಷಿಯೇತರ ಉದ್ದೇಶದ ಸಾಲಗಳನ್ನು ವಿತರಿಸುವುದರೊಂದಿಗೆ, ಗ್ರಾಮೀಣ ಜನತೆಗೆ ದೈನಂದಿನ ಅವಶ್ಯಕತೆಯ ಸಾಮಾಗ್ರಿಗಳ ಪೂರೈಕೆ, ಕೃಷಿಯುತ್ಪನ್ನ ಮಾರಾಟದ ವ್ಯವಸ್ಥೆ, ರಸಗೊಬ್ಬರ ಮತ್ತು ಇತರ ಕೃಷಿಕರ ಅವಶ್ಯಕತೆಗಳನ್ನು ಕಾಲಕಾಲಕ್ಕೆ ಒದಗಿಸುವುದು, ಪಡಿತರ ಸಾಮಾಗ್ರಿಗಳ ಪೂರೈಕೆ ಮುಂತಾದ ಚಟುವಟಿಕೆಗಳೊಂದಿಗೆ ಗ್ರಾಮೀಣ ಅರ್ಥವ್ಯವಸ್ಥೆಯಲ್ಲಿ ಪರಿಣಾಮಕಾರಿ ಪಾತ್ರ ವಹಿಸುತ್ತಿವೆ. ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕಿನ ಸಹಯೋಗದಿಂದ ಪ್ರಾಥಮಿಕ ಸಹಕಾರಿ ಬ್ಯಾಂಕುಗಳು ತಮ್ಮ ಗ್ರಾಮಗಳ ವ್ಯಾಪ್ತಿಯಲ್ಲಿ ಸ್ವ-ಸಹಾಯ ಗುಂಪುಗಳನ್ನು ರಚಿಸಿ ಯಶಸ್ವಿಯಾಗಿ ಅನುಷ್ಠಾನಗೊಳಿಸುತ್ತಿದ್ದು ಇದು ಗ್ರಾಮೀಣಾಭಿವೃದ್ಧಿಗೆ ಪೂರಕವಾಗಿದೆ. ಸ್ವ-ಸಹಾಯ ಗುಂಪುಗಳು ಗ್ರಾಮೀಣ ಪ್ರದೇಶದ ಜನರನ್ನು

ಸ್ವಾವಲಂಭಿಗಳನ್ನಾಗಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತಿವೆ. ಕ್ಯಾಂಡಲ್, ಅಗರಬತ್ತಿ, ಕೊಡೆಗಳು, ಸಿದ್ಧ ಉಡುಪು ತಯಾರಿ, ಹೈನುಗಾರಿಕೆ, ಮಲ್ಲಿಗೆ ಕೃಷಿ ಇತ್ಯಾದಿಗಳ ಬಗ್ಗೆ ತರಬೇತಿಯನ್ನು ಪಡೆದು ಸಹಕಾರಿ ಬ್ಯಾಂಕುಗಳಿಂದ ಸಾಲ ಪಡೆದು ಈ ಚಟುವಟಿಕೆಗಳಲ್ಲಿ ತೊಡಗಿಕೊಂಡಿರುವ ಸ್ವ-ಸಹಾಯ ಗುಂಪುಗಳ ಸದಸ್ಯರು ಇಂದು ತಮ್ಮ ಆರ್ಥಿಕ ಬಲವನ್ನು ಹೆಚ್ಚಿಸಿಕೊಂಡಿದ್ದಾರೆ. ಪ್ರಸ್ತುತ ಜಿಲ್ಲೆಯಲ್ಲಿ ೨೨,೧೮೭ ನವೋದಯ ಸ್ವ-ಸಹಾಯ ಗುಂಪುಗಳಿವೆ.

ಸ್ವಾತಂತ್ರ್ಯ ಪೂರ್ವದಲ್ಲಿ ರೈತರನ್ನು ಋಣಬಾಧೆಯಿಂದ ಮುಕ್ತಗೊಳಿಸುವ ಉದ್ದೇಶದೊಂದಿಗೆ ಆರಂಭವಾದ ಭೂ ಅಡಮಾನ ಬ್ಯಾಂಕುಗಳು ೧೯೬೪ರ ನಂತರ ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕುಗಳಾಗಿ ಸಣ್ಣ ನೀರಾವರಿ ಯೋಜನೆ, ಭೂ ಅಭಿವೃದ್ಧಿ ಯೋಜನೆ, ರೇಶ್ಮೆ ಅಭಿವೃದ್ಧಿ ಯೋಜನೆ, ಕೃಷಿ ಯಾಂತ್ರೀಕರಣ, ತೋಟಗಾರಿಕೆ ಯೋಜನೆ ಮತ್ತು ಕೃಷಿಯೇತರ ಚಟುವಟಿಕೆಗಳಿಗೆ ಸಾಲ ಒದಗಿಸುವ ಮೂಲಕ ಕೃಷಿ ಮತ್ತು ಕೃಷಿಯೇತರ ಚಟುವಟಿಕೆಗಳನ್ನು ಪ್ರೋತ್ಸಾಹಿಸುತ್ತಿವೆ. ಮತ್ತು ಆ ಮೂಲಕ ಜಿಲ್ಲೆಯಲ್ಲಿ ಕೃಷಿ ಚಟುವಟಿಕೆಗಳ ಅಭಿವೃದ್ಧಿಗೆ ಕಾರಣವಾಗಿವೆ.

೧೯೬೨ರಲ್ಲಿ ಟಿ.ಎ. ಪೈಯವರ ನೇತೃತ್ವದಲ್ಲಿ ಆರಂಭಗೊಂಡ ದಕ್ಷಿಣ ಕನ್ನಡ ಕೃಷಿ ಅಭಿವೃದ್ಧಿಗೆ ಸಹಕಾರಿ ಸಂಘ (ಸ್ಕ್ಯಾಡ್ಸ್) ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕೃಷಿ ಅಭಿವೃದ್ಧಿಯಲ್ಲಿ ಪರಿಣಾಮಕಾರಿ ಪಾತ್ರ ವಹಿಸುತ್ತಿದೆ. ಕೃಷಿಗೆ ಅಗತ್ಯವಾದ ನೀರಾವರಿ ಪಂಪುಸೆಟ್‌ಗಳು, ಪವರ್ ಟಿಲ್ಲರ್, ಸ್ಪ್ರೆಯರ್‌ಗಳು, ಟ್ರ್ಯಾಕ್ಟರ್, ಹಾರೆ-ಪಿಕ್ಕಾಸು, ಪೈಪು ಫಿಟ್ಟಿಂಗ್‌ಗಳು ಮುಂತಾದ ಸಲಕರಣೆಗಳನ್ನು ಮಿತದರದಲ್ಲಿ ಪೂರೈಸುವ ಮೂಲಕ ಸ್ಕ್ಯಾಡ್ಸ್ ಕೃಷಿಕರಿಗೆ ನೆರವಾಗುತ್ತಿದೆ. ಸ್ಕ್ಯಾಡ್ಸ್‌ನಿಂದಾಗಿ ಜಿಲ್ಲೆಯಲ್ಲಿ ಸ್ವಯಂ ನೀರಾವರಿ (Self irrigation) ಮತ್ತು ಅರೆಯಾಂತ್ರೀಕರಣದ ದಿಕ್ಕಿನಲ್ಲಿ ವ್ಯಾಪಕ ಪ್ರಗತಿಯಾಗಿದೆ. ಗ್ರಾಮೀಣ ರೈತರಿಗೆ ಉದ್ಯೋಗ ತರಬೇತಿ, ಕೃಷಿ ಉಪಕರಣಗಳ ನಿರ್ವಹಣೆ ಮತ್ತು ದುರಸ್ತಿ ತರಬೇತಿ, ಒಳನಾಡಿನಲ್ಲಿ ಕೊಳವೆ ಬಾವಿಗಳನ್ನು ಕೊರೆಯುವ ಸುಲಭ ಯೋಜನೆ, ರೈತರ ಕೃಷಿ ಅವಶ್ಯಕತೆಗಳ ಹಾಗೂ ಕೃಷಿ ಉತ್ಪನ್ನಗಳ ರಿಯಾಯತಿ ದರದ ಸಾಗಾಟ ವ್ಯವಸ್ಥೆ ಹೊಸ ಬೆಳೆಗಳು ಹಾಗೂ ಲಾಭದಾಯಕ ಬೆಳೆಗಳ ಮಾಹಿತಿ ನೀಡುವ ಕೃಷಿ ವಿಚಾರ ಸಂಕಿರಣಗಳನ್ನು ಆಯೋಜಿಸುವುದು ಮುಂತಾದ ಚಟುವಟಿಕೆಗಳ ಮೂಲಕ ಸ್ಕ್ಯಾಡ್ಸ್ ಗ್ರಾಮೀಣ ಅಭಿವೃದ್ಧಿಗೂ ಕೊಡುಗೆ ನೀಡಿದೆ[೨೩]. ಕೃಷಿ ಯಂತ್ರೋಪಕರಣಗಳ ದುರಸ್ತಿ ಸೇವೆಗಾಗಿ ಮಂಗಳೂರಿನ ಯೆಯ್ಯಾಡಿ ಪ್ರದೇಶದಲ್ಲಿ ೧೯೭೪ರಲ್ಲಿ ವರ್ಕ್‌ಶಾಪನ್ನು ಸ್ಥಾಪಿಸಿರುವ ಸ್ಕ್ಯಾಡ್ಸ್ ಜಿಲ್ಲೆಯ ಕೈಗಾರೀಕರಣಕ್ಕೂ ಕೊಡುಗೆ ನೀಡಿದೆ. ಈ ವರ್ಕ್‌ಶಾಪ್ ಈಗ ಸಣ್ಣ ಕೈಗಾರಿಕಾ ಘಟಕವಾಗಿದೆ. ೧೯೮೩ರಲ್ಲಿ ಗ್ರಾಮೀಣ ನಿರುದ್ಯೋಗಿ ರೈತ ಯುವಕರಿಗೆ ಕೃಷಿ ಯಂತ್ರೋಪಕರಣಗಳ ಉಚಿತ

ತರಬೇತಿ ನೀಡುವ ಉದ್ದೇಶದಿಂದ "ಟಿ.ಎ. ಪೈ ಸ್ಮಾರಕ ಗ್ರಾಮೀಣ ಉದ್ಯೋಗ ತರಬೇತಿ ಮತ್ತು ಮಾರ್ಗದರ್ಶನ ಕೇಂದ್ರ"ವನ್ನು ತೆರೆದಿರುವ ಸ್ಕ್ಯಾಡ್ಸ್ ಗ್ರಾಮೀಣ ಯುವಕರಿಗೆ ಸ್ವ-ಉದ್ಯೋಗ ಅವಕಾಶವನ್ನು ಸೃಷ್ಟಿಸುತ್ತಿದೆ[೨೪].

೧೯೯೧ರಲ್ಲಿ ತೋಟಗಾರಿಕಾ ಉತ್ಪನ್ನಗಳಿಗೆ ಸೂಕ್ತ ಮಾರುಕಟ್ಟೆ ಒದಗಿಸುವ ಉದ್ದೇಶದಿಂದ ಆರಂಭವದ ದಕ್ಷಿಣ ಕನ್ನಡ ಭಂಡಸಾಲೆ ಸಹಕಾರಿ ಸಂಘ (ಈಗ ದಕ್ಷಿಣ ಕನ್ನಡ ಕೃಷಿಕರ ಸಹಕಾರಿ ಮಾರಾಟ ಸಂಘ ಎಂದು ಕರೆಯಲ್ಪಡುತ್ತಿದೆ), ೧೯೭೩ರಲ್ಲಿ ಆರಂಭವಾದ ಕ್ಯಾಂಪ್ಕೋ, ೨೦೦೧ರಲ್ಲಿ ಆರಂಭವಾದ ಮಾಸ್ ಕೃಷಿ ಉತ್ಪನ್ನಗಳಿಗೆ ಮುಖ್ಯವಾಗಿ ತೋಟಗಾರಿಕಾ ಉತ್ಪನ್ನಗಳಿಗೆ ಸೂಕ್ತ ಮಾರುಕಟ್ಟೆ ಒದಗಿಸುವ ಮೂಲಕ ಜಿಲ್ಲೆಯಲ್ಲಿ ಕೃಷಿ ಅಭಿವೃದ್ಧಿಗೆ ಪೂರಕವಾಗಿ ಕಾರ್ಯ ನಿರ್ವಹಿಸುತ್ತಿವೆ. ತಾಲೂಕು ಕೃಷಿಯುತ್ಪನ್ನ ಮಾರಾಟ ಸಹಕಾರಿ ಸಂಘಗಳು (ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೫ ಇಂತಹ ಸಂಘಗಳಿವೆ) ಕೂಡಾ ಗ್ರಾಮಾಂತರ ಸಹಕಾರ ಸಂಘಗಳಿಗೆ ಪಡಿತರ ಆಹಾರ ಸಾಮಾಗ್ರಿಗಳು, ರಾಸಾಯನಿಕ ಗೊಬ್ಬರ, ಉತ್ತಮ ತಳಿಯ ಬೀಜ, ಕ್ರಿಮಿನಾಶಕಗಳನ್ನು ಒದಗಿಸುವ ಮೂಲಕ ಕೃಷಿ ಚಟುವಟಿಕೆಗಳನ್ನು ಪ್ರೋತ್ಸಾಹಿಸುತ್ತಿವೆ. ಕ್ಯಾಂಪ್ಕೋ ಸಂಸ್ಥೆಯಿಂದ ಪುತ್ತೂರಿನ ಕೆಮ್ಮಿಂಜೆಯಲ್ಲಿ ೧೯೮೬ರಲ್ಲಿ ಆರಂಭವಾದ ಚಾಕಲೇಟ್ ಫ್ಯಾಕ್ಟರಿ ಜಿಲ್ಲೆಯಲ್ಲಿ ಪ್ರಮುಖ ಫ್ಯಾಕ್ಟರಿಯಾಗಿದ್ದು ಜಿಲ್ಲೆ ಇಂದು ಚಾಕಲೇಟ್ ತಯಾರಿಕೆಯಲ್ಲಿ ಪ್ರಮುಖ ಪಾತ್ರ ವಹಿಸಲು ಕಾರಣವಾಗಿದೆ[೨೫]. (ಈ ಫ್ಯಾಕ್ಟರಿ ಆಗ್ನೇಯ ಏಷ್ಯಾದ ಬೃಹತ್ ಚಾಕಲೇಟ್ ಫ್ಯಾಕ್ಟರಿ ಎಂದು ಗುರುತಿಸಲ್ಪಟ್ಟಿದೆ)

ಹೈನುಗಾರಿಕೆಯನ್ನು ಪ್ರೋತ್ಸಾಹಿಸುವ ಮೂಲಕ ಜಿಲ್ಲೆಯ ಸಹಕಾರಿ ರಂಗ ಜಿಲ್ಲೆಯ ಆರ್ಥಿಕ ಅಭಿವೃದ್ಧಿಗೆ ಕಾರಣವಾಗಿದೆ. ಹೈನುಗಾರಿಕೆ ಜಿಲ್ಲೆಯಲ್ಲಿ ಇಂದು ಬೃಹತ್ ಉದ್ಯಮವಾಗಿ ಬೆಳೆದಿರುವುದಕ್ಕೆ ಸಹಕಾರಿ ರಂಗವೇ ಕಾರಣ. ಜಿಲ್ಲೆಯ ಹಳ್ಳಿ ಹಳ್ಳಿಗಳಲ್ಲಿ ಇಂದು ಕೃಷಿಯ ಜೊತೆಗೆ ಹೈನುಗಾರಿಕೆಯು ಒಂದು ಉಪವೃತ್ತಿಯಾಗಿ ಹೈನುಗಾರಿಕೆಯಲ್ಲಿ ನಿರತರಾದವರ ಆರ್ಥಿಕ ಮಟ್ಟ ಸುಧಾರಿಸಲು ಕಾರಣವಾಗಿದೆ. ೧೯೮೬ರಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಸಹಕಾರಿ ಹಾಲು ಉತ್ಪಾದಕರ ಒಕ್ಕೂಟ ಅಸ್ತಿತ್ವಕ್ಕೆ ಬಂದ ಮೇಲೆ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆ ಹೈನುಗಾರಿಕೆಯಲ್ಲಿ ಸ್ವಾವಲಂಬನೆಯನ್ನು ಸಾಧಿಸಿದೆ. ಒಕ್ಕೂಟದ ವತಿಯಿಂದ ಜಿಲ್ಲೆಯ ವಿವಿಧೆಡೆ ಸ್ಥಾಪಿತವಾಗಿರುವ ಮಿಲ್ಕ್ ಪಾರ್ಲರ್‌ಗಳು ನಿರುದ್ಯೋಗಿ ಯುವಕ, ಯುವತಿಯರಿಗೆ ಉದ್ಯೋಗಾವಕಾಶಗಳನ್ನು ದೊರಕಿಸಿ ಕೊಟ್ಟಿವೆ. ಮಂಗಳೂರಿನ ಕುಲಶೇಖರದಲ್ಲಿ ದಕ್ಷಿಣ ಕನ್ನಡ ಹಾಲು ಒಕ್ಕೂಟದ ಮೇಲ್ವಿಚಾರಣೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಮಂಗಳೂರು ಡೈರಿ ಕೂಡಾ ಸಾಕಷ್ಟು ಉದ್ಯೋಗಾವಕಾಶಗಳನ್ನು ಸೃಷ್ಟಿಸಿದೆ.

ಜಿಲ್ಲೆಯಲ್ಲಿ ಇಂದು ಮೀನುಗಾರಿಕೆ ಪ್ರಗತಿಯನ್ನು ಹೋದಿರುವುದಕ್ಕೆ ಕೂಡಾ ಬಹುಮಟ್ಟಿಗೆ ಸಹಕಾರಿ ಸಂಘಗಳೇ ಕಾರಣ. ಮೀನುಗಾರರ ಸಹಕಾರಿ ಸಂಘಗಳು ಮೀನುಗಾರರಿಗೆ ಮೀನುಗಾರಿಕೆ ಅಗತ್ಯವಿರುವ ವಸ್ತುಗಳ ಖರೀದಿಗೆ ಬೇಕಾದ ಸಾಲ ಸೌಲಭ್ಯ ಒದಗಿಸುವ ಮೂಲಕ, ಮೀನಿಗೆ ಮಾರುಕಟ್ಟೆ ಸೌಲಭ್ಯ ಒದಗಿಸುವ ಮೂಲಕ ಜಿಲ್ಲೆಯಲ್ಲಿ ಮೀನುಗಾರಿಕಾ ಉದ್ಯಮ ಅಭಿವೃದ್ಧಿ ಹೊಂದಲು ಕಾರಣವಾಗಿವೆ. ಜಿಲ್ಲೆಯಲ್ಲಿ ಇಂದು ಹಲವರು ಜೇನು ಸಾಕಣೆ, ಕೋಳಿ ಸಾಕಣೆ, ಕುಂಬಾರಿಕೆ, ನೇಯ್ಗೆ, ಗುಡಿ ಕೈಗಾರಿಕೆಗಳಂತಹ ಉಪವೃತ್ತಿಗಳನ್ನು ಅವಲಂಭಿಸಿ ಆರ್ಥಿಕ ಅಭಿವೃದ್ಧಿ ಸಾಧಿಸುತ್ತಿರುವುದಕ್ಕೆ ಕೂಡಾ ಸಹಕಾರಿ ಸಂಘಗಳು ಕಾರಣವಾಗಿವೆ.

ಜಿಲ್ಲೆಯಲ್ಲಿ ಹಲವು ಕೈಗಾರಿಕಾ ಸಹಕಾರಿ ಸಂಘಗಳು ಬೀಡಿ ಕಾರ್ಮಿಕರ ಸಹಕಾರಿ ಸಂಘಗಳು ಅಸ್ಥಿತ್ವದಲ್ಲಿದ್ದು ಕೈಗಾರಿಕೆ ಮತ್ತು ಬೀಡಿ ಉದ್ಯಮ ಪ್ರಗತಿ ಸಾಧಿಸಲು ಕಾರಣವಾಗಿವೆ. ಮಹಿಳೆಯರ, ಹಿಂದುಳಿದ ವರ್ಗಗಳ ಸಹಕಾರಿ ಸಂಘಗಳು ಈ ವರ್ಗಗಳ ಆರ್ಥಿಕ ಅಭಿವೃದ್ಧಿಗೆ ತಮ್ಮದೇ ಆದ ಕೊಡುಗೆ ಸಲ್ಲಿಸುತ್ತಿವೆ. ಇವಲ್ಲದೆ ಇನ್ನು ವಿವಿಧ ರೀತಿಯ ಇತರ ಸಹಕಾರ ಸಂಘಗಳು ಜಿಲ್ಲೆಯಲ್ಲಿದ್ದು ಅವುಗಳು ಜಿಲ್ಲೆಯ ಆರ್ಥಿಕ ಅಭಿವೃದ್ಧಿಯಲ್ಲಿ ತಮ್ಮದೇ ಆದ ಕೊಡುಗೆ ನೀಡಿವೆ.

ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಅದು ಆರಂಭವಾದಾಗಿನಿಂದ ಇಂದಿನವರೆಗೂ ಜಿಲ್ಲೆಯ ಆರ್ಥಿಕ ಅಭಿವೃದ್ಧಿಗೆ ಸಮರ್ಥವಾಗಿ ಸೇವೆ ಸಲ್ಲಿಸುತ್ತಾ ಬಂದಿದೆ. ಕೃಷಿಕರಿಗೆ ಕೃಷಿ ಅಭಿವೃದ್ಧಿಗಾಗಿ ಅಲ್ಪಾವಧಿ, ಮಧ್ಯಮಾವಧಿ ಹಾಗೂ ದೀರ್ಘಾವಧಿ ಸಾಲ ಪೂರೈಸುವ ಮೂಲಕ, ಗುಡಿ ಕೈಗಾರಿಕೆ ಹಾಗೂ ಕಿರು ಕೈಗಾರಿಕೆಗಳನ್ನು ಸ್ಥಾಪಿಸಲು ಬೇಕಾದ ಧನ ಸಹಾಯ ಒದಗಿಸುವ ಮೂಲಕ, ಮೀನುಗಾರಿಕೆ, ಕೋಳಿ ಸಾಕಣೆ ಹೈನುಗಾರಿಕೆ ಮುಂತಾದ ಉಪವೃತ್ತಿಗಳನ್ನು ನಡೆಸಲು ಸಾಲ ಒದಗಿಸುವ ಮೂಲಕ ಜಿಲ್ಲೆಯ ಸಮಗ್ರ ಅಭಿವೃದ್ಧಿಗೆ ಶ್ರಮಿಸುತ್ತಿದೆ. ಜಿಲ್ಲಾ ಸಮಗ್ರ ಗ್ರಾಮೀಣಾಭಿವೃದ್ಧಿ ಯೋಜನೆಯ ಫಲಾನುಭವಿಗಳಿಗೆ ಸಾಲ ಸೌಲಭ್ಯ ಒದಗಿಸುವ ಮೂಲಕ ಗ್ರಾಮೀಣ ಪ್ರದೇಶದ ದುರ್ಬಲ ವರ್ಗದ ಜನರನ್ನು ಬಡತನ ರೇಖೆಯಿಂದ ಮೇಲೆತ್ತಲು ಶ್ರಮಿಸುತ್ತಿರುವ ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಆ ಮೂಲಕ ಗ್ರಾಮೀಣಾಭಿವೃದ್ಧಿಗೂ ಕೊಡುಗೆ ಸಲ್ಲಿಸುತ್ತಿದೆ[೨೬].

ಜಿಲ್ಲೆಯಲ್ಲಿರುವ ಸಹಕಾರಿ ಸಂಘಗಳು ಸಾಕಷ್ಟು ಉದ್ಯೋಗಾವಕಾಶಗಳನ್ನು ಸೃಷ್ಟಿಸಿ ನಿರುದ್ಯೋಗ ಸಮಸ್ಯೆಗೂ ಸ್ವಲ್ಪ ಮಟ್ಟಿನ ಪರಿಹಾರ ಒದಗಿಸಿಕೊಟ್ಟಿದೆ. ಉಳಿತಾಯ ಯೋಜನೆಗಳ ಮೂಲಕ ಜನರಲ್ಲಿ ಉಳಿತಾಯಕ್ಕೆ ಪ್ರೋತ್ಸಾಹ ನೀಡುವ ಕೆಲಸವನ್ನು ಸಹಾ ಸಹಕಾರಿ ಸಂಘಗಳು ಮಾಡುತ್ತಲಿವೆ. ಸ್ವ-ಸಹಾಯ ಗುಂಪುಗಳ ಸದಸ್ಯರಿಗೆ ಕಡ್ಡಾಯ ಉಳಿತಾಯ ಯೋಜನೆ ಕೂಡಾ ಜಾರಿಯಲ್ಲಿದೆ.

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಶೈಕ್ಷಣಿಕ ಕ್ಷೇತ್ರದಲ್ಲಿ ಹಲವಾರು ಹೊಸ ಪ್ರಯೋಗಗಳನ್ನು ನಡೆಸಲು ಸಹಕಾರಿ ಕ್ಷೇತ್ರ ಕಾರಣವಾಗಿದೆ. ಸಹಕಾರಿ ಶಿಕ್ಷಣ ತರಬೇತಿ ಮತ್ತು ಪ್ರಚಾರಕ್ಕೆ ಕೂಡಾ ಜಿಲ್ಲೆಯ ಸಹಕಾರಿ ಕ್ಷೇತ್ರ ಸ್ವಾತಂತ್ರ್ಯ ಪೂರ್ವದಲ್ಲೇ ಕ್ರಮಗಳನ್ನು ಕೈಗೊಂಡಿರುವುದನ್ನು ಕಾಣಬಹುದು. ದಕ್ಷಿಣ ಕನ್ನಡ ಜಿಲ್ಲಾ ಸಹಕಾರಿ ಯೂನಿಯನ್ ಕೂಡಾ ೧೯೬೦ರ ನಂತರ ಈ ಕಾರ್ಯವನ್ನು ಮುಂದುವರಿಸುತ್ತಾ ಬರುತ್ತಿದೆ. ಅದರ ಚಟುವಟಿಕೆಗಳು ಇನ್ನಷ್ಟು ವಿಸ್ತಾರಗೊಂಡು ಶಾಲಾ-ಕಾಲೇಜುಗಳಲ್ಲಿ ಸಹಕಾರ ತತ್ವವನ್ನು ಇನ್ನೂ ಹೆಚ್ಚು ಪಸರಿಸುವ ಕೆಲಸಗಳಾಗಿ ಆ ಮೂಲಕ ಜಿಲ್ಲೆಯ ಯುವಜನತೆಯನ್ನು ಸಹಕಾರ ಚಳುವಳಿಯತ್ತ ಆಕರ್ಷಿಸುವ ಪ್ರಯತ್ನಗಳಾಗಬೇಕಾಗಿದೆ.

ಜಿಲ್ಲೆಯ ಸಹಕಾರಿ ಕ್ಷೇತ್ರ ಜಿಲ್ಲೆಯ ಸಾಮಾಜಿಕ ಕ್ಷೇತ್ರದ ಪರಿವರ್ತನೆಯಲ್ಲಿ ಪ್ರಮುಖ ಪಾತ್ರ ವಹಿಸಿದೆ. ಸ್ವಾತಂತ್ರ್ಯ ಪೂರ್ವದಲ್ಲೇ ಮಹಿಳೆಯರ ಮತ್ತು ಹಿಂದುಳಿದ ಹಾಗೂ ಶೋಷಿತ ವರ್ಗಗಳ ಸಾಮಾಜಿಕ ಸ್ಥಿತಿಗತಿಗಳನ್ನು ಸುಧಾರಿಸುವ ಪ್ರಯತ್ನಗಳು ಸಹಕಾರಿ ಕ್ಷೇತ್ರದಿಂದಾಗಿ ಈ ವರ್ಗಗಳ ಸಹಕಾರ ಸಂಘಗಳು ಸ್ಥಾಪಿಸಲ್ಪಟ್ಟವಾದರೂ ಈ ಪ್ರಯತ್ನಗಳು ಹೆಚ್ಚು ಯಶಸ್ವಿಯಾಗಲಿಲ್ಲ. ಸ್ವಾತಂತ್ರ್ಯಾ ನಂತರದಲ್ಲಿ ಅದರಲ್ಲೂ ಇತ್ತೀಚಿನ ವರ್ಷಗಳಲ್ಲಿ ಸಹಕಾರಿ ಕ್ಷೇತ್ರ ಮಹಿಳೆಯರು ಮತ್ತು ದುರ್ಬಲ ವರ್ಗಗಳ ಜನರ ಸಾಮಾಜಿಕ ಜೀವನದಲ್ಲಿ ಮಹತ್ವದ ಬದಲಾವಣೆಗಳನ್ನು ತಂದಿದೆ. ಸಾಮಾಜಿಕ ಪಿಡುಗುಗಳ ನಿವಾರಣೆಯಲ್ಲಿ ಕೂಡಾ ಇಂದು ಸಹಕಾರಿ ರಂಗ ಪರಿಣಾಮಕಾರಿ ಪಾತ್ರ ವಹಿಸುತ್ತಿದೆ.

ಜಿಲ್ಲೆಯ ಆರ್ಥಿಕ ಅಭಿವೃದ್ಧಿಯಲ್ಲೂ ಕೂಡಾ ಸಹಕಾರಿ ರಂಗ ಇಂದು ಮಹತ್ವದ ಪಾತ್ರ ವಹಿಸುತ್ತಿದೆ. ಜಿಲ್ಲೆಯಲ್ಲಿ ಕೃಷಿ, ಕೈಗಾರಿಕೆ ಮತ್ತು ಉಪವೃತ್ತಿಗಳ ಅಭಿವೃದ್ಧಿಯಲ್ಲಿ ಸಹಕಾರಿ ರಂಗದ ಕೊಡುಗೆ ಅಪಾರ. ಗ್ರಾಮೀಣಾಭಿವೃದ್ಧಿಯಲ್ಲಿ ಸಹಕಾರಿ ರಂಗ ಇಂದು ನಿರ್ಣಾಯಕ ಪಾತ್ರ ವಹಿಸುತ್ತಿದೆ. ಜಿಲ್ಲೆಯ ಆರ್ಥಿಕ ಕ್ಷೇತ್ರವನ್ನು ಅಭಿವೃದ್ಧಿಪಡಿಸುವ ನಿಟ್ಟಿನಲ್ಲಿ ಇನ್ನಷ್ಟು ಕೆಲಸಗಳನ್ನು ಸಹಕಾರಿ ರಂಗ ಕೈಗೆತ್ತಿಕೊಳ್ಳಬಹುದು. ಜಿಲ್ಲೆಯಲ್ಲಿ ಕೃಷಿ ಚಟುವಟಿಕೆಗಳ ಅಭಿವೃದ್ಧಿಯ ದೃಷ್ಟಿಯಿಂದ ಸಹಕಾರಿ ಸಂಶೋಧನಾ ಮತ್ತು ಅಭಿವೃದ್ಧಿ ಕೇಂದ್ರವನ್ನು ತೆರೆಯುವುದು, ಜಿಲ್ಲೆಯಲ್ಲಿ ತರಕಾರಿ ಮತ್ತು ಹಣ್ಣು ಹಂಪಲುಗಳನ್ನು ಬೆಳೆಸಲು ಪ್ರೋತ್ಸಾಹ ನೀಡುವುದು ಮತ್ತು ಅವುಗಳಿಗೆ ಸಹಕಾರಿ ಮಾರುಕಟ್ಟೆ ವ್ಯವಸ್ಥೆ ಒದಗಿಸುವುದು, ಕೃಷಿ ಉತ್ಪನ್ನಗಳ ಮೌಲ್ಯವರ್ಧನೆಗೆ ವ್ಯವಸ್ಥೆ ರೂಪಿಸುವುದು, ಕೃಷಿ ಉತ್ಪನ್ನಗಳ ರಫ್ತನ್ನು ಸಹಕಾರಿ ವ್ಯವಸ್ಥೆಯ ಮೂಲಕ ಕೈಗೊಳ್ಳುವುದು, ಸಹಕಾರಿ ಕಾರ್ಖಾನೆಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಸ್ಥಾಪಿಸುವುದು, ಆರ್ಥಿಕ ಸಂಕಷ್ಟ ಎದುರಿಸುತ್ತಿರುವ ಸಹಕಾರಿ ಕಾರ್ಖಾನೆಗಳನ್ನು ಪುನರ್ ಸಂಘಟಿಸುವುದು, ಎಲ್ಲಾ ವಿಧದ ಸಹಕಾರ ಉದ್ಯಮಗಳನ್ನು ಪ್ರೋತ್ಸಾಹಿಸುವುದು, ಗ್ರಾಮೀಣ ಅರ್ಥವ್ಯವಸ್ಥೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿರುವ ಸ್ವ-ಸಹಾಯ ಗುಂಪುಗಳ ಚಟುವಟಿಕೆಗಳಿಗೆ ಹೆಚ್ಚಿನ ಪ್ರೋತ್ಸಾಹ ನೀಡುವುದು, ಗ್ರಾಮೀಣಾಭಿವೃದ್ಧಿಗೆ ಇನ್ನಷ್ಟು ಮಹತ್ವ ನೀಡುವುದು ಮುಂತಾದ

ಚಟುವಟಿಕೆಗಳ ಮೂಲಕ ಜಿಲ್ಲೆಯ ಸಹಕಾರಿ ಕ್ಷೇತ್ರ ಜಿಲ್ಲೆಯ ಆರ್ಥಿಕ ಅಭಿವೃದ್ಧಿಯನ್ನು ಇನ್ನಷ್ಟು ಸಾಧಿಸಬಹುದು.

## ಕೊನೆ ಟಿಪ್ಪಣಿ

೧. ದಿ ಪುತ್ತೂರು ಕೋ-ಓಪರೇಟಿವ್ ಟೌನ್ ಬ್ಯಾಂಕ್

ಇದರ "ಅಮೃತ ಮಹೋತ್ಸವ"ದ ಸ್ಮರಣ ಸಂಚಿಕೆ, ೧೯೮೫, ಪು.ಸಂ. ೬, ೭

೨. ಡಾ. ಗಣನಾಥ ಎಕ್ಕಾರು

ಹಿರಿಯ ಸಹಕಾರಿ ಮೊಳಹಳ್ಳಿ ಶಿವರಾಯ, ೨೦೦೯, ಪು.ಸಂ. ೧೬, ೯, ೨೦

೩. ಅದೇ ಪು. ಸಂ. ೨೧, ೨೨

೪. ಡಾ. ಪೀಟರ್ ವಿಲ್ಸನ್ ಪ್ರಭಾಕರ್ ಮತ್ತು

ಡಾ. ವಿಘ್ನೇಶ್ವರ ವರ್ಮುಡಿ

ಪುತ್ತೂರು ತಾಲೂಕು ಇತಿಹಾಸ ದರ್ಪಣ, ವಿವೇಕಾನಂದ ಕಾಲೇಜು ಪುತ್ತೂರು, ೨೦೦೫, ಪು.ಸಂ. ೮೭

೫. ಡಾ. ಶ್ರೀಧರ್ ನಾಯಕ್

ಪುತ್ತೂರಲ್ಲಾದ ಸಹಕಾರ ಚಳುವಳಿ, "ಶತಕಾಭರಣ" ಸ್ಮರಣ ಸಂಚಿಕೆ ೨೦೦೫ ರಲ್ಲಿ ಪ್ರಕಟವಾದ ಲೇಖನ

೬. ಡಾ. ಗಣನಾಥ ಎಕ್ಕಾರು

ಹಿರಿಯ ಸಹಕಾರಿ ಮೊಳಹಳ್ಳಿ ಶಿವರಾಯ, ೨೦೦೯, ಪು.ಸಂ.೧೫

೭. ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ "ವಜ್ರಮಹೋತ್ಸವ"ದ ಸ್ಮರಣ ಸಂಚಿಕೆ, ೧೯೭೩

೮. ಕನ್ನಡ ಸಹಕಾರಿ, ಅಕ್ಟೋಬರ್ ೧೯೪೧ರ ಸಂಚಿಕೆ, ಪು.ಸಂ. ೨೪

೯. ಅದೇ ಪು. ಸಂ. ೨೪

೧೦. ದಕ್ಷಿಣ ಕನ್ನಡ ಜಿಲ್ಲಾ ಸಹಕಾರಿ ಯೂನಿಯನ್ ನಿಯಮಿತ ಮಂಗಳೂರು ಇದರ ೨೦೦೮-೦೯ನೇ ಸಾಲಿನ ವಾರ್ಷಿಕ ವರದಿ.

೧೧. ಈ ಮಾಹಿತಿಯನ್ನು ಸಾವಿತ್ರಿ ರೈ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ದ.ಕ. ಜಿಲ್ಲಾ ಸಹಕಾರಿ ಯೂನಿಯನ್ ಮಂಗಳೂರು ಇವರಿಂದ ಪಡೆದುಕೊಳ್ಳಲಾಗಿದೆ.

೧೨. ಈ ಮಾಹಿತಿಯನ್ನು ಕರ್ನಾಟಕ ಇನ್‌ಸ್ಟಿಟ್ಯೂಟ್ ಆಫ್ ಕೋ-ಓಪರೇಟಿವ್ ಮ್ಯಾನೇಜ್‌ಮೆಂಟ್ ಮೂಡಬಿದ್ರೆಯ ಕಚೇರಿಯಿಂದ ಪಡೆದುಕೊಳ್ಳಲಾಗಿದೆ.

೧೩. ಎನ್. ಸುಬ್ರಹ್ಮಣ್ಯಂ

'ಹಿನ್ನೋಟ-ಮುನ್ನೋಟ', 'ಬೆಳೆದು ಬಂದ ಹಾದಿ' ದಿ ಪುತ್ತೂರು ಕೋ-ಓಪರೇಟಿವ್ ಟೌನ್ ಬ್ಯಾಂಕ್ ಲಿ. ಪುತ್ತೂರು ಇದರ ಸ್ಮರಣ ಸಂಚಿಕೆ ೨೦೦೪ರಲ್ಲಿ ಪ್ರಕಟಗೊಂಡ ಲೇಖನ.

೧೪. ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕಿನ "ಸುವರ್ಣ ಮಹೋತ್ಸವದ" ಸ್ಮರಣ ಸಂಚಿಕೆ ೧೯೬೫, ಪು.ಸಂ.೧೧

೧೫. ಅಭಿಶಂಕರ್ ಕೆ. (ಪ್ರಸಂ.)

ಗಝೆಟಿಯರ್ ಆಫ್ ಇಂಡಿಯಾ, ಕರ್ನಾಟಕ ಸ್ಟೇಟ್ ಗಝೆಟಿಯರ್ – ಸೌತ್ ಕೆನರಾ ಡಿಸ್ಟ್ರಿಕ್ಟ್ ೧೯೭೩, ಪು.ಸಂ. ೬೮೭

೧೬. ಕನ್ನಡ ಸಹಕಾರಿ ಅಕ್ಟೋಬರ್, ೧೯೪೧ರ ಸಂಚಿಕೆ, ಪು.ಸಂ. ೨೩

೧೭. ಎನ್. ಸುಬ್ರಹ್ಮಣ್ಯಂ

'ಹಿನ್ನೋಟ–ಮುನ್ನೋಟ', 'ಬೆಳೆದು ಬಂದ ಹಾದಿ' ದಿ ಪುತ್ತೂರು ಕೋ–ಓಪರೇಟಿವ್ ಟೌನ್ ಬ್ಯಾಂಕ್ ಲಿ.ನ ಸ್ಮರಣ ಸಂಚಿಕೆ ೨೦೦೪ರಲ್ಲಿ ಪ್ರಕಟಗೊಂಡ ಲೇಖನ.

೧೮. ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಲಿ. ಮಂಗಳೂರು ಇದರ "ಸುವರ್ಣ ಮಹೋತ್ಸವ"ದ ಸ್ಮರಣ ಸಂಚಿಕೆ, ಪು.ಸಂ. ೧೧

೧೯. ಅಭಿಶಂಕರ್ ಕೆ. (ಪ್ರಸಂ.)

ಗಝೆಟಿಯರ್ ಆಫ್ ಇಂಡಿಯಾ, ಕರ್ನಾಟಕ ಸ್ಟೇಟ್ ಗಝೆಟಿಯರ್ – ಸೌತ್ ಕೆನರಾ ಡಿಸ್ಟ್ರಿಕ್ಟ್ ೧೯೭೩, ಪು.ಸಂ. ೬೮೨

೨೦. ಎಂ.ಎನ್. ಇಂದಿರಾ ಕುಮಾರಿ

ಗ್ರಾಮೀಣ ಮಹಿಳಾ ಅಭಿವೃದ್ಧಿಗಾಗಿ ಜಿಲ್ಲಾ ಬ್ಯಾಂಕಿನ ಮಹಿಳಾ ಅಭಿವೃದ್ಧಿ ಘಟಕ, 'ನವೋದಯ' ಸ್ಮರಣ ಸಂಚಿಕೆ ೨೦೦೦ದಲ್ಲಿ ಪ್ರಕಟವಾದ ಲೇಖನ

೨೧. ಡಾ. ಗಣನಾಥ ಎಕ್ಕಾರು

ಹಿರಿಯ ಸಹಕಾರಿ ಮೊಳಹಳ್ಳಿ ಶಿವರಾಯ, ೨೦೦೯, ಪು.ಸಂ. ೯, ೧೫

೨೨. "ಸಮಾಜ ಮೆಚ್ಚಿದ ಸಹಕಾರಿ" ಶ್ರೀ ಬಂಟ್ವಾಳ ನಾರಾಯಣ ನಾಯರ್ ಷಷ್ಠ್ಯಬ್ದ ಸಮಿತಿ ಪ್ರಕಟಣೆ, ೧೯೭೪, ಪು.ಸಂ. ೧೯

೨೩. ಕರಂಬಳ್ಳಿ ಸಂಜೀವ ಶೆಟ್ಟಿ

ಸಹಕಾರ ಚಳುವಳಿಗೆ ದಕ್ಷಿಣ ಕನ್ನಡದ ರೈತರ ಅಭಿಮಾನ ಪೂರ್ಣ ಕೊಡುಗೆ "ಸ್ಕ್ಯಾಡ್ಸ್", ದ.ಕ. ಕೃಷಿ ಅಭಿವೃದ್ಧಿ ಸಹಕಾರ ಸಂಘ ಲಿ. ಇದರ ರಜತ ಮಹೋತ್ಸವದ ಸ್ಮರಣ ಸಂಚಿಕೆ ೧೯೮೮ರಲ್ಲಿ ಪ್ರಕಟವಾದ ಲೇಖನ, ಪು.ಸಂ, ೬

೨೪. ರವಿರಾಜ ಹೆಗ್ಡೆ

ಜಿಲ್ಲೆಯ ಸಹಕಾರಿ ಉದ್ಯಮಗಳು, "ಚೈತನ್ಯ" ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲಾ ಸುವರ್ಣ ಸಹಕಾರಿ ಉತ್ಸವ ೧೯೯೮ರ ಸ್ಮರಣ ಸಂಚಿಕೆಯಲ್ಲಿ ಪ್ರಕಟವಾದ ಲೇಖನ.

೨೫. ಆರ್. ರಂಗಮೂರ್ತಿ

ದ ಸ್ಟೋರಿ ಆಫ್ ಸ್ವೀಟ್ ಸಕ್ಸೆಸ್ ಆಫ್ ಎ ಕೋ–ಓಪರೇಟಿವ್ ಜಾಯಂಟ್ "ಕ್ಯಾಂಪ್ಕೋ" ಪು. ಸಂ.

೨೬. ಬಿ. ಮಾಧವ

ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕಿನ ಸಾಧನೆಗಳು, ದ.ಕ. ಕೃಷಿ ಅಭಿವೃದ್ಧಿ ಸಹಕಾರ ಸಂಘ, ಲಿ. ಇದರ ರಜತ ಮಹೋತ್ಸವದ ಸ್ಮರಣ ಸಂಚಿಕೆ, ೧೯೮೮ರಲ್ಲಿ ಪ್ರಕಟವಾದ ಲೇಖನ.

**********

# ಅಧ್ಯಾಯ ೭

## ಶೋಧನದ ಫಲಿತ

ಪರಸ್ಪರ ಸಹಾಯ, ಜೊತೆಗೂಡಿ ದುಡಿಯುವುದು ಎನ್ನುವ ಅರ್ಥದಲ್ಲಿ ಸಹಕಾರ ಪದ್ಧತಿ ಪ್ರಾಚೀನ ಕಾಲದಿಂದಲೂ ಪ್ರಪಂಚದಲ್ಲಿ ಅಸ್ಥಿತ್ವದಲ್ಲಿದ್ದರೂ ಅದು ಒಂದು ಆರ್ಥಿಕ ಪರಿಕಲ್ಪನೆಯಾಗಿ ಬಳಸಲ್ಪಟ್ಟಿದ್ದು ಕೇವಲ ಎರಡು ಶತಮಾನಗಳ ಹಿಂದೆ. ಬಂಡವಾಳಶಾಹಿ ಶೋಷಣೆಯನ್ನು ಅಂತ್ಯಗೊಳಿಸುವ ಉದ್ದೇಶದೊಂದಿಗೆ ಇಂಗ್ಲೆಂಡಿನಲ್ಲಿ ಹತ್ತೊಂಬತ್ತನೆಯ ಶತಮಾನದಲ್ಲಿ ಆರಂಭಗೊಂಡ ಸಹಕಾರ ಚಳುವಳಿ ಬಂಡವಾಳಶಾಹಿ ಮತ್ತು ಸಮಾಜವಾದದ ನಡುವಿನ ಸುವರ್ಣ ಮಾಧ್ಯಮವಾಗಿ ಅವೆರಡರ ಗುಣಗಳನ್ನು ಒಳಗೊಂಡು ಪ್ರಪಂಚದ ವಿವಿಧ ಭಾಗಗಳಿಗೆ ಪಸರಿಸಿತು. ಇಂದು ವಿಶ್ವದಾದ್ಯಂತ ನಾನಾ ರೂಪಗಳಲ್ಲಿ ಈ ಚಳುವಳಿ ಅಭಿವ್ಯಕ್ತಗೊಂಡಿದೆ. ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣಗಳು ಸಹಕಾರಿ ವ್ಯವಸ್ಥೆಗೆ ಸವಾಲು ಒಡ್ಡುತ್ತಿರುವ ಈ ಕಾಲಘಟ್ಟದಲ್ಲಿ ಸಹಕಾರ ಚಳುವಳಿ ಪ್ರಸ್ತುತವೇ? ಅದು ಉಳಿಯುವುದು ಸಾಧ್ಯವೇ? ಎನ್ನುವ ಪ್ರಶ್ನೆ ನಮ್ಮ ಎದುರಿಗಿದೆ.

ಜಾಗತೀಕರಣ, ಖಾಸಗೀಕರಣ ಮತ್ತು ಉದಾರೀಕರಣದ ಈ ಕಾಲಘಟ್ಟದಲ್ಲಿ ಸಹಕಾರ ಚಳುವಳಿ ಹಿಂದಿಗಿಂತಲೂ ಹೆಚ್ಚು ಪ್ರಸ್ತುತ. ಯಾಕೆಂದರೆ ಈ ಎಲ್ಲಾ ಆರ್ಥಿಕ ನೀತಿಗಳ ಅನುಕೂಲಗಳು ಲಭ್ಯವಾಗುವುದು ಶಕ್ತ ವರ್ಗಗಳಿಗೆ ಮಾತ್ರ. ಇಂತಹ ಪರಿಸ್ಥಿತಿಯಲ್ಲಿ ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ದುರ್ಬಲವಾಗಿರುವ ವರ್ಗಗಳಿಗೆ ಆಸರೆ ನೀಡುವುದು ಸಹಕಾರ ಚಳುವಳಿಯಿಂದ ಮಾತ್ರ ಸಾಧ್ಯ. ಜಾಗತೀಕರಣ, ಖಾಸಗೀಕರಣ ಮತ್ತು ಉದಾರೀಕರಣಗಳ ಪ್ರಕ್ರಿಯೆಯಲ್ಲಿ ಸಹಕಾರ ಚಳುವಳಿಯ ಅಸ್ಥಿತ್ವಕ್ಕೆ ಸಂಚಕಾರವಿದ್ದರೂ ಸಹಕಾರ ಚಳುವಳಿಯನ್ನು ಉಳಿಸಿ ಬೆಳೆಸಲು ಅಂತರಾಷ್ಟ್ರೀಯ ಮಟ್ಟದಲ್ಲಿ ಪ್ರಯತ್ನಗಳಾದರೆ ಸಹಕಾರ ಚಳುವಳಿ ಈ ಎಲ್ಲಾ ಸವಾಲುಗಳನ್ನು ಎದುರಿಸಿ ಬೆಳೆಯಲು ಸಾಧ್ಯವಿದೆ. ಅಂತರಾಷ್ಟ್ರೀಯ ಸಹಕಾರಿ ಒಕ್ಕೂಟ ಮತ್ತು ಇತರ ಹಲವು ಅಂತರಾಷ್ಟ್ರೀಯ ಸಂಘಟನೆಗಳು ಈ ನಿಟ್ಟಿನಲ್ಲಿ ಕಾರ್ಯ ಪ್ರವೃತ್ತವಾಗಿವೆ. ಪ್ರಪಂಚದ ಹಲವು ದೇಶಗಳು ಆರ್ಥಿಕ ಹಿನ್ನಡೆ ಅನುಭವಿಸುತ್ತಿರುವ ಪ್ರಸ್ತುತ ಕಾಲಘಟ್ಟದಲ್ಲಿ ಸಹಕಾರಿ ವ್ಯವಸ್ಥೆಯನ್ನು ಗಟ್ಟಿಗೊಳಿಸಿದರೆ ಆರ್ಥಿಕ ಸಮಸ್ಯೆಗಳನ್ನು ಬಗೆ ಹರಿಸಲು ಒಂದು ಪರ್ಯಾಯ ಮಾರ್ಗ ದೊರಕಿದಂತಾಗುತ್ತದೆ.

ಭಾರತದಲ್ಲಿ ವ್ಯವಸ್ಥಿತ ಸಹಕಾರ ಚಳುವಳಿ ಆರಂಭವಾದುದು ೨೦ನೆಯ ಶತಮಾನದ ಆದಿಭಾಗದಲ್ಲಿ. ಬ್ರಿಟಿಷ್ ಸರಕಾರ ಜಾರಿಗೆ ತಂದ "ಸಹಕಾರಿ ಕ್ರೆಡಿಟ್ ಸೊಸೈಟಿಗಳ ಕಾಯಿದೆ"ಯನ್ವಯ ಭಾರತದಲ್ಲಿ ಹುಟ್ಟಿಕೊಂಡ ಸಹಕಾರ ಚಳುವಳಿ ಸ್ವಾತಂತ್ರ್ಯ ಪೂರ್ವದಲ್ಲಿ ಜನರು ತಮಗಾಗಿ ಕಟ್ಟಿಕೊಂಡ ಚಳುವಳಿಯಾಗಿರದೆ ಸರಕಾರ ನಿರ್ದೇಶಿಸಿ ನಡೆಸಿಕೊಂಡು ಬಂದ ಚಳುವಳಿಯಾಗಿ ಬೆಳೆದು ಬಂದಿತು. ೧೯೦೪ ರ ಸಹಕಾರಿ ಕಾಯಿದೆಯನ್ವಯ ಪತ್ತಿನ ಸಹಕಾರಿ ಸಂಘಗಳನ್ನು ಮಾತ್ರ ಸ್ಥಾಪಿಸಲು ಅವಕಾಶ ಇದ್ದುದರಿಂದ ೧೯೧೧ ರವರೆಗೆ ಸಹಕಾರ ಚಳುವಳಿ ಉತ್ತಮ ಪ್ರಗತಿ ಕಾಣಲಿಲ್ಲ. ೧೯೧೨ರಲ್ಲಿ ಪರಿಷ್ಕೃತಗೊಂಡು ಜಾರಿಗೊಂಡ ಸಹಕಾರಿ ಕಾಯಿದೆ ಸಹಕಾರ ಚಳುವಳಿ ಬಹುಮುಖಿಯಾಗಿ ಬೆಳೆಯಲು ಕಾರಣವಾಯಿತು. ೧೯೨೯-೩೦ರ ವಿಶ್ವ ಆರ್ಥಿಕ ಒಕ್ಕಟ್ಟಿನ ಸಂದರ್ಭದಲ್ಲಿ ಸಹಕಾರ ಚಳುವಳಿಯ ಬೆಳವಣಿಗೆಯಲ್ಲಿ ಹಿನ್ನಡೆ ಕಂಡು ಬಂದರೂ ಮುಂದೆ ಸಹಕಾರ ಚಳುವಳಿಯನ್ನು ಪುನಶ್ಚೇತನಗೊಳಿಸುವ ಪ್ರಯತ್ನಗಳಾಗಿ ಅದು ಉತ್ತಮ ಬೆಳವಣಿಗೆ ಕಂಡಿತು. ಆದರೆ ಸ್ವಾತಂತ್ರ್ಯ ಪೂರ್ವ ಭಾರತದಲ್ಲಿ ಸಹಕಾರ ಚಳುವಳಿಯ ಬೆಳವಣಿಗೆ ಏಕರೂಪವಾಗಿರಲಿಲ್ಲ ಮತ್ತು ಅದರ ವಿಸ್ತರಣೆಯು ಅಯೋಜಿತವಾಗಿತ್ತು.

ಸಹಕಾರಿ ಪದ್ಧತಿಯನ್ನು ಬ್ರಿಟಿಷ್ ಸರಕಾರವು ಆರ್ಥಿಕವಾಗಿ ಹಿಂದುಳಿದಿರುವ ಬಡ ರೈತರು ಮತ್ತು ಕರಕುಶಲಕರ್ಮಿಗಳಲ್ಲಿ ಮಿತವ್ಯಯ, ಸ್ವ-ಸಹಾಯ ಮತ್ತು ಸಹಕಾರವನ್ನು ಪ್ರೋತ್ಸಾಹಿಸಲು ಮತ್ತು ಅವರಿಗೆ ಕಡಿಮೆ ಬಡ್ಡಿದರದಲ್ಲಿ ಸಾಲ ಒದಗಿಸುವ ಉದ್ದೇಶದಿಂದ ಜಾರಿಗೆ ತಂದಿತ್ತಾದರೂ ಅದರಿಂದ ಸ್ವಾತಂತ್ರ್ಯ ಪೂರ್ವದಲ್ಲಿ ತೀರಾ ಬಡವರಿಗೆ ಹೆಚ್ಚಿನ ಪ್ರಯೋಜನಗಳೇನೂ ಸಿಗಲಿಲ್ಲ. ಸಹಕಾರ ಚಳುವಳಿ ಮತ್ತು ಸ್ವಾತಂತ್ರ್ಯ ಚಳುವಳಿಗಳು ಜೊತೆ ಜೊತೆಯಾಗಿ ಸಾಗಿದುದರಿಂದ ಅವೆರಡೂ ಪರಸ್ಪರ ಪೂರಕವಾಗಿದ್ದವು. ಸಹಕಾರ ಚಳುವಳಿ ರಾಷ್ಟ್ರೀಯ ಚಳುವಳಿ ಬಲಗೊಳ್ಳಲು ಕಾರಣವಾಯಿತು. ರಾಷ್ಟ್ರೀಯ ಚಳುವಳಿಯ ಮತ್ತು ರಾಷ್ಟ್ರೀಯ ಹೋರಾಟಗಾರರ ಪ್ರಭಾವದಿಂದಾಗಿ ದೇಶದಲ್ಲಿ ಗುಡಿ ಕೈಗಾರಿಕಾ ಸಹಕಾರಿ ಸಂಘಗಳು, ಮಹಿಳೆಯರು ಮತ್ತು ಹಿಂದುಳಿದ ವರ್ಗಗಳ ಸಹಕಾರಿ ಸಂಘಗಳ ಸ್ಥಾಪನೆಗೆ ಒತ್ತು ನೀಡಲಾಯಿತು. ಹೀಗಿದ್ದರೂ, ಸ್ವಾತಂತ್ರ್ಯ ಪೂರ್ವದಲ್ಲಿ ಸಹಕಾರಿ ಸಂಘಗಳಿಂದ ಹೆಚ್ಚಿನ ಅನುಕೂಲ ಪಡೆದುಕೊಂಡದ್ದು ಶಿಕ್ಷಿತ ಮೇಲ್ವರ್ಗದ ಜನರು ಭೂಮಾಲಿಕರು ಮತ್ತು ಲೇವಾದೇವಿದಾರರು.

ಸ್ವಾತಂತ್ರ್ಯ ನಂತರ ಪಂಚವಾರ್ಷಿಕ ಯೋಜನೆಗಳು ಆರಂಭವಾದ ಮೇಲೆ ಆರಂಭದ ಮೂರು ಪಂಚವಾರ್ಷಿಕ ಯೋಜನೆಗಳಲ್ಲಿ ಸಹಕಾರ ಕ್ಷೇತ್ರಕ್ಕೆ ಪ್ರಾಮುಖ್ಯತೆ ನೀಡಿದ್ದರಿಂದ ಸಹಕಾರ ಚಳುವಳಿ ಹೆಚ್ಚಿನ ಬೆಳವಣಿಗೆ ಕಾಣಲು ಸಾಧ್ಯವಾಯಿತು. ಆದರೆ ಇಂದಿಗೂ ದೇಶದಲ್ಲಿ ಸಹಕಾರ ಚಳುವಳಿಯ ಬೆಳವಣಿಗೆ ಏಕರೂಪವಾಗಿಲ್ಲ. ಕೆಲವು ರಾಜ್ಯಗಳಲ್ಲಿ ಸಹಕಾರಿ ಕ್ಷೇತ್ರ ಬಲಿಷ್ಠವಾಗಿದ್ದರೂ

ಇನ್ನು ಕೆಲವು ರಾಜ್ಯಗಳಲ್ಲಿ ಸಹಕಾರ ಚಳುವಳಿ ನಿರೀಕ್ಷಿತ ಪ್ರಗತಿ ಸಾಧಿಸಿಲ್ಲ. ರಾಷ್ಟ್ರೀಯ ಸಹಕಾರಿ ನೀತಿ ಇಲ್ಲದಿರುವುದು. (೧೯೯೨ರಲ್ಲಿ ಈ ನಿಟ್ಟಿನಲ್ಲಿ ಪ್ರಯತ್ನಗಳಾದರೂ ಅದು ಯಶಸ್ವಿಯಾಗಲಿಲ್ಲ) ಬೇರೆ ಬೇರೆ ರಾಜ್ಯಗಳಲ್ಲಿ ಬೇರೆ ಬೇರೆ ರೀತಿಯ ಸಹಕಾರಿ ಕಾಯಿದೆಗಳಿರುವುದು ಸಹಕಾರ ಚಳುವಳಿ ದೇಶದಲ್ಲಿ ಏಕರೂಪವಾಗಿ ಬೆಳೆಯಲು ಅಡ್ಡಿಯುಂಟು ಮಾಡುತ್ತಿವೆ. ಜೊತೆಗೆ ಸರಕಾರದ ಮಧ್ಯ ಪ್ರವೇಶಿಸುವಿಕೆ, ಸದಸ್ಯರ ಅಲಕ್ಷ್ಯತನ, ಹೆಚ್ಚುತ್ತಿರುವ ರಾಜಕೀಕರಣಗಳಿಂದಾಗಿ ದೇಶದಲ್ಲಿ ಸಹಕಾರ ಚಳುವಳಿ ಗುಣಾತ್ಮಕವಾಗಿ ಬೆಳವಣಿಗೆ ಹೊಂದಲು ಸಾಧ್ಯವಾಗುತ್ತಿಲ್ಲ. ರಾಷ್ಟ್ರೀಯ ಸಹಕಾರಿ ನೀತಿ ರೂಪಿಸುವುದು, ಸರಕಾರ ಸಹಕಾರಿ ಕ್ಷೇತ್ರದಲ್ಲಿ ಹಸ್ತಕ್ಷೇಪ ಮಾಡದೆ ಸಹಕಾರಿ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಉತ್ತೇಜಕನ ಕೆಲಸ ಮಾಡುವುದು, ಸದಸ್ಯರ ಅಭಿವೃದ್ಧಿಗೆ ಕ್ರಮ ಕೈಗೊಳ್ಳುವುದು ರಾಜಕೀಯ ಹಸ್ತಕ್ಷೇಪವನ್ನು ಮಿತಗೊಳಿಸುವುದು, ಪ್ರಜಾತಂತ್ರದ ತಳಹದಿಯ ಮೇಲೆ ಕಾರ್ಯ ನಿರ್ವಹಿಸುವುದು ಮುಂತಾದ ಕ್ರಮಗಳನ್ನು ಕೈಗೊಳ್ಳುವುದರಿಂದ ಜಾಗತೀಕರಣ, ಖಾಸಗೀಕರಣ ಮತ್ತು ಉದಾರೀಕರಣಗಳು ಒಡ್ಡುತ್ತಿರುವ ಸವಾಲುಗಳನ್ನು ಎದುರಿಸಿ ಸಹಕಾರಿ ಕ್ಷೇತ್ರ ಮುಂದುವರಿಯಲು ಸಾಧ್ಯ. ಹೀಗಿದ್ದರೂ ಆರ್ಥಿಕ ಹಿನ್ನಡೆಯಿಂದಾಗಿ ಅಮೇರಿಕಾದಂತಹ ಮುಂದುವರಿದ ರಾಷ್ಟ್ರಗಳಲ್ಲಿ ಕೂಡಾ ಪ್ರತಿಷ್ಠಿತ ವಾಣಿಜ್ಯ ಬ್ಯಾಂಕುಗಳು ಬಾಗಿಲೆಳೆದುಕೊಂಡಿರುವ ಪರಿಣಾಮವಾಗಿ ಅಲ್ಲಿನ ಅರ್ಥವ್ಯವಸ್ಥೆ ತೀವ್ರ ಹಿನ್ನಡೆ ಅನುಭವಿಸುತ್ತಿರುವ ಪ್ರಸ್ತುತ ಕಾಲಘಟ್ಟದಲ್ಲಿ ಭಾರತದ ಆರ್ಥಿಕ ವ್ಯವಸ್ಥೆ ಹದಗೆಡದಿರಲು ಇಲ್ಲಿ ಸಹಕಾರಿ ರಂಗ ಬಲಿಷ್ಠವಾಗಿರುವುದೇ ಒಂದು ಕಾರಣ ಎಂಬುದು ನನ್ನ ನಂಬಿಕೆ.

ಭಾರತದ ಸಹಕಾರ ಚಳುವಳಿಯ ಇತಿಹಾಸದಲ್ಲಿ ಕರ್ನಾಟಕಕ್ಕೆ ವಿಶಿಷ್ಟ ಸ್ಥಾನವಿದೆ. ದೇಶದಲ್ಲೇ ಪ್ರಥಮ ಕೃಷಿ ಪತ್ತಿನ ಸಹಕಾರ ಸಂಘ ಆರಂಭವಾದುದು ಅಂದಿನ ಮುಂಬೈ ಪ್ರಾಂತ್ಯದ ಭಾಗವಾಗಿದ್ದ ಧಾರವಾಡ ಜಿಲ್ಲೆಯ ಗದಗ ತಾಲೂಕಿನ ಕಣಗಿನಹಾಳದಲ್ಲಿ (ಈಗ ಗದಗ ಪ್ರತ್ಯೇಕ ಜಿಲ್ಲೆಯಾಗಿದೆ). ಇದಲ್ಲದೆ ಇಂದು ದೇಶದಲ್ಲಿರುವ ಹಲವು ರೀತಿಯ ಸಹಕಾರ ಸಂಘಗಳನ್ನು ಪ್ರಾಯೋಗಿಕವಾಗಿ ಕರ್ನಾಟಕದಲ್ಲೇ ಆರಂಭಿಸಲಾಯಿತು. ಭಾರತದಲ್ಲೇ ಸ್ವತಂತ್ರ ಸಹಕಾರಿ ಕಾಯಿದೆಯನ್ನು ಜಾರಿಗೆ ತಂದ ರಾಜ್ಯ ಎಂಬ ಹೆಗ್ಗಳಿಕೆ ಕೂಡಾ ಮೈಸೂರು ಸಂಸ್ಥಾನಕ್ಕೆ ಸಲ್ಲುತ್ತದೆ. ಸ್ವಾತಂತ್ರ್ಯ ಪೂರ್ವದಲ್ಲಿ ಮೈಸೂರು ಸಂಸ್ಥಾನ, ಮುಂಬೈ ಕರ್ನಾಟಕ, ಮದ್ರಾಸ್ ಕರ್ನಾಟಕ ಮತ್ತು ಕೊಡಗುಗಳಲ್ಲಿ ಸಹಕಾರ ಚಳುವಳಿ ಹೆಚ್ಚು ಪ್ರಬಲವಾಗಿತ್ತು. ಈ ಎಲ್ಲಾ ಭಾಗಗಳಲ್ಲಿ ಬೇರೆ ಬೇರೆ ಸಹಕಾರಿ ಕಾಯಿದೆಗಳು ಅಸ್ತಿತ್ವದಲ್ಲಿದ್ದವು. ಈ ಕಾರಣದಿಂದಾಗಿ ಸಹಕಾರ ಚಳುವಳಿಯ ಬೆಳವಣಿಗೆಯಲ್ಲಿ ಏಕರೂಪತೆ ಇರಲಿಲ್ಲ. ೧೯೫೬ರಲ್ಲಿ ಮೈಸೂರು ರಾಜ್ಯದ ಉದಯವಾದ ಮೇಲೆ ೧೯೫೯ರಲ್ಲಿ ರಾಜ್ಯದಲ್ಲಿ ಏಕರೂಪದ ಸಹಕಾರಿ ಕಾಯಿದೆ ಜಾರಿಗೆ ಬಂದಿತು.

ಪ್ರಸ್ತುತ ರಾಜ್ಯದಲ್ಲಿ ಸಹಕಾರ ಚಳುವಳಿ ವ್ಯಾಪಕವಾಗಿ ಪಸರಿಸಿದೆ. ರಾಜ್ಯದ ಆರ್ಥಿಕ ಕ್ಷೇತ್ರದಲ್ಲಿ ಸಹಕಾರಿ ರಂಗ ಪರಿಣಾಮವಾಗಿ ಪಾತ್ರ ನಿರ್ವಹಿಸುತ್ತಿದೆ. ಆದರೆ ರಾಜ್ಯದಲ್ಲಿ ಸಹಕಾರ ಚಳುವಳಿ ಗುಣಾತ್ಮಕವಾಗಿ ಇನ್ನಷ್ಟು ಬೆಳೆಯಬೇಕಾಗಿದೆ. ಉತ್ತಮ ನಾಯಕತ್ವ, ನಿಸ್ವಾರ್ಥ ಸೇವೆ, ಸದಸ್ಯರಲ್ಲಿ ಪರಸ್ಪರ ಸಹಕಾರ, ಸ್ವಂತ ಹಿತಾಸಕ್ತಿಗಿಂತ ಸಂಘದ ಹಿತಾಸಕ್ತಿಗೆ ಹೆಚ್ಚಿನ ಗಮನ ನೀಡಿವುದು, ಜಾಗೃತ ಸದಸ್ಯರು, ಉತ್ತಮ ಸಿಬ್ಬಂದಿ ಮುಂತಾದ ಅಂಶಗಳನ್ನು ಮೈಗೂಡಿಸಿಕೊಂಡು ಸಹಕಾರ ಚಳುವಳಿ ಬೆಳೆದರೆ ಅದು ರಾಜ್ಯದಲ್ಲಿ ಇನ್ನಷ್ಟು ಯಶಸ್ವಿಯಾಗಿ ಮುಂದುವರಿಯಲು ಸಾಧ್ಯ.

ರಾಜ್ಯಮಟ್ಟದಲ್ಲಿ ಮಾತ್ರವಲ್ಲದೆ ರಾಷ್ಟ್ರಮಟ್ಟದ ಸಹಕಾರ ಚಳುವಳಿಯ ಇತಿಹಾಸಲ್ಲಿಯೂ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಗೆ ಉನ್ನತ ಸ್ಥಾನವಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ಅಂದಿನ ಮದ್ರಾಸ್ ಪ್ರಾಂತ್ಯದ ಭಾಗವಾಗಿದ್ದ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆ ಸಹಕಾರ ಚಳುವಳಿಯಲ್ಲಿ ಪ್ರಮುಖ ಪಾತ್ರ ವಹಿಸಿತ್ತು. ೧೯೦೯ರಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರಿನಲ್ಲಿ ಆರಂಭಗೊಂಡು ಮೊಳಹಳ್ಳಿ ಶಿವರಾಯರು ಮತ್ತು ಅವರ ಸಹವರ್ತಿಗಳ ಪ್ರಯತ್ನದಿಂದ ಜಿಲ್ಲೆಯಾದ್ಯಂತ ಪಸರಿಸಿದ ಸಹಕಾರ ಚಳುವಳಿ ಇದೀಗ ನೂರು ವರ್ಷಗಳನ್ನು ಪೂರೈಸಿದೆ. ಶತ ವರ್ಷಗಳನ್ನು ಪೂರೈಸಿರುವ ಸಹಕಾರ ಚಳುವಳಿ ಜಿಲ್ಲೆಯಲ್ಲಿ ಎಷ್ಟರ ಮಟ್ಟಿಗೆ ಯಶಸ್ವಿಯಾಗಿದೆ? ಅದು ತನ್ನ ಮೂಲ ಉದ್ದೇಶವನ್ನು ಈಡೇರಿಸಲು ಸಮರ್ಥವಾಗಿದೆಯೇ?

ಸಹಕಾರ ಸಂಘಗಳ ಸ್ಥಾಪನೆ ಹಾಗೂ ಅವುಗಳ ಸಂಖ್ಯೆಯ ದೃಷ್ಟಿಯಿಂದ ಸ್ವಾತಂತ್ರ್ಯ ಪೂರ್ವದಲ್ಲೇ ೧೯೩೦ ರಿಂದ ೧೯೩೪ರ ಅವಧಿಯನ್ನು ಹೊರತು ಪಡಿಸಿ ಸಹಕಾರ ಚಳುವಳಿ ಜಿಲ್ಲೆಯಲ್ಲಿ ಉತ್ತಮ ಪ್ರಗತಿ ಸಾಧಿಸಿತ್ತು. ಸಹಕಾರಿ ಮುದ್ರಣಾಲಯ ಸ್ಥಾಪನೆಯಂತಹ ವಿನೂತನ ಸಹಕಾರಿ ಪ್ರಯೋಗಗಳು ಜಿಲ್ಲೆಯಲ್ಲಿ ಮಾಡಲ್ಪಟ್ಟವು. ಮಹಿಳೆಯರನ್ನು ಮತ್ತು ಹಿಂದುಳಿದ ವರ್ಗಗಳ ಜನರನ್ನು ಚಳುವಳಿಯ ಭಾಗವನ್ನಾಗಿಸುವ ಪ್ರಯತ್ನಗಳಾಗಿ ಮಹಿಳೆಯರ ಮತ್ತು ಹಿಂದುಳಿದ ವರ್ಗಗಳ ಸಹಕಾರಿ ಸಂಘಗಳು ಸ್ಥಾಪಿಸಲ್ಪಟ್ಟವು. ಆದರೂ ಸ್ವಾತಂತ್ರ್ಯ ಪೂರ್ವದಲ್ಲಿ ಸಹಕಾರ ಚಳುವಳಿ ಜನ ಸಾಮಾನ್ಯರ ಚಳುವಳಿಯಾಗುವಲ್ಲಿ ಯಶಸ್ವಿಯಾಗಲಿಲ್ಲ. ಬದಲಿಗೆ ಅದು ಶಿಕ್ಷಿತ, ಮಧ್ಯಮ ಮತ್ತು ಮೇಲ್ವರ್ಗದ ಜನರ ಚಳುವಳಿಯಾಗಿ ಮುಂದುವರಿಯಿತು. ಚಳುವಳಿಯ ನಾಯಕತ್ವವು ಈ ವರ್ಗಗಳ ಕೈಯಲ್ಲಿತ್ತು. ಸಹಕಾರ ಸಂಸ್ಥೆಗಳು ಮುಖ್ಯವಾಗಿ ಕೃಷಿ ಪತ್ತಿನ ಸಹಕಾರ ಸಂಘಗಳು ಅಮಿತ ಜವಾಬ್ದಾರಿಯ ನೆಲೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದುದರಿಂದ ಮತ್ತು ಸಹಕಾರ ಸಂಘಗಳ ಸದಸ್ಯತ್ವವನ್ನು ಹೊಂದಲು ನೀಡಬೇಕಾದ ಮೊತ್ತವನ್ನು ತೀರಾ ಬಡವರಿಗೆ ಭರಿಸಲು ಸಾಧ್ಯವಾಗದೆ ಹೋದುದರಿಂದ ಸ್ವಾತಂತ್ರ್ಯ ಪೂರ್ವದಲ್ಲಿ ಸಹಕಾರ ಚಳುವಳಿ ಜನ ಸಾಮಾನ್ಯರನ್ನು ತನ್ನತ್ತ ಸೆಳೆಯುವಲ್ಲಿ ಹೆಚ್ಚು ಯಶಸ್ವಿಯಾಗಲಿಲ್ಲ. ಸ್ವಾತಂತ್ರ್ಯಾ ನಂತರವೂ ೧೯೫೯ರಲ್ಲಿ ಸಹಕಾರ

ಕಾಯಿದೆಯಲ್ಲಿ ತಿದ್ದುಪಡಿಯಾಗುವವರೆಗೆ ಹೆಚ್ಚಿನ ಸಂಖ್ಯೆಯಲ್ಲಿ ಜನರು ಸಹಕಾರ ಸಂಘಗಳ ಸದಸ್ಯರಾಗಲು ಹಿಂಜರಿಯುತ್ತಿದ್ದರು. ಆದರೆ ೧೯೫೯ರ ರಾಜ್ಯ ಸಹಕಾರಿ ಕಾಯ್ದೆ ೧೯೬೦ರಲ್ಲಿ ಜಾರಿಗೆ ಬಂದ ಬಳಿಕ ಸಹಕಾರ ಸಂಘಗಳು ಮಿತ ಜವಾಬ್ದಾರಿಯ ಸಂಘಗಳಾಗಿ ಮಾರ್ಪಟ್ಟದ್ದರಿಂದ ಹೆಚ್ಚಿನ ಸಂಖ್ಯೆಯಲ್ಲಿ ಜನರು ಸಹಕಾರ ಚಳುವಳಿಯಲ್ಲಿ ಭಾಗವಹಿಸಲು ಅವಕಾಶವಾಯಿತು.

೧೯೯೯ರಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಪ್ರಾಥಮಿಕ ಸಹಕಾರ ಬ್ಯಾಂಕ್‌ಗಳ ಸಹಕಾರದೊಂದಿಗೆ ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಯಲ್ಲಿ ಸ್ವ-ಸಹಾಯ ಗುಂಪು ಯೋಜನೆಯನ್ನು ಅನುಷ್ಠಾನಕ್ಕೆ ತಂದ ಮೇಲೆ ಗ್ರಾಮೀಣ ಪ್ರದೇಶಗಳಲ್ಲಿ ಜನರು ಹೆಚ್ಚಿನ ಸಂಖ್ಯೆಯಲ್ಲಿ ಸಹಕಾರ ಚಳುವಳಿಯ ವ್ಯಾಪ್ತಿಗೆ ಒಳಪಡುತ್ತಿದ್ದಾರೆ. ಈ ಕಾರಣದಿಂದಾಗಿ ಇತ್ತೀಚಿನ ವರ್ಷಗಳಲ್ಲಿ ಸಹಕಾರ ಚಳುವಳಿ ಸಾಮಾನ್ಯ ಜನರ ಚಳುವಳಿಯಾಗುವುದರಲ್ಲಿ ಯಶಸ್ವಿಯಾಗಿದೆ.

ಸಹಕಾರ ಚಳುವಳಿಯನ್ನು ಜಿಲ್ಲೆಯಲ್ಲಿ ಆರಂಭಿಸಿದುದರ ಮೂಲ ಉದ್ದೇಶ ಜನ ಸಾಮಾನ್ಯರ, ಅದರಲ್ಲೂ ರೈತರ ಆರ್ಥಿಕ ಸಂಕಷ್ಟಗಳನ್ನು ಪರಿಹರಿಸಲು ನೆರವಾಗುವುದು ಮತ್ತು ಅವರನ್ನು ಲೇವಾದೇವಿದಾರರ ಶೋಷಣೆಯಿಂದ ತಪ್ಪಿಸಲು ಕಡಿಮೆ ಬಡ್ಡಿದರದಲ್ಲಿ ಸಹಕಾರಿ ಸಂಘಗಳ ಮೂಲಕ ಸಾಲ ವಿತರಿಸುವುದು. ಆದರೆ ಸಹಕಾರ ಚಳುವಳಿ ಸ್ವಾತಂತ್ರ್ಯಾ ಪೂರ್ವದಲ್ಲಿ ಈ ಉದ್ದೇಶವನ್ನು ಈಡೇರಿಸುವಲ್ಲಿ ಹೆಚ್ಚು ಯಶಸ್ವಿಯಾಗಲಿಲ್ಲ. ಯಾಕೆಂದರೆ ಆ ಸಮಯದಲ್ಲಿ ಸಹಕಾರಿ ಸಂಘಗಳಿಂದ ದೊರೆಯುವ ಅನುಕೂಲಗಳು ತೀರಾ ಬಡರೈತರಿಗೆ, ಜನ ಸಾಮಾನ್ಯರಿಗೆ ಹೆಚ್ಚು ದೊರೆಯಲಿಲ್ಲ. ಸಹಕಾರ ಸಂಘಗಳಿಂದ ದೊರೆಯುವ ಅನುಕೂಲಗಳನ್ನು ಪಡೆದುಕೊಂಡದ್ದು ಸಂಘಗಳಲ್ಲಿ ಸದಸ್ಯರಾಗಲು ಆರ್ಥಿಕ ಶಕ್ತಿ ಹೊಂದಿದ್ದ ಮಧ್ಯಮ ಮತ್ತು ಮೇಲ್ವರ್ಗದ ಜನರು ಮಾತ್ರ. ತೀರಾ ಬಡವರಿಗೆ ಈ ಚಳುವಳಿಯಿಂದ ಪರೋಕ್ಷವಾಗಿ ಮಾತ್ರ ಕೆಲವು ಅನುಕೂಲಗಳು ದೊರಕಿವೆ. ಎರಡನೆಯ ಮಹಾಯುದ್ಧದ ಕಾಲದಲ್ಲಿ ಸ್ಥಾಪಿಸಲ್ಪಟ್ಟ ದಕ್ಷಿಣ ಕನ್ನಡ ಜಿಲ್ಲಾ ಸಹಕಾರಿ ಸಗಟು ಮಾರಾಟ ಸಂಸ್ಥೆ ಮತ್ತು ಜಿಲ್ಲೆಯ ಹಲವೆಡೆ ಸ್ಥಾಪಿಸಲ್ಪಟ್ಟ ಗ್ರಾಹಕರ ಸಹಕಾರ ಸಂಘಗಳು ಆಹಾರಧಾನ್ಯಗಳನ್ನು ಪಡಿತರ ವ್ಯವಸ್ಥೆಯ ಮೂಲಕ ವಿತರಿಸುವ ಕಾರ್ಯಗಳನ್ನು ಕೈಗೊಂಡು ಆಹಾರದ ಅಭಾವದ ಆ ದಿನಗಳಲ್ಲಿ ಜನರಿಗೆ ನೆರವಾಗಿವೆ. ಜೊತೆಗೆ ಸ್ವಾತಂತ್ರ್ಯ ಹೋರಾಟದ ಆ ದಿನಗಳಲ್ಲಿ ಜಿಲ್ಲೆಯಲ್ಲಿ ಸಹಕಾರ ತತ್ವಗಳು ಪರಿಸಲ್ಪಟ್ಟದ್ದು ಸ್ವಾತಂತ್ರ್ಯ ಚಳುವಳಿ ಬಲಗೊಳ್ಳಲು ಕಾರಣವಾಯಿತು. ಸ್ವಾತಂತ್ರ್ಯಾ ನಂತರದಲ್ಲಿ ಅದರಲ್ಲೂ ಇತ್ತೀಚಿನ ವರ್ಷಗಳಲ್ಲಿ ಸಹಕಾರ ಸಂಘಗಳಿಂದ ಬಡರೈತರಿಗೆ, ಆರ್ಥಿಕವಾಗಿ ಹಿಂದುಳಿದವರಿಗೆ ಹೆಚ್ಚಿನ ಅನುಕೂಲಗಳು ದೊರೆಯುತ್ತಿರುವುದರಿಂದ ಸಹಕಾರ ಚಳುವಳಿ ತನ್ನ ಮೂಲ ಉದ್ದೇಶವನ್ನು ಈಡೇರಿಸುವಲ್ಲಿ ಈಗ ಹೆಚ್ಚು ಸಫಲವಾಗಿದೆ.

ಪ್ರಸ್ತುತ ಸಹಕಾರ ಚಳುವಳಿ ಜಿಲ್ಲೆಯಲ್ಲಿ ಹೆಚ್ಚು ಯಶಸ್ವಿಯಾಗಿ ನಡೆಯುತ್ತಿದ್ದರೂ ಜಿಲ್ಲೆಯಲ್ಲಿ ಸಹಕಾರ ಚಳುವಳಿಯನ್ನು ಇನ್ನಷ್ಟು ಬಲಪಡಿಸಿ ಯುವ ಜನತೆಗೆ, ಮಹಿಳೆಯರಿಗೆ, ಹಿಂದುಳಿದ ವರ್ಗಗಳಿಗೆ ಸಹಕಾರಿ ಕ್ಷೇತ್ರದಲ್ಲಿ ಇನ್ನಷ್ಟು ಮುಕ್ತ ಅವಕಾಶಗಳನ್ನು ನೀಡಬೇಕು. ಇದರಿಂದ ಸಹಕಾರ ಚಳುವಳಿ ಜಿಲ್ಲೆಯಲ್ಲಿ ಇನ್ನೂ ಹೆಚ್ಚಿನ ಯಶಸ್ಸನ್ನು ಪಡೆಯಲು ಸಾಧ್ಯ.

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಸಹಕಾರ ಚಳುವಳಿಯ ಇತಿಹಾಸವನ್ನು ಗಮನಿಸಿದಾಗ ಇಲ್ಲಿ ವಿವಿಧ ರೀತಿಯ ಸಹಕಾರ ಸಂಘಗಳನ್ನು ಕಟ್ಟಿ ಬೆಳೆಸುವ ಪ್ರಯತ್ನಗಳಾಗಿರುವುದನ್ನು ಕಾಣಬಹುದು. ೧೯೦೯ರಲ್ಲಿ ಪುತ್ತೂರಿನಲ್ಲಿ ಆರಂಭವಾದ ಪುತ್ತೂರು ರೂರಲ್ ಕ್ರೆಡಿಟ್ ಸೊಸೈಟಿ (ಈಗಿನ ಕೋ-ಓಪರೇಟಿವ್ ಟೌನ್ ಬ್ಯಾಂಕ್) ಜಿಲ್ಲೆಯ ಮೊದಲ ಸಹಕಾರ ಸಂಘ. ೧೯೦೯ರ ನಂತರ ಹಲವು ಸಹಕಾರ ಸಂಘಗಳು ಸ್ಥಾಪಿಸಲ್ಪಟ್ಟವು. ಅವುಗಳಲ್ಲಿ ಕೆಲವು ಈಗಲೂ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ಕಾರ್ಯ ನಿರ್ವಹಿಸುತ್ತಿವೆ. ಇನ್ನು ಕೆಲವು ಈಗಲೂ ತಮ್ಮ ಅಸ್ತಿತ್ವ ಉಳಿಸಿಕೊಂಡಿದ್ದರೂ ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸುತ್ತಿಲ್ಲ. ಕೆಲವು ಸಹಕಾರ ಸಂಘಗಳು ಆರಂಭಗೊಂಡ ಕೆಲವೇ ವರ್ಷಗಳಲ್ಲಿ ಸಮಾಪನಗೊಂಡಿವೆ.

ಸ್ವಾತಂತ್ರ್ಯ ಪೂರ್ವದಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಸಹಕಾರ ಸಂಘಗಳು ಸ್ಥಾಪಿಸಲ್ಪಟ್ಟಿದ್ದರೂ ಅವುಗಳಲ್ಲಿ ಕೆಲವು ಮಾತ್ರ ಉತ್ತಮವಾಗಿ ಕಾರ್ಯ ನಿರ್ವಹಿಸುತ್ತಿದ್ದು ಉಳಿದವುಗಳು ತಮ್ಮ ಕಾರ್ಯ ಚಟುವಟಿಕೆಗಳನ್ನು ನಡೆಸಲು ಅಸಮರ್ಥವಾಗಿದ್ದುವು. ಸಂಘಗಳ ಸ್ಥಾಪನೆಗೆ ನೀಡಿದಷ್ಟು ಪ್ರಾಮುಖ್ಯ ಅದರ ಸಂಘಟನೆಗೆ ನೀಡದಿರುವುದೇ ಅದಕ್ಕೆ ಮುಖ್ಯ ಕಾರಣ. ಮಹಿಳೆಯರ, ಹಿಂದುಳಿದ ವರ್ಗಗಳ ಸಹಕಾರ ಸಂಘಗಳು ಸ್ಥಾಪಿಸಲ್ಪಟ್ಟವಾದರೂ ಅವುಗಳು ಹೆಚ್ಚಿನ ಪ್ರಗತಿ ಕಾಣಲಿಲ್ಲ. ಸ್ವಾತಂತ್ರ್ಯ ಪೂರ್ವ ಕಾಲದಲ್ಲಿ ಸಹಕಾರ ಸಂಘಗಳಿಂದ ಕೆಲವೇ ಜನರಿಗಷ್ಟೇ ಹೆಚ್ಚಿನ ಅನುಕೂಲಗಳಾಗಿವೆ. ಇದಕ್ಕೆ ಹೋಲಿಸಿದರೆ ಸ್ವಾತಂತ್ರ್ಯ ನಂತರದಲ್ಲಿ ಸಹಕಾರ ಸಂಘಗಳು ಹೆಚ್ಚಿನ ಪ್ರಗತಿ ಕಾಣುತ್ತಿವೆ. ಪ್ರಸ್ತುತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೮೦೧ ಸಹಕಾರ ಸಂಘಗಳಿದ್ದು ಈ ಸಂಘಗಳ ಪೈಕಿ ೭೩೪ ಸಂಘಗಳು ಲಾಭದಲ್ಲಿ ಕಾರ್ಯ ನಿರ್ವಹಿಸುತ್ತಿರುವುದು ಸಹಕಾರ ಸಂಘಗಳು ಇಂದು ಹೆಚ್ಚು ಪರಿಣಾಮಕಾರಿಯಾಗಿ ಕೆಲಸ ನಿರ್ವಹಿಸುತ್ತಿರುವುದಕ್ಕೆ ಸಾಕ್ಷಿ. ಆದರೂ ಜಿಲ್ಲೆಯಲ್ಲಿ ೨೮ ಸಹಕಾರ ಸಂಘಗಳು ನಿಷ್ಕ್ರಿಯಗೊಂಡಿದ್ದು ೧೯ ಸಂಘಗಳು ಸಮಾಪನಗೊಂಡಿರುವುದು ಸಹಕಾರ ಸಂಘಗಳನ್ನು ಇನ್ನಷ್ಟು ಸಂಘಟಿಸುವ ಅವಶ್ಯಕತೆಯನ್ನು ಎತ್ತಿ ತೋರಿಸುತ್ತಿವೆ. ನಿಷ್ಕ್ರಿಯಗೊಂಡಿರುವ ಸಹಕಾರ ಸಂಘಗಳನ್ನು ಪುನರ್‌ಸಂಘಟಿಸಿ, ಉಳಿದ ಸಹಕಾರ ಸಂಘಗಳ ತಳಹದಿಯನ್ನು ಭದ್ರ ಪಡಿಸುವ ಪ್ರಯತ್ನಗಳಾದರೆ ಜಿಲ್ಲೆಯ ಸಹಕಾರ ಸಂಘಗಳು ಇನ್ನೂ ಹೆಚ್ಚು ಯಶಸ್ವಿಯಾಗಿ ಕಾರ್ಯ ನಿರ್ವಹಿಸಲು ಸಾಧ್ಯ.

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಹಕಾರ ಚಳುವಳಿಯನ್ನು ಕಟ್ಟಿ ಬೆಳೆಸುವುದರಲ್ಲಿ ಮೊಳಹಳ್ಳಿ ಶಿವರಾಯರು ಮತ್ತು ಇತರ ಸಹಕಾರಿ ನೇತಾರರು ಪ್ರಮುಖ ಪಾತ್ರ ವಹಿಸಿದ್ದಾರೆ. ಜಿಲ್ಲೆಯ ಸಹಕಾರ ಚಳುವಳಿಯಲ್ಲಿ ಶಿಕ್ಷಿತರು, ಮಧ್ಯಮ ಮತ್ತು ಮೇಲ್ವರ್ಗದ ಜನರು, ಅದರಲ್ಲೂ ಭೂ ಮಾಲಿಕರ ನಾಯಕತ್ವವೇ ಎದ್ದು ಕಾಣುತ್ತದೆ. ಸಹಕಾರ ಚಳುವಳಿಯನ್ನು ಕಟ್ಟಿ ಬೆಳೆಸುವುದರಲ್ಲಿ ಜಿಲ್ಲೆಯ ಸಹಕಾರಿಗಳು ತಮ್ಮ ಸಾಮಾಜಿಕ ಕಳಕಳಿಯನ್ನು ವ್ಯಕ್ತಪಡಿಸಿದ್ದರೂ ಜೊತೆಗೆ ತಮ್ಮ ವೈಯಕ್ತಿಕ ಹಿತಾಸಕ್ತಿಗಳನ್ನು ರಕ್ಷಿಸುವ ಉದ್ದೇಶವೂ ಅವರಿಗಿದ್ದಂತೆ ಕಂಡು ಬರುತ್ತದೆ. ಸ್ವಾತಂತ್ರ್ಯ ಪೂರ್ವದಲ್ಲಿ ಸಹಕಾರಿ ಸಂಘಗಳ ಅಧ್ಯಕ್ಷ, ಉಪಾಧ್ಯಕ್ಷ, ನಿರ್ದೇಶಕ ಮುಂತಾದ ಪ್ರಮುಖ ಹುದ್ದೆಗಳು ಈ ವರ್ಗಗಳಿಗೆ ಮೀಸಲಾಗಿರುತ್ತಿದ್ದು ಈಗಲೂ ಅದೇ ಪರಂಪರೆ ಮುಂದುವರಿದಿರುವುದನ್ನು ಕಾಣಬಹುದು. ಹೀಗಿದ್ದರೂ ಮೊಳಹಳ್ಳಿ ಶಿವರಾಯರು ಮತ್ತು ಇತರ ಪ್ರಮುಖ ಸಹಕಾರಿ ನೇತಾರರ ಪ್ರಾಮಾಣಿಕ ಪ್ರಯತ್ನವಿಲ್ಲದೆ ಹೋಗಿದ್ದರೆ ಇಂದು ಸಹಕಾರ ಚಳುವಳಿ ಜಿಲ್ಲೆಯಲ್ಲಿ ಇಷ್ಟು ವಿಸ್ತೃತವಾಗಿ ಬೆಳೆಯಲು ಸಾಧ್ಯವಾಗುತ್ತಿರಲಿಲ್ಲ.

ಜಿಲ್ಲೆಯ ಸಹಕಾರಿ ರಂಗದಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿ ಮಹಿಳೆಯರಿಗೆ ಹೆಚ್ಚಿನ ಪ್ರಾಧಾನ್ಯತೆ ಇರಲಿಲ್ಲ. ಮಹಿಳಾ ಗುಡಿ ಕೈಗಾರಿಕಾ ಸಂಘಗಳು ಹಾಗೂ ಮಹಿಳಾ ಗ್ರಾಹಕ ಸಹಕಾರಿ ಸಂಘಗಳು ಸ್ಥಾಪನೆಯಾಗಿ ಅವುಗಳಲ್ಲಿ ಮಹಿಳೆಯರ ಭಾಗವಹಿಸುವಿಕೆ ಇತ್ತಾದರೂ ಈ ಸಂಘಗಳ ಚಟುವಟಿಕೆಗಳು ಶಿಕ್ಷಿತ ಮತ್ತು ಮೇಲ್ವರ್ಗದ ಮಹಿಳೆಯರ ಭಾಗವಹಿಸುವಿಕೆಗೆ ಮಾತ್ರ ಸೀಮಿತಗೊಂಡಿದ್ದವು. ಈ ರೀತಿಯ ಸಹಕಾರ ಸಂಘಗಳು ಹೆಚ್ಚಾಗಿ ಪಟ್ಟಣ ಪ್ರದೇಶಗಳಲ್ಲಿ ಸ್ಥಾಪಿಸಲ್ಪಟ್ಟಿದ್ದರಿಂದ ಪಟ್ಟಣದ ಮಹಿಳೆಯರಿಗೆ ಮಾತ್ರ ಇದರಲ್ಲಿ ಭಾಗವಹಿಸಲು ಅವಕಾಶವಿತ್ತು. ಸ್ವಾತಂತ್ರ್ಯಾ ನಂತರ ಅದರಲ್ಲೂ ೧೯೬೫ರ ನಂತರದ ಸಹಕಾರಿ ಕಾಯಿದೆಯ ತಿದ್ದುಪಡಿಯಿಂದಾಗಿ ಎಲ್ಲಾ ಸಹಕಾರ ಸಂಸ್ಥೆಗಳಲ್ಲಿ ಒಂದು ಸ್ಥಾನವನ್ನು ಮಹಿಳೆಗೆ ಮೀಸಲಾಗಿಡಲು ಪ್ರಾರಂಭವಾದಾಗಿನಿಂದ ಹೆಚ್ಚು ಹೆಚ್ಚು ಮಹಿಳೆಯರು ಸಹಕಾರ ಚಳುವಳಿಯಲ್ಲಿ ಭಾಗಿಗಳಾಗುತ್ತಿದ್ದಾರೆ. ಇತ್ತೀಚಿನ ದಶಕಗಳಲ್ಲಿ ಮಹಿಳಾ ವಿವಿಧೋದ್ದೇಶ ಸಹಕಾರಿ ಸಂಘಗಳು, ಜಿಲ್ಲಾ ಮಹಿಳಾ ಕೋ-ಓಪರೇಟಿವ್ ಬ್ಯಾಂಕ್, ಮಹಿಳಾ ಹಾಲು ಉತ್ಪಾದಕರ ಸಂಘಗಳು, ಮೀನುಗಾರ ಮಹಿಳೆಯರ ಸಹಕಾರಿ ಸಂಘಗಳು ಸ್ಥಾಪಿಸಲ್ಪಟ್ಟಿದ್ದು ಮಹಿಳೆಯರು ಅವುಗಳನ್ನು ಯಶಸ್ವಿಯಾಗಿ ಮುನ್ನಡೆಸುತ್ತಿದ್ದಾರೆ.

೧೯೯೯ರಲ್ಲಿ ಸ್ವ-ಸಹಾಯ ಗುಂಪು ಯೋಜನೆ ಜಿಲ್ಲೆಯಲ್ಲಿ ಅನುಷ್ಠಾನಕ್ಕೆ ಬಂದ ಮೇಲೆ ಮಹಿಳಾ ಸ್ವ-ಸಹಾಯ ಗುಂಪುಗಳನ್ನು ರಚಿಸಿಕೊಂಡು ಗ್ರಾಮೀಣ ಮಹಿಳೆಯರು ಕೂಡಾ ಸಹಕಾರಿ ಸಂಘಗಳ ಚಟುವಟಿಕೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗಿಗಳಾಗುತ್ತಿದ್ದಾರೆ. ಮಹಿಳಾ ಸ್ವ-ಸಹಾಯ

ಗುಂಪುಗಳಲ್ಲಿ ಸದಸ್ಯೆಯರಾಗಿರುವ ಮಹಿಳೆಯರು ಸಹಕಾರಿ ಸಂಘಗಳಿಂದ ಸಾಲ ಪಡೆದುಕೊಂಡು ಮಲ್ಲಿಗೆ ಕೃಷಿ, ಅಗರಬತ್ತಿ ತಯಾರಿಕೆ, ಟೈಲರಿಂಗ್, ಹೈನುಗಾರಿಕೆ ಮುಂತಾದ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಆರ್ಥಿಕ ಸ್ವಾತಂತ್ರ್ಯದ ಜೊತೆಗೆ ಆತ್ಮ ವಿಶ್ವಾಸವನ್ನು ಬೆಳೆಸಿಕೊಳ್ಳುತ್ತಿದ್ದಾರೆ. ಎಲ್ಲಾ ಸಹಕಾರಿ ಸಂಸ್ಥೆಗಳಲ್ಲಿ ಎಲ್ಲಾ ವರ್ಗದ ಅರ್ಹ ಮಹಿಳೆಯರಿಗೆ ಹೆಚ್ಚಿನ ಅವಕಾಶಗಳನ್ನು ನೀಡುವುದು, ಮಹಿಳೆಯರಿಗೆ ಸಹಕಾರಿ ಕಾನೂನುಗಳು, ನಿಬಂಧನೆಗಳು ಮತ್ತು ಲೆಕ್ಕಪತ್ರ ನಿರ್ವಹಿಸುವ ಕುರಿತು ತರಬೇತಿ ನೀಡುವುದು, ಸಹಕಾರಿ ಶಿಕ್ಷಣ ನೀಡುವುದು, ಸಹಕಾರಿ ಸಂಘಗಳಲ್ಲಿ ಮಹಿಳೆಯರಿಗೆ ಹೆಚ್ಚಿನ ಉದ್ಯೋಗಾವಕಾಶ ನೀಡುವುದು ಮುಂತಾದ ಕ್ರಮಗಳನ್ನು ಕೈಗೊಂಡು ಮಹಿಳೆಯರು ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಸಹಕಾರ ಚಳುವಳಿಯಲ್ಲಿ ಭಾಗಿಗಳಾಗುವಂತೆ ಪ್ರೋತ್ಸಾಹ ನೀಡುವ ಅವಶ್ಯಕತೆಯಿದೆ.

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಹಕಾರಿ ಕ್ಷೇತ್ರ ಜಿಲ್ಲೆಯ ಶೈಕ್ಷಣಿಕ ಮತ್ತು ಸಾಮಾಜಿಕ ಪರಿವರ್ತನೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ಸಹಕಾರ ಸಂಘಗಳು ಶಾಲೆಗಳನ್ನು ನಡೆಸುವ, ವಿದ್ಯಾರ್ಥಿ ವೇತನಗಳನ್ನು ನೀಡುವ ಮೂಲಕ ಶಿಕ್ಷಣ ಕ್ಷೇತ್ರವನ್ನು ಪ್ರೋತ್ಸಾಹಿಸುತ್ತಿದ್ದವು. ಸಹಕಾರಿ ಶಿಕ್ಷಣ ಪ್ರಚಾರಕ್ಕೂ ಕ್ರಮ ಕೈಗೊಳ್ಳಲಾಗಿತ್ತು. ಮೊಳಹಳ್ಳಿ ಶಿವರಾಯರು ಶಿಕ್ಷಣ ಕ್ಷೇತ್ರದಲ್ಲಿ ಕೆಲವು ಹೊಸ ಪ್ರಯೋಗಗಳಾಗಲು ಪ್ರೇರಣೆ ನೀಡಿದರು. ಶಾಲೆಗಳಲ್ಲಿ ವಿದ್ಯಾರ್ಥಿ ಸಹಕಾರ ಸಂಘಗಳನ್ನು ಸ್ಥಾಪಿಸಲಾಗಿತ್ತು. ಅಂದಿಗೆ ಹೋಲಿಸಿದರೆ ಇಂದು ಶೈಕ್ಷಣಿಕ ಕ್ಷೇತ್ರದಲ್ಲಿ ಸಹಕಾರ ಸಂಘಗಳ ಪಾತ್ರ ವಿದ್ಯಾರ್ಥಿ ವೇತನ ವಿತರಿಸುವುದು, ದಕ್ಷಿಣ ಕನ್ನಡ ಸಹಕಾರಿ ಯೂನಿಯನ್‌ನ ಮೂಲಕ ಸಹಕಾರಿ ವಿಷಯಗಳಿಗೆ ಸಂಬಂಧಿಸಿದಂತೆ ಸ್ಪರ್ಧೆಗಳನ್ನು ಏರ್ಪಡಿಸುವುದು ಮುಂತಾದ ಚಟುವಟಿಕೆಗಳಿಗೆ ಮಾತ್ರ ಮೀಸಲಾಗಿದೆ. ಪ್ರಸ್ತುತ ಶೈಕ್ಷಣಿಕ ರಂಗದ ಅಭಿವೃದ್ಧಿಯಲ್ಲಿ ಸಹಕಾರಿ ಕ್ಷೇತ್ರ ಹೊಸ ಪಾತ್ರ ನಿರ್ವಹಿಸಬೇಕಾಗಿದೆ. ಸಹಕಾರ ತತ್ವದಡಿಯಲ್ಲಿ ಶಿಕ್ಷಣ ಸಂಸ್ಥೆಗಳ ಸ್ಥಾಪನೆಗೆ ಒತ್ತು ನೀಡುವುದು, ಶಾಲಾ ಕಾಲೇಜುಗಳಲ್ಲಿ ಸಹಕಾರಿ ಶಿಕ್ಷಣ ಪ್ರಚಾರದ ಮೂಲಕ ವಿದ್ಯಾರ್ಥಿಗಳನ್ನು ಸಹಕಾರ ಚಳುವಳಿಯತ್ತ ಆಕರ್ಷಿಸುವುದು, ವಿದ್ಯಾರ್ಥಿ ಸಹಕಾರಿ ಸಂಘಗಳ ಸ್ಥಾಪನೆಗೆ ಒತ್ತು ನೀಡುವುದು, ಪ್ರಸ್ತುತ ಅಸ್ತಿತ್ವದಲ್ಲಿರುವ ವಿದ್ಯಾರ್ಥಿ ಸಹಕಾರಿ ಸಂಘಗಳನ್ನು ಪುನರ್ ಸಂಘಟಿಸುವುದು, ವಿದ್ಯಾರ್ಥಿಗಳಿಗೆ ಶಿಕ್ಷಣದ ಅವಶ್ಯಕತೆಗಳಿಗಾಗಿ ಸಾಲ ಸೌಲಭ್ಯ ಒದಗಿಸುವುದು ಮುಂತಾದ ಕ್ರಮಗಳನ್ನು ಕೈಗೊಳ್ಳುವ ಮೂಲಕ ಜಿಲ್ಲೆಯಲ್ಲಿ ಶೈಕ್ಷಣಿಕ ಕ್ಷೇತ್ರದ ಅಭಿವೃದ್ಧಿಗೆ ಸಹಕಾರಿ ಕ್ಷೇತ್ರ ಇನ್ನಷ್ಟು ಪ್ರೋತ್ಸಾಹ ನೀಡಬಹುದು.

ಜಿಲ್ಲೆಯ ಸಾಮಾಜಿಕ ಕ್ಷೇತ್ರದ ಪರಿವರ್ತನೆಯಲ್ಲಿ ಸಹಕಾರಿ ಕ್ಷೇತ್ರ ಇಂದು ನಿರ್ಣಾಯಕ ಪಾತ್ರ ವಹಿಸುತ್ತಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ಸಮಾಜದಲ್ಲಿ ಹಿಂದುಳಿದ ವರ್ಗಗಳು ಮತ್ತು ಮಹಿಳೆಯರನ್ನು

ಸಹಕಾರ ತತ್ವದಡಿಯಲ್ಲಿ ಸಂಘಟಿಸುವ ಪ್ರಯತ್ನಗಳಾಗಿ ಮಹಿಳೆಯರ ಮತ್ತು ಹಿಂದುಳಿದ ವರ್ಗಗಳ ಸಹಕಾರ ಸಂಘಗಳು ಸ್ಥಾಪನೆಗೊಂಡಿದ್ದರೂ ಅವುಗಳು ಈ ವರ್ಗಗಳ ಮತ್ತು ಮಹಿಳೆಯರ ಜೀವನ ಮಟ್ಟದಲ್ಲಿ ಹೆಚ್ಚಿನ ಸುಧಾರಣೆಗಳನ್ನು ತರುವಲ್ಲಿ ಸಫಲವಾಗಲಿಲ್ಲ. ಆದರೆ ಸಹಕಾರಿ ನೇತಾರರು ಕೈಗೊಂಡ ಮಧ್ಯಪಾನ ವಿರೋಧಿ ಮತ್ತು ಅಸ್ಪೃಶ್ಯತಾ ನಿವಾರಣಾ ಕಾರ್ಯಕ್ರಮಗಳು ಸ್ವಲ್ಪ ಮಟ್ಟಿಗೆ ಈ ಸಾಮಾಜಿಕ ಪಿಡುಗುಗಳನ್ನು ನಿವಾರಿಸಲು ಯಶಸ್ವಿಯಾಗಿದ್ದವು.

ಸ್ವಾತಂತ್ರ್ಯಾ ನಂತರದಲ್ಲಿ ಅದರಲ್ಲೂ ಇತ್ತೀಚಿನ ದಶಕಗಳಲ್ಲಿ ಸಹಕಾರಿ ಕ್ಷೇತ್ರ ಮಹಿಳೆಯರ ಮತ್ತು ಹಿಂದುಳಿದ ವರ್ಗಗಳ ಜೀವನ ಮಟ್ಟವನ್ನು ಸುಧಾರಿಸುವಲ್ಲಿ ಹೆಚ್ಚು ಯಶಸ್ವಿಯಾಗಿವೆ. ಇಂದು ಸಹಕಾರಿ ಕ್ಷೇತ್ರ ಮಹಿಳೆಯರು ಮತ್ತು ದುರ್ಬಲ ವರ್ಗಗಳ ಜನರನ್ನು ಸ್ವಾವಲಂಭಿಗಳನ್ನಾಗಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದು ಆ ಮೂಲಕ ಅವರ ಸಾಮಾಜಿಕ ಜೀವನದಲ್ಲಿ ಪರಿಣಾಮಕಾರಿ ಬದಲಾವಣೆಗಳನ್ನು ತಂದಿದೆ.

ಜಿಲ್ಲೆಯ ಆರ್ಥಿಕ ಅಭಿವೃದ್ಧಿಗೆ ಸಹಕಾರಿ ರಂಗ ಮಹತ್ವದ ಕೊಡುಗೆ ನೀಡಿದೆ. ಗ್ರಾಮೀಣಾಭಿವೃದ್ಧಿಯಲ್ಲೂ ಸಹಕಾರಿ ರಂಗ ಪ್ರಮುಖ ಪಾತ್ರ ವಹಿಸುತ್ತಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ಸೀಮಿತ ನೆಲೆಯಲ್ಲಿ ಜಿಲ್ಲೆಯಲ್ಲಿ ಆರ್ಥಿಕ ಅಭಿವೃದ್ಧಿಯನ್ನು ಪ್ರೋತ್ಸಾಹಿಸುತ್ತಿದ್ದ ಸಹಕಾರಿ ರಂಗ ಸ್ವಾತಂತ್ರ್ಯಾ ನಂತರ ಜಿಲ್ಲೆಯ ಆರ್ಥಿಕಾಭಿವೃದ್ಧಿಯಲ್ಲಿ ಪರಿಣಾಮಕಾರಿ ಪಾತ್ರ ವಹಿಸುತ್ತಿದೆ. ಜಿಲ್ಲೆಯ ಆರ್ಥಿಕ ಕ್ಷೇತ್ರವನ್ನು ಅಭಿವೃದ್ಧಿ ಪಡಿಸುವ ನಿಟ್ಟಿನಲ್ಲಿ ಇನ್ನಷ್ಟು ಕೆಲಸಗಳನ್ನು ಸಹಕಾರಿ ಕ್ಷೇತ್ರ ಕೈಗೆತ್ತಿಕೊಳ್ಳಬಹುದು. ಕೃಷಿ ಚಟುವಟಿಕೆಗಳ ಅಭಿವೃದ್ಧಿಯ ದೃಷ್ಟಿಯಿಂದ ಕೃಷಿಕರಿಗೆ ವೈಜ್ಞಾನಿಕವಾಗಿ ಕೃಷಿ ಕೈಗೊಳ್ಳಲು ಮಾರ್ಗದರ್ಶನ ನೀಡುವುದು, ಸಹಕಾರಿ ಮಾರುಕಟ್ಟೆಯ ವಿಸ್ತರಣೆ, ವೆನಿಲ್ಲಾ, ಸ್ಟೀವಿಯಾ ಮುಂತಾದ ಉಪ ಬೆಳೆಗಳನ್ನು ಕೃಷಿಕರನ್ನು ಪ್ರೋತ್ಸಾಹಿಸುವುದು. ಅವುಗಳಿಗೆ ಸೂಕ್ತ ಸಹಕಾರಿ ಮಾರುಕಟ್ಟೆ ವ್ಯವಸ್ಥೆ ಮಾಡುವುದು, ಕೃಷಿ ಉತ್ಪನ್ನಗಳ ಮೌಲ್ಯವರ್ಧನಾ ವ್ಯವಸ್ಥೆ ರೂಪಿಸುವುದು, ಸಹಕಾರಿ ಉದ್ಯಮಗಳನ್ನು ಪ್ರೋತ್ಸಾಹಿಸುವುದು, ಸಹಕಾರಿ ಕಾರ್ಖಾನೆಗಳ ಸ್ಥಾಪನೆ ಮತ್ತು ಆರ್ಥಿಕವಾಗಿ ಸಂಕಷ್ಟದಲ್ಲಿರುವ ಸಹಕಾರಿ ಕಾರ್ಖಾನೆಗಳನ್ನು ಪುನರ್ ಸಂಘಟಿಸುವುದು, ಮೂಲಭೂತ ಸೌಕರ್ಯಗಳಿಲ್ಲದ ಕುಗ್ರಾಮಗಳನ್ನು ದತ್ತು ಸ್ವೀಕರಿಸಿ ಅವುಗಳ ಅಭಿವೃದ್ಧಿಗೆ ಯೋಜನೆಗಳನ್ನು ರೂಪಿಸುವ್ವದು, ಸ್ವ-ಸಹಾಯ ಗುಂಪುಗಳ ಚಟುವಟಿಕೆಗಳಿಗೆ ಹೆಚ್ಚಿನ ಪ್ರೋತ್ಸಾಹ ನೀಡುವುದು, ಗ್ರಾಮೀಣಾಭಿವೃದ್ಧಿಯನ್ನು ಸಾಧಿಸುವ ನಿಟ್ಟಿನಲ್ಲಿ ಸಹಕಾರ ಸಂಘಗಳು ಆಯಾಯ ಗ್ರಾಮ ಪಂಚಾಯತ್‌ಗಳೊಂದಿಗೆ ಒಪ್ಪಂದ ಮಾಡಿಕೊಳ್ಳುವುದು, ಎರಡು-ಮೂರು ಸಹಕಾರ ಸಂಘಗಳು ಎರಡು ಅಥವಾ ಅದಕ್ಕಿಂತ ಹೆಚ್ಚಿನ ಗ್ರಾಮ ಪಂಚಾಯತ್‌ಗಳೊಂದಿಗೆ ಒಪ್ಪಂದ ಮಾಡಿಕೊಂಡು ಗ್ರಾಮ ಪಂಚಾಯತ್‌ಗಳ ಗ್ರಾಮೀಣ ಯೋಜನೆಗಳಲ್ಲಿ ತಮ್ಮನ್ನು

ತೊಡಗಿಸಿಕೊಳ್ಳುವುದು, ಗ್ರಾಮೀಣ ಪ್ರದೇಶದಲ್ಲಿ ಸಹಕಾರ ಸಂಘಗಳು ಆ ಇಡೀ ಗ್ರಾಮದ ಮಾಹಿತಿ ಕೇಂದ್ರವಾಗಿ ಕಾರ್ಯಾಚರಿಸುವುದು, ಗ್ರಾಮದ ಅವಶ್ಯ ಯೋಜನೆಗಳ ರೂಪುರೇಷೆಯನ್ನು ಸಿದ್ಧಪಡಿಸುವ ಸಂದರ್ಭದಲ್ಲಿ "ಗ್ರಾಮ ಸಭೆ"ಗಳ ಮೂಲಕ ಗ್ರಾಮ ಪಂಚಾಯತ್‌ನೊಂದಿಗೆ ಕೈಜೋಡಿಸುವುದು ಇತ್ಯಾದಿ ಯೋಜನೆಗಳನ್ನು ಸೇರಿಸಿಕೊಂಡು ಸಹಕಾರ ಕ್ಷೇತ್ರವು ತನ್ನ ಈ ಹಿಂದಿನ ಸಾಂಪ್ರದಾಯಿಕ ಉದ್ದೇಶಗಳಲ್ಲಿ ಈಗಿನ ಕಾಲಕ್ಕನುಗುಣವಾಗಿ ಅಗತ್ಯದ ತಿದ್ದುಪಡಿಯನ್ನು ಮಾಡಿ ಮುಂದುವರಿದರೆ ಜಿಲ್ಲೆಯ ಆರ್ಥಿಕ ಹಾಗೂ ಗ್ರಾಮೀಣ ಅಭಿವೃದ್ಧಿಯನ್ನು ಸಾಧಿಸುವಲ್ಲಿ ಇನ್ನಷ್ಟು ಮಹತ್ತರ ಪಾತ್ರ ವಹಿಸಬಹುದು ಎಂಬುದು ನನ್ನ ಅಭಿಮತ.

ಇಂದು ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ (ಹಿಂದಿನ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆ) ಸಹಕಾರ ಚಳುವಳಿ ಹೆಚ್ಚು ಯಶಸ್ವಿಯಾಗಿ ಮುಂದುವರಿಯುತ್ತಿದೆ ಎನ್ನುವುದರಲ್ಲಿ ಸಂಶಯವಿಲ್ಲ. ಆದರೆ ಉಭಯ ಜಿಲ್ಲೆಗಳ ಸಹಕಾರಿ ಕ್ಷೇತ್ರ ಸಮಸ್ಯೆಗಳಿಂದ ಮುಕ್ತವಾಗಿಲ್ಲ. ಸಹಕಾರ ಕಾಯಿದೆಯಲ್ಲಿರುವ ನ್ಯೂನತೆಗಳು, ಲೆಕ್ಕ ಪರಿಶೋಧನೆಯಲ್ಲಿ ಆಗುತ್ತಿರುವ ವಿಳಂಬ, ಸದಸ್ಯರ ನಿರ್ಲಕ್ಷತನ, ರಾಜಕೀಯ ಹಸ್ತಕ್ಷೇಪ ಮುಂತಾದವುಗಳು ಪ್ರಸ್ತುತ ಜಿಲ್ಲೆಯ ಸಹಕಾರಿ ಕ್ಷೇತ್ರ ಎದುರಿಸುತ್ತಿರುವ ಸಮಸ್ಯೆಗಳು. ಜೊತೆಗೆ ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣ ಮುಂತಾದ ಆರ್ಥಿಕ ನೀತಿಗಳು ಸಹಕಾರಿ ಕ್ಷೇತ್ರಕ್ಕೆ ಸವಾಲು ಒಡ್ಡುತ್ತಿವೆ. ಈ ಸಮಸ್ಯೆಗಳನ್ನು ಬಗೆಹರಿಸಿಕೊಂಡು ಮುಂದುವರಿದರೆ ಮಾತ್ರ ಜಿಲ್ಲೆಯ ಸಹಕಾರಿ ಕ್ಷೇತ್ರ ಇನ್ನು ಮುಂದೆಯೂ ಯಶಸ್ವಿಯಾಗಿ ಮುನ್ನಡೆಯಲು ಸಾಧ್ಯ.

ಸಹಕಾರಿ ಕಾಯಿದೆಯಲ್ಲಿರುವ ನ್ಯೂನತೆಗಳನ್ನು ಸರಕಾರದ ಗಮನಕ್ಕೆ ತಂದು ಅದರಲ್ಲಿ ತಿದ್ದುಪಡಿ ತರುವುದು, ಲೆಕ್ಕ ಪರಿಶೋಧನೆಯಲ್ಲಿ ಆಗುತ್ತಿರುವ ವಿಳಂಬಗಳನ್ನು ತಡೆಗಟ್ಟಲು ಸೂಕ್ತ ಕ್ರಮ ಕೈಗೊಳ್ಳುವುದು, ರಾಜಕೀಯ ಹಸ್ತಕ್ಷೇಪದಿಂದ ಸಹಕಾರಿ ರಂಗವನ್ನು ಮುಕ್ತಗೊಳಿಸಲು ಪ್ರಯತ್ನಿಸುವುದು ಮತ್ತು ದಕ್ಷ, ಪ್ರಾಮಾಣಿಕ, ಪಕ್ಷ ರಾಜಕೀಯ ರಹಿತ ವ್ಯಕ್ತಿಗಳು ಹೆಚ್ಚಿನ ಸಂಖ್ಯೆಯಲ್ಲಿ ಸಹಕಾರಿ ಕ್ಷೇತ್ರದಲ್ಲಿ ಭಾಗವಹಿಸಲು ಅನುಕೂಲವಾಗುವಂತಹ ವಾತಾವರಣ ನಿರ್ಮಾಣ ಮಾಡುವುದು, ಸದಸ್ಯರ ಅಭಿವೃದ್ಧಿಗೆ (Member of Development) ಕ್ರಮ ಕೈಗೊಳ್ಳುವುದು, ಸದಸ್ಯರು ಸಹಕಾರ ಸಂಘಗಳ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಲು ಪ್ರೋತ್ಸಾಹ ನೀಡುವುದು, ದಕ್ಷ, ಪ್ರಾಮಾಣಿಕ ಮತ್ತು ಕರ್ತವ್ಯ ಪ್ರಜ್ಞೆ ಇರುವ ಸಿಬ್ಬಂದಿ ವರ್ಗವನ್ನು ನೇಮಿಸುವುದು, ಸಹಕಾರಿ ಶಿಕ್ಷಣ ಪ್ರಚಾರಕ್ಕೆ ಆದ್ಯತೆ ನೀಡುವುದು, ಯುವ ಜನರು, ಮಹಿಳೆಯರು ಮತ್ತು ದುರ್ಬಲ ವರ್ಗದ ಜನರನ್ನು ಚಳುವಳಿಯತ್ತ ಆಕರ್ಷಿಸಲು ಕ್ರಮ ಕೈಗೊಳ್ಳುವುದು, ಸಹಕಾರ ಭಾರತಿ, ಸಿ.ಡಿ.ಎಫ್, ಸಿ.ಐ.ಪಿ ನಂತಹ ಸಹಕಾರಿ ಕ್ಷೇತ್ರದ ಸ್ವಯಂ ಸೇವಾ ಸಂಘಟನೆಗಳ ಮಾರ್ಗದರ್ಶನದಲ್ಲಿ

ಸಹಕಾರ ಕ್ಷೇತ್ರವನ್ನು ಮುನ್ನಡೆಸುವುದು, ಹೊಸ ಹೊಸ ಆವಿಷ್ಕಾರಗಳು ಹಾಗೂ ತಂತ್ರಜ್ಞಾನಗಳನ್ನು ಅಳವಡಿಸಿಕೊಳ್ಳಲು ವಿವಿಧ ಸಹಕಾರ ಸಂಘಗಳಿಗೆ ಸರಕಾರ ಮತ್ತು ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಆರ್ಥಿಕ ನೆರವು ನೀಡುವುದು ಮುಂತಾದ ಕ್ರಮಗಳನ್ನು ಕೈಗೊಂಡಲ್ಲಿ ಜಿಲ್ಲೆಯಲ್ಲಿ ಸಹಕಾರ ಕ್ಷೇತ್ರ ಇನ್ನಷ್ಟು ಪರಿಪೂರ್ಣವಾಗಿ ಬೆಳೆಯಲು ಸಾಧ್ಯವೆಂಬುದು ನನ್ನ ಅನಿಸಿಕೆ.

ಅರ್ಥವ್ಯವಸ್ಥೆಯು ಉದಾರೀಕರಣ, ಜಾಗತೀಕರಣ ಮತ್ತು ಖಾಸಗೀಕರಣದ ಕಡೆ ದಾಪುಗಾಲು ಹಾಕುತ್ತಿರುವ ಈ ಸಂದರ್ಭದಲ್ಲಿ ಜಿಲ್ಲೆಯ ಸಮಗ್ರ ಅಭಿವೃದ್ಧಿಗೆ ಸಹಕಾರ ಒಂದೇ ಮಾರ್ಗ. ಈ ಮಾರ್ಗವನ್ನು ಗಟ್ಟಿಗೊಳಿಸಿದಲ್ಲಿ ಈ ಎಲ್ಲಾ ಆರ್ಥಿಕ ನೀತಿಗಳಿಂದ ಹೆಚ್ಚಿನ ತೊಂದರೆಗೊಳಗಾಗುವ ಶ್ರೀ ಸಾಮಾನ್ಯನಿಗೆ ಒಂದು ಆಸರೆ ದೊರಕಿದಂತಾಗುತ್ತದೆ. ಸಹಕಾರದ ಅಡಿಗಟ್ಟು ಮತ್ತು ನೆಲೆ ಭದ್ರವಾಗಿದ್ದರೆ ಆರ್ಥಿಕ, ಸಾಮಾಜಿಕ, ರಾಜಕೀಯ, ಶೈಕ್ಷಣಿಕ ಅಥವಾ ಇನ್ನಿತರ ಯಾವುದೇ ಕ್ಷೇತ್ರದಲ್ಲಿ 'ಸಮಸ್ಯೆಗಳು' ಜನರನ್ನು ಬೆಂಬತ್ತಿದರೂ ಅವುಗಳ ವಿಷವರ್ತುಲದಿಂದ ಹೊರಬಂದು ಜನರು ನೆಮ್ಮದಿಯ ಬಾಳ್ವೆಯನ್ನು ಬಾಳುವುದು ಸಾಧ್ಯವೆಂಬುದು ಅನುಭವ ಮಾತ್ರವಲ್ಲ, ಅಂದೊಂದು ಐತಿಹಾಸಿಕ ಸತ್ಯ. ಇಂದು ದಕ್ಷಿಣ ಕನ್ನಡ ಜಿಲ್ಲೆ, ಕರ್ನಾಟಕ ರಾಜ್ಯ ಅಥವಾ ಭಾರತ ದೇಶದಲ್ಲಿ ಹಲವು ವಿಚಾರಗಳು ಬಹಳಷ್ಟು ಕ್ಲಿಷ್ಟಕರ ಮತ್ತು ಸಂದಿಗ್ಧ ಸ್ಥಿತಿಯಲ್ಲಿದ್ದು ಅವುಗಳ ನಿವಾರಣೆಗಿರುವ ಏಕೈಕ ಮಾರ್ಗ "ಸಹಕಾರ" ತತ್ವದ ಅಳವಡಿಕೆ.

********************

# ಅನುಬಂಧ ೧

## ಸ್ವಾತಂತ್ರ್ಯ ನಂತರದ ದಿನಗಳಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅಸ್ತಿತ್ವದಲ್ಲಿರುವ ಸಹಕಾರ ಸಂಘಗಳು (ಲಭ್ಯ ಮಾಹಿತಿಯನ್ವಯ)

### ಜಿಲ್ಲಾ ವ್ಯವಹಾರ ಕ್ಷೇತ್ರದ ಸಂಘಗಳು

| ಕ್ರ ಸಂ. | ಸಂಘದ ಹೆಸರು | ಆರಂಭ ವರ್ಷ |
|---|---|---|
| ೧. | ದ.ಕ. ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಲಿ., ಮಂಗಳೂರು | ೧೯೧೩ |
| ೨. | ದ.ಕ. ಕೃಷಿ ಉತ್ಪನ್ನ ಸಹಕಾರಿ ಮಾರಾಟ ಸಂಘ ಲಿ., ಮಂಗಳೂರು | ೧೯೨೫ |
| ೩. | ದ.ಕ. ಸೆಂಟ್ರಲ್ ಕೋ-ಅಪರೇಟಿವ್ ಹೋಲ್‌ಸೇಲ್ ಸ್ಟೋರ್ಸ್, ಮಂಗಳೂರು | ೧೯೪೩ |
| ೪. | ದ.ಕ. ಜಿಲ್ಲಾ ಸಹಕಾರಿ ಯೂನಿಯನ್ ಲಿ., ಮಂಗಳೂರು | ೧೯೬೦ |
| ೫. | ದ.ಕ. ಜಿಲ್ಲಾ ತೋಟಗಾರಿಕಾ ಉತ್ಪತ್ತಿ ಸಹಕಾರಿ ಮಾರಾಟ ಸಂಘ ಲಿ., ಮಂಗಳೂರು | ೧೯೬೫ |
| ೬. | ದ.ಕ. ಜಿಲ್ಲಾ ಕೋಳಿ ಸಾಕಣೆ ಸಹಕಾರಿ ಸಂಘ ಲಿ., ಮಂಗಳೂರು | ೧೯೬೪ |
| ೭. | ದ.ಕ. ಜಿಲ್ಲಾ ಸಹಕಾರಿ ಹಾಲು ಉತ್ಪಾದಕರ ಒಕ್ಕೂಟ, ಮಂಗಳೂರು | ೧೯೮೬ |
| ೮. | ದ. ಕ. ಜಿಲ್ಲಾ ಹೋಮಿಯೋಪಥಿಕ್ ಹೆಲ್ತ್ ಕೋ. ಸೋ. ಲಿ., ಮಂಗಳೂರು | ೧೯೬೬ |
| ೯. | ದ. ಕ. ಜಿಲ್ಲಾ ಸಹಕಾರಿ ಮೀನು ಮಾರಾಟ ಫೆಡರೇಶನ್ ಲಿ., ಮಂಗಳೂರು | ೧೯೫೪ |
| ೧೦. | ದ. ಕ. ಜಿಲ್ಲಾ ಸಹಕಾರಿ ಕೈಗಾರಿಕಾ ಬ್ಯಾಂಕ್ ಲಿ., ಮಂಗಳೂರು | ೧೯೬೩ |
| ೧೧. | ದ. ಕ. ಜಿಲ್ಲಾ ಸಹಕಾರಿ, ನೌಕರರ ಸಹಕಾರಿ ಸಂಘ ಲಿ., ಮಂಗಳೂರು | ೧೯೩೦ |
| ೧೨. | ದ. ಕ. ಸಹಕಾರಿ ಸರಕಾರಿ ನೌಕರರ ಸಹಕಾರಿ ಸಂಘ ಲಿ., ಮಂಗಳೂರು | ೧೯೨೧ |
| ೧೩. | ದ. ಕ. ಜಿಲ್ಲಾ ಶೆಡ್ಯೂಲ್ಡ್ ಜಾತಿ ಮತ್ತು ಶೆಡ್ಯೂಲ್ಡ್ ಪಂಗಡದವರ ಸಹಕಾರಿ ಸಂಘ ಲಿ., ಮಂಗಳೂರು | ೧೯೫೮ |
| ೧೪. | ದ. ಕ. ಜಿಲ್ಲಾ ಪೋಲೀಸ್ ಅಧಿಕಾರಿಗಳ ಸಹಕಾರಿ ಸಂಘ ಲಿ., ಮಂಗಳೂರು | ೧೯೨೪ |
| ೧೫. | ದ. ಕ. ಜಿಲ್ಲಾ ಫಿಶರೀಸ್ ನೌಕರರ ಸಹಕಾರಿ ಸಂಘ ಲಿ., ಮಂಗಳೂರು | ೧೯೩೨ |
| ೧೬. | ದ. ಕ. ಜಿಲ್ಲಾ ಸರಕಾರೀ ನೌಕರರ ಸಹಕಾರಿ ಬ್ಯಾಂಕ್ ಲಿ., ಮಂಗಳೂರು | ೧೯೧೮ |
| ೧೭. | ದ. ಕ. ಪೋಸ್ಟು ಮತ್ತು ಟೆಲಿಗ್ರಾಫ್ ನೌಕರರ ಬ್ಯಾಂಕ್ ಲಿ., ಮಂಗಳೂರು | ೧೯೬೪ |
| ೧೮. | ದ. ಕ. ಜಿಲ್ಲಾ ವೇರ್‌ಹೌಸಿಂಗ್ ಎಂಡ್ ಗೋಡೌನ್ ಕೋ. ಸೊಸ್ಯಾಟಿ, ಮಂಗಳೂರು | ೧೯೬೯ |
| ೧೯. | ದ. ಕ. ಜಿಲ್ಲಾ ಸಹಕಾರೀ ತಾಳಿಬೆಲ್ಲ ಮಾರ್ಕೆಟಿಂಗ್ ಫೆಡರೇಶನ್ ಲಿ., ಮಂಗಳೂರು | ೧೯೫೩ |
| ೨೦. | ದ. ಕ. ಆಟೋ ಮೊಬ್ಯಾಲ್ ಒಪರೇಟರ್ಸ್ ಸಹಕಾರಿ ಸಂಘ ಲಿ., ಮಂಗಳೂರು | ೧೯೬೨ |
| ೨೧. | ಪೋಸ್ಟು ಮತ್ತು ತಂತಿ ಇಲಾಖೆ ನೌಕರರ ಸಹಕಾರಿ ಬಿಲ್ಡಿಂಗ್ ಸೊಸ್ಯಾಟಿ ಲಿ., ಮಂಗಳೂರು | ೧೯೭೦ |
| ೨೨. | ದ. ಕ. ಕುಲಾಲ ಶ್ರೀರಾಮ ಸೇವಾ ಸಹಕಾರೀ ಸಂಘ ಲಿ., ಮಂಗಳೂರು | ೧೯೪೧ |
| ೨೩. | ದ. ಕ. ಗೋಲ್ಡ್ ಸ್ಮಿತ್ ಇಂಡಸ್ಟ್ರೀಯಲ್ ಕೋಪರೇಟಿವ್ ಸೊಸ್ಯಾಟಿ ಲಿ., ಮಂಗಳೂರು | ೧೯೬೪ |
| ೨೪. | ಮೈಸೂರು ಯುನ್ಯಾಟೆಡ್ ಆರ್ಟಿಸಾನ್ಸ್ ಇಂಡಸ್ಟ್ರಿಯಲ್ ಕೋ. ಸೊಸ್ಯಾಟಿ ಲಿ., ಕುಲಶೇಖರ, ಮಂಗಳೂರು | ೧೯೭೧ |
| ೨೫. | ದ. ಕ. ಸಹಕಾರಿ ಗುಡಿ ಕೈಗಾರಿಕಾ ಸಂಘ ಲಿ., ಮಂಗಳೂರು | ೧೯೪೦ |
| ೨೬. | ದ. ಕ. ಸಣ್ಣ ಕೈಗಾರಿಕಾ ಸಹಕಾರಿ ಸರಬರಾಜು ಮತ್ತು ಮಾರಾಟ ಸಹಕಾರಿ ಸಂಘ ಲಿ., ಮಂಗಳೂರು | ೧೯೫೬ |
| ೨೭. | ದ. ಕ. ಪೋಲೀಸ್ ಆಫೀಸರ ಸಹಕಾರಿ ಸ್ಟೋರ್ಸ್ ಲಿ., ಮಂಗಳೂರು | ೧೯೪೩ |
| ೨೮. | ಮಂಗಳೂರು ಅಗ್ರಿಕಲ್ಚರಿಸ್ಟ್ ಸೌಹಾರ್ದ ಸಹಕಾರಿ ಲಿ., ಮಾಸ್, ಮಂಗಳೂರು | ೨೦೦೧ |
| | **ಉಡುಪಿ** | |
| ೨೯. | ಉಡುಪಿ ಡಿವಿಜನ್ ಎಲ್.ಐ.ಸಿ. ನೌಕರರ ಸಹಕಾರಿ ಕ್ರೆಡಿಟ್ ಸಂಘ ಲಿ., ಉಡುಪಿ | ೧೯೬೨ |
| | **ಕಾರ್ಕಳ** | |
| ೩೦. | ದ. ಕ. ಜಿಲ್ಲಾ ಬತ್ತಿದ ಜಾನುವಾರು ಸಾಕಣೆ ಮತ್ತು ಹುಲ್ಲುಗಾವಲು ಸಹಕಾರಿ ಸಂಘ ಲಿ., ಕಾರ್ಕಳ (ಲಿಕ್ವಿಡೇಶನ್‌ನಲ್ಲಿದೆ) | ೧೯೫೬ |
| ೩೧. | ದ. ಕ. ಜಿಲ್ಲಾ ಗೇರು ಉತ್ಪಾದಕರ ಸಹಕಾರಿ ಸಂಘ ಲಿ., ಕಾರ್ಕಳ | ೧೯೬೭ |
| | **ಪುತ್ತೂರು** | |
| ೩೨. | ಮಹಾಳೀ ರೋಗ ನಿವಾರಣ ಸಹಕಾರಿ ಸಂಘ, ಪುತ್ತೂರು | ೧೯೩೬ |
| ೩೩. | ದ. ಕ. ಜೇನು ವ್ಯವಸಾಯ ಮತ್ತು ಮಾರಾಟ ಸಂಘ ಲಿ., ಪುತ್ತೂರು | |

**ಕರ್ನಾಟಕ ಮತ್ತು ಕೇರಳ ರಾಜ್ಯಗಳ ವ್ಯವಹಾರ ಕ್ಷೇತ್ರವಿರುವ ಸಂಘ**

೩೪. ಸೆಂಟ್ರಲ್ ಅರೆಕ್‌ನೆಟ್ ಮಾರ್ಕೆಟಿಂಗ್ ಆ್ಯಂಡ್ ಪ್ರೊಸೆಸಿಂಗ್ ಕೋ–ಓಪರೇಟಿವ್ ಲಿ. –ಕ್ಯಾಂಪ್ಕೋ ಮಂಗಳೂರು ೧೯೭೩

**ತಾಲೂಕು ವ ಗ್ರಾಮೀಣ ವ್ಯವಹಾರ ಕ್ಷೇತ್ರದ ಸಂಘಗಳು**

**ಮಂಗಳೂರು**

**ಸಹಕಾರಿ ವ್ಯವಸಾಯಿಕ ಬ್ಯಾಂಕ್ ಲಿ.,**

೧. ಬಜ್ಪೆ ಸಹಕಾರಿ ವ್ಯವಸಾಯಿಕ ಬ್ಯಾಂಕ್ ಲಿ., ಬಜ್ಪೆ, ಮಂಗಳೂರು ೧೯೫೬
೨. ಗುರುಪುರ ಸಹಕಾರಿ ವ್ಯವಸಾಯಿಕ ಬ್ಯಾಂಕ್ ಲಿ., ಗುರುಪುರ, ಮಂಗಳೂರು ೧೯೫೬
೩. ಕೋಟೆಕಾರು ಸಹಕಾರಿ ವ್ಯವಸಾಯಿಕ ಬ್ಯಾಂಕ್ ಲಿ., ಕೋಟೆಕಾರು, ಮಂಗಳೂರು ೧೯೫೬
೪. ಪಡುಪಣಂಬೂರು ಸಹಕಾರಿ ವ್ಯವಸಾಯಿಕ ಬ್ಯಾಂಕ್ ಲಿ., ಹಳೇಅಂಗಡಿ,ಮಂಗಳೂರು ೧೯೫೬
೫. ಕಿನ್ನಿಗೋಳಿ ರೂರಲ್ ಸಹಕಾರಿ, ಬ್ಯಾಂಕ್ ಲಿ., ಕಿನ್ನಿಗೋಳಿ, ಮಂಗಳೂರು ೧೯೫೫

ಸೇವಾ ಸಹಕಾರಿ ಬ್ಯಾಂಕ್

೬. ಮೂಲ್ಕಿ ಸೇವಾ ಸಹಕಾರಿ, ಬ್ಯಾಂಕ್ ಲಿ., ಮೂಲ್ಕಿ, ಮಂಗಳೂರು ೧೯೬೯
೭. ಸುರತ್ಕಲ್, ಸೇವಾ ಸಹಕಾರಿ, ಬ್ಯಾಂಕ್ ಲಿ., ಸುರತ್ಕಲ್, ಮಂಗಳೂರು ೧೯೧೨
೮. ಉಳ್ಳಾಲ ಪೆರಮನ್ನೂರು ಸೇವಾ ಸಹಕಾರಿ ಬ್ಯಾಂಕ್ ಲಿ., ಪೆರಮನ್ನೂರು, ಮಂಗಳೂರು ೧೯೭೩
೯. ಕಿನ್ನಿಗೋಳಿ ಸೇವಾ ಸಹಕಾರಿ ಬ್ಯಾಂಕ್ ಲಿ., ಕಿನ್ನಿಗೋಳಿ, ಮಂಗಳೂರು ೧೯೬೯
೧೦. ನೀರಮಾರ್ಗ ಸೇವಾ ಸಹಕಾರಿ ಬ್ಯಾಂಕ್ ಲಿ., ನೀರಮಾರ್ಗ, ಮಂಗಳೂರು ೧೯೫೫

**ಸೇವಾ ಸಹಕಾರೀ ಸಂಘಗಳು**

೧೧. ಐಕಳ ಸೇವಾ ಸಹಕಾರಿ ಸಂಘ ಲಿ., ಐಕಳ, ಮಂಗಳೂರು ೧೯೨೩
೧೨. ಅತಿಕಾರಿಬೆಟ್ಟು ಸೇವಾ ಸಹಕಾರಿ ಸಂಘ ಲಿ., ಅತಿಕಾರಿಬೆಟ್ಟು, ಮಂಗಳೂರು ೧೯೭೦
೧೩. ಅಳಪೆ ಸೇವಾ ಸಹಕಾರಿ ಸಂಘ ಲಿ., ಕಂಕನಾಡಿ, ಮಂಗಳೂರು ೧೯೭೦
೧೪. ಅಡ್ಯಾರ ಸೇವಾ ಸಹಕಾರಿ ಸಂಘ ಲಿ., ಅಡ್ಯಾರು, ಮಂಗಳೂರು ೧೯೬೦
೧೫. ಅರ್ಕುಳ ಸೇವಾ ಸಹಕಾರಿ ಸಂಘ ಲಿ., ಅರ್ಕುಳ, ಮಂಗಳೂರು ೧೯೬೧
೧೬. ಬಜಾಲ ಸೇವಾ ಸಹಕಾರಿ ಸಂಘ ಲಿ., ಬಜಾಲ, ಮಂಗಳೂರು ೧೯೫೯
೧೭. ಬಳ್ಕುಂಜ ಸೇವಾ ಸಹಕಾರಿ ಸಂಘ ಲಿ., ಬಳ್ಕುಂಜ, ಮಂಗಳೂರು ೧೯೨೧
೧೮ ಬೋಳಿಯಾರ ಸೇವಾ ಸಹಕಾರಿ ಸಂಘ ಲಿ., ಬೋಳಿಯಾರ, ಮಂಗಳೂರು ೧೯೬೨
೧೯. ದಾಮಾಸ್ಕಟ್ಟೆ ಸೇವಾ ಸಹಕಾರಿ ಸಂಘ ಲಿ., ಐಕಳ, ಮಂಗಳೂರು ೧೯೧೭
೨೦. ದೇರೆಬೈಲು ಸೇವಾ ಸಹಕಾರಿ ಸಂಘ ಲಿ., ದೇರೆಬೈಲು, ಮಂಗಳೂರು ೧೯೬೧
೨೧. ಹೊಸಬೆಟ್ಟು ಅಂಜನೇಯ ಸೇವಾ ಸಹಕಾರಿ ಸಂಘ ಲಿ., ಸುರತ್ಕಲ್, ಮಂಗಳೂರು ೧೯೨೩
೨೨. ಜೆಪ್ಪು ಸೇವಾ ಸಹಕಾರಿ ಸಂಘ ಲಿ., ಜೆಪ್ಪಿನಮೊಗ್ರು, ಮಂಗಳೂರು ೧೯೪೯
೨೩. ಕುಳಾಯಿ ಸೇವಾ ಸಹಕಾರಿ ಸಂಘ ಲಿ., ಕುಳಾಯಿ, ಮಂಗಳೂರು ೧೯೪೮
೨೪. ಕುಪ್ಪೆಪದವು ಸೇವಾ ಸಹಕಾರಿ ಸಂಘ ಲಿ., ಕುಪ್ಪೆಪದವು, ಮಂಗಳೂರು ೧೯೪೯
೨೫. ಕುತ್ತೆತ್ತೂರು ಸೇವಾ ಸಹಕಾರಿ ಸಂಘ ಲಿ., ಕುತ್ತೆತ್ತೂರು, ಮಂಗಳೂರು ೧೯೧೯
೨೬. ಮುಚ್ಚೂರು ಸೇವಾ ಸಹಕಾರಿ ಸಂಘ ಲಿ., ಮುಚ್ಚೂರು, ಮಂಗಳೂರು ೧೯೨೪
೨೭. ಪಣಂಬೂರು ಸೇವಾ ಸಹಕಾರಿ ಸಂಘ ಲಿ., ಪಣಂಬೂರು, ಮಂಗಳೂರು ೧೯೧೯
೨೮. ತಣ್ಣೀರುಬಾವಿ ಸೇವಾ ಸಹಕಾರಿ ಸಂಘ ಲಿ., ತಣ್ಣೀರುಬಾವಿ, ಮಂಗಳೂರು ೧೯೨೨
೨೯. ಮಳಲಿ ಸೇವಾ ಸಹಕಾರಿ ಸಂಘ ಲಿ., ಗಂಜಿಮಠ, ಮಂಗಳೂರು ೧೯೧೯
೩೦. ಕದ್ರಿ ಸೇವಾ ಸಹಕಾರಿ ಸಂಘ ಲಿ., ಕದ್ರಿ, ಮಂಗಳೂರು ೧೯೬೫
೩೧. ಕಾವೂರು ಸೇವಾ ಸಹಕಾರಿ ಸಂಘ ಲಿ., ಕಾವೂರು, ಮಂಗಳೂರು ೧೯೬೫
೩೨. ಅದ್ಯಪಾಡಿ ಸೇವಾ ಸಹಕಾರಿ ಸಂಘ ಲಿ., ಅದ್ಯಪಾಡಿ, ಮಂಗಳೂರು ೧೯೨೯
೩೩. ಹರೇಕಳ ಸೇವಾ ಸಹಕಾರಿ ಸಂಘ ಲಿ., ಹರೇಕಳ, ಮಂಗಳೂರು ೧೯೫೭
೩೪. ಕೂಳೂರು ಸೇವಾ ಸಹಕಾರಿ ಸಂಘ ಲಿ., ಕೂಳೂರು, ಮಂಗಳೂರು ೧೯೫೪
೩೫. ವಾಮಂಜೂರು ಸೇವಾ ಸಹಕಾರಿ ಸಂಘ ಲಿ., ವಾಮಂಜೂರು, ಮಂಗಳೂರು ೧೯೫೪
೩೬. ಪದವು ಸೇವಾ ಸಹಕಾರಿ ಸಂಘ ಲಿ., ಪದವು, ಮಂಗಳೂರು ೧೯೧೯
೩೭. ಎಡಪದವು ಸೇವಾ ಸಹಕಾರಿ ಸಂಘ ಲಿ., ಎಡಪದವು, ಮಂಗಳೂರು ೧೯೨೦
೩೮. ಕಳಾವರ ಸೈಂಟ್ ಜೋಸೆಫ್ ಸೇವಾ ಸಹಕಾರಿ ಸಂಘ ಲಿ., ಕಳಾವರ, ಮಂಗಳೂರು ೧೯೧೯

**ಮಾರಾಟ ಸಂಘ**

೩೯. ಮಂಗಳೂರು ತಾಲೂಕು ಕೃಷಿ ಉತ್ಪನ್ನ ಮಾರಾಟ ಸಹಕಾರಿ ಸಂಘ ಲಿ., ಮಂಗಳೂರು ೧೯೩೭

**ಭೂ ಅಭಿವೃದ್ಧಿ ಬ್ಯಾಂಕ್**

೪೦. ಮಂಗಳೂರು ತಾಲೂಕು ಸಹಕಾರಿ ಭೂ ಅಭಿವೃದ್ಧಿ ಬ್ಯಾಂಕ್ ಲಿ., ಮಂಗಳೂರು ೧೯೩೮

| | | |
|---|---|---|
| | **ಧಾನ್ಯ ಬ್ಯಾಂಕ್** | |
| ೪೧ | ಕೋಟೆಕಾರು ಧಾನ್ಯ ಸಹಕಾರಿ ಬ್ಯಾಂಕ್ ಲಿ., ಕೋಟೆಕಾರು, ಮಂಗಳೂರು | ೧೯೨೨ |
| | **ಅರ್ಬನ್ ಬ್ಯಾಂಕ್** | |
| ೪೨ | ಮಂಗಳೂರು ಕೆಥೋಲಿಕ್ ಸಹಕಾರಿ ಬ್ಯಾಂಕ್ ಲಿ., ಮಂಗಳೂರು | ೧೯೧೨ |
| ೪೩ | ಮಂಗಳೂರು ಸಹಕಾರಿ ಬ್ಯಾಂಕ್ ಲಿ., ಮಂಗಳೂರು | ೧೯೧೭ |
| ೪೪ | ಮಂಗಳೂರು ಪ್ರೊಟೆಸ್ಟಂಟ್ ಕ್ರಿಶ್ಚನ್ ಸಹಕಾರಿ ಸಂಘ ಲಿ., ಮಂಗಳೂರು | ೧೯೧೮ |
| | **ನೌಕರರ ಪತ್ತಿನ ಸಂಘ** | |
| ೪೫ | ಸಿ.ಪಿ.ಸಿ. ಎಂಡ್ ಅದರ ಎಲ್ಯಾಡ ಕಂಪೆನಿಗಳ ನೌಕರರ ಸಹಕಾರಿ ಸಂಘ ಲಿ., ಮಂಗಳೂರು | ೧೯೫೩ |
| ೪೬ | ಕೆನರಾ ವರ್ಕ್ ಶೋಫ್ ಎಲ್ಲಾಯಿಸ್ ನೌಕರರ ಸಹಕಾರಿ ಸಂಘ ಲಿ., ಮಂಗಳೂರು | ೧೯೫೯ |
| ೪೭ | ಕೊಳಕಾಡಿ ಕೇಂದ್ರ ಉಪಾಧ್ಯಾಯರ ನೌಕರರ ಸಹಕಾರಿ ಸಂಘ ಲಿ., ಕೊಳಕಾಡಿ, ಮಂಗಳೂರು | ೧೯೫೫ |
| ೪೮ | ಕರ್ನಾಟಕ ಪೊಲಿಟೆಕ್ನಿಕ್ ಸಹಕಾರಿ ಸಂಘ ಲಿ., ಮಂಗಳೂರು | ೧೯೫೫ |
| ೪೯ | ಮಂಗಳೂರು ಪಬ್ಲಿಕ್ ಹೆಲ್ತ್ ಕೆಳದರ್ಜೆ ನೌಕರರ ಸಂಘ, ಮಂಗಳೂರು | ೧೯೪೦ |
| ೫೦ | ಮಂಗಳೂರು ಮುನ್ಸಿಪಲ್ ನೌಕರರ ಸಂಘ, ಮಂಗಳೂರು | ೧೯೨೫ |
| ೫೧ | ಮಂಗಳೂರು ಹಾರ್‌ಬರ್ ಪ್ರೊಜೆಕ್ಟ್ಸ್ ನೌಕರರ ಸಂಘ, ಪಣಂಬೂರು, ಮಂಗಳೂರು | ೧೯೭೧ |
| ೫೨ | ಪಿಯರ್ಸ್‌ಲೆಸ್ಲಿ ಮತ್ತು ಕಂಪೆನಿ ನೌಕರರ ಸಹಕಾರಿ ಸಂಘ ಲಿ., ಮಂಗಳೂರು | ೧೯೬೩ |
| ೫೩ | ಶಾರದ ಪ್ರೆಸ್ ನೌಕರರ ಸಹಕಾರಿ ಸಂಘ ಲಿ., ಮಂಗಳೂರು | ೧೯೬೮ |
| ೫೪ | ಮಂಗಳೂರು ಡಿವಿಜನ್ ಮೈಸೂರು ಸ್ಟೇಟ್ ಎಲಿಮೆಂಟರಿ ಬೋರ್ಡ್ ನೌಕರರ ಸಹಕಾರಿ ಸಂಘ ಲಿ., ಮಂಗಳೂರು | ೧೯೬೪ |
| ೫೫ | ಕೆ.ಆರ್.ಇ.ಸಿ. ನೌಕರರ ಸಹಕಾರಿ ಪತ್ತಿನ ಸಂಘ ಲಿ., ಮಂಗಳೂರು | ೧೯೬೯ |
| ೫೬ | ಬೋಳೂರು ಸಹಕಾರಿ ಪತ್ತಿನ ಸಹಕಾರಿ ಸಂಘ ಲಿ., ಮಂಗಳೂರು | ೧೯೧೯ |
| ೫೭ | ಕದ್ರಿ ನೌಕರರ ಪತ್ತಿನ ಸಹಕಾರಿ ಸಂಘ ಲಿ., ಕದ್ರಿ, ಮಂಗಳೂರು | ೧೯೨೩ |
| ೫೮ | ಮಂಗಳೂರು ಶ್ರೀಗೋಕರ್ಣನಾಥ ದೇವಸ್ಥಾನ ಸಹ.ಸ. ಲಿ., ಮಂಗಳೂರು | ೧೯೨೫ |
| ೫೯ | ಮಂಗಳೂರು ಲೀಗಲ್ ಪ್ರಾಕ್ಟಿಶನರ್ಸ್ ಸಹಕಾರಿ ಸಂಘ ಲಿ., ಮಂಗಳೂರು | ೧೯೫೯ |
| ೬೦ | ಸುಬ್ರಹ್ಮಣ್ಯ ಸಹಕಾರಿ ಬ್ಯಾಂಕ್ ಲಿ., ಮಂಗಳೂರು | ೧೯೫೬ |
| ೬೧ | ವೆಸ್ಟ್ ಕೊಡಿಯಾಲಬೈಲು ಸಹಕಾರಿ ಸಂ., ಕೊಡಿಯಾಲಬೈಲು, ಮಂಗಳೂರು | ೧೯೨೪ |
| | **ಹಾಲು ಉತ್ಪಾದಕರ ಸಂಘ** | |
| ೬೨ | ನಂದಗೋಕುಲ ಹಾಲು ಉತ್ಪಾದಕರ ಸಹಕಾರಿ ಸಂಘ, ಪಡುಪಣಂಬೂರು, ಮಂಗಳೂರು | ೧೯೭೦ |
| ೬೩ | ಪೆರ್ಮುದೆ ಭಾರತಿ ಹಾಲು ಉತ್ಪಾದಕರ ಸಹಕಾರಿ ಸಂಘ, ಪೆರ್ಮುದೆ, ಮಂಗಳೂರು | ೧೯೬೮ |
| ೬೪ | ಸುರತ್ಕಲ್ ಹಾಲು ಉತ್ಪಾದಕರ ಸಹಕಾರಿ ಸಂಘ, ಸುರತ್ಕಲ್, ಮಂಗಳೂರು | ೧೯೬೬ |
| ೬೫ | ಕೊರೆಡೆಲ್ ಹೊಲಿ ಕ್ರೊಸ್ ಹಾಲು ಉತ್ಪಾದಕರ ಸಹಕಾರಿ ಸಂಘ, ಕುಲಶೇಖರ ಮಂಗಳೂರು | ೧೯೪೫ |
| ೬೬ | ದೇರೆಬೈಲು ಹಾಲು ಉತ್ಪಾದಕರ ಸಹಕಾರಿ ಸಂಘ, ದೇರೆಬೈಲು, ಮಂಗಳೂರು | ೧೯೪೬ |
| ೬೭ | ಮೂಲ್ಕಿ ಹಾಲು ಉತ್ಪಾದಕರ ಸಹಕಾರಿ ಸಂಘ, ಮೂಲ್ಕಿ, ಮಂಗಳೂರು | ೧೯೫೩ |
| ೬೮ | ಕಾವೂರು ಪದವು ಹಾಲು ಉತ್ಪಾದಕರ ಸಹಕಾರಿ ಸಂಘ, ಕಾವೂರು, ಮಂಗಳೂರು | ೧೯೪೫ |
| ೬೯ | ಗಂಜಿಮಠ ಹಾಲು ಉತ್ಪಾದಕರ ಸಹಕಾರಿ ಸಂಘ, ಗಂಜಿಮಠ, ಮಂಗಳೂರು | ೧೯೫೮ |
| ೭೦ | ವೆಲೆನ್ಸಿಯಾ ಹಾಲು ಉತ್ಪಾದಕರ ಸಹಕಾರಿ ಸಂಘ, ಕಂಕನಾಡಿ, ಮಂಗಳೂರು | ೧೯೪೫ |
| ೭೧ | ಕಿನ್ನಿಗೋಳಿ ಹಾಲು ಉತ್ಪಾದಕರ ಸಹಕಾರಿ ಸಂಘ, ಕಿನ್ನಿಗೋಳಿ, ಮಂಗಳೂರು | ೧೯೬೫ |
| ೭೨ | ಯುನೈಟೆಡ್ ಹಾಲು ಉತ್ಪಾದಕರ ಸಹಕಾರಿ ಸಂಘ, ಮೂಡುಪೆರಾರ್, ಮಂಗಳೂರು | ೧೯೬೭ |
| ೭೩ | ಮುಚ್ಚೂರ್ ಹಾಲು ಉತ್ಪಾದಕರ ಸಹಕಾರಿ ಸಂಘ, ಮುಚ್ಚೂರು, ಮಂಗಳೂರು | ೧೯೬೩ |
| | **ಕಾಮಗಾರಿಕೆ ಕಂಟ್ರಾಕ್ಟ್ ಸಂಘ** | |
| ೭೪ | ಪಣಂಬೂರು ಲೇಬರ್ ಕಂಟ್ರಾಕ್ಟ್ ಸಹಕಾರಿ ಸಂಘ, ಪಣಂಬೂರು, ಮಂಗಳೂರು | ೧೯೬೬ |
| | **ಇತರ** | |
| ೭೫ | ಕುಲಶೇಖರ ಸೈಂಟ್ ಜೋಸೆಫ್ ತ್ರಿಫ್ಟ್ ಎಂಡ್ ಲೋನ್ ಸಹಕಾರಿ ಸಂಘ, ಕುಲಶೇಖರ, ಮಂಗಳೂರು | ೧೯೩೯ |
| ೭೬ | ಸಹಕಾರಿ ಗ್ಯಾರೇಜು ಲಿ., ಮಂಗಳೂರು | ೧೯೭೦ |
| | **ಸ್ಟೋರ್ಸ್** | |
| ೭೭ | ಕಿನ್ನಿಗೋಳಿ ಸಹಕಾರಿ ಸ್ಟೋರ್ಸ್ ಲಿ., ಕಿನ್ನಿಗೋಳಿ, ಮಂಗಳೂರು | ೧೯೪೩ |
| ೭೮ | ಕೋಟೆಕಾರ್ ಸಹಕಾರಿ ಸ್ಟೋರ್ಸ್ ಲಿ., ಕೋಟೇಕಾರು, ಮಂಗಳೂರು | ೧೯೩೨ |
| | **ಫಾರ್ಮಿಂಗ್ ಸೊಸೈಟಿ** | |
| ೭೯ | ಎಳ್ಳಿಂಜೆ ಪೆರ್ಗುಂಡಿ ಲಿಫ್ಟ್ ಇರಿಗೇಶನ್ ಸಹಕಾರಿ ಸಂಘ, ಸಂಕಲಕರಿಯ, ಮಂಗಳೂರು | ೧೯೭೧ |

| | | |
|---|---|---|
| ೮೦ | **ಕರ್ನಾಟಕ ರೀಜನಲ್ ಇಂಜಿನಿಯರಿಂಗ್ ಕಾಲೇಜ್ ಸಹಕಾರಿ ಸ್ಟೋರ್ಸ್ ಲಿ., ಸುರತ್ಕಲ್, ಮಂಗಳೂರು** | ೧೯೬೩ |
| ೮೧ | ಮಂಗಳೂರು ಸಹಕಾರಿ ಸ್ಟೋರ್ಸ್ ಲಿ., ಮಂಗಳೂರು | ೧೯೩೯ |
| ೮೨ | ಮಂಗಳೂರು ಕ್ರಿಸೆಂಟ್ ಸಹಕಾರಿ ಸ್ಟೋರ್ಸ್ ಲಿ., ಮಂಗಳೂರು | ೧೯೪೩ |
| ೮೩ | ಮೂಲ್ಕಿ ಸಹಕಾರಿ ಸ್ಟೋರ್ಸ್ ಲಿ., ಮೂಲ್ಕಿ, ಮಂಗಳೂರು | ೧೯೪೧ |
| ೮೪ | ಪಣಂಬೂರು ಸಹಕಾರಿ ಸ್ಟೋರ್ಸ್ ಲಿ., ಪಣಂಬೂರು, ಮಂಗಳೂರು | ೧೯೪೨ |
| ೮೫ | ಸುರತ್ಕಲ್ ಸಹಕಾರಿ ಸ್ಟೋರ್ಸ್ ಲಿ., ಸುರತ್ಕಲ್, ಮಂಗಳೂರು | ೧೯೪೩ |
| ೮೬ | ಸದರ್ನ್ ರೈಲ್ವೆ ಎಂಪ್ಲೋಯಿಸ್ ಸಹಕಾರಿ ಸ್ಟೋರ್ಸ್ ಲಿ., ಮಂಗಳೂರು | ೧೯೬೩ |
| ೮೭ | ಸಿ.ಪಿ.ಸಿ. & ಕಂಪೆನಿ ನೌಕರರ ಸಹಕಾರಿ ಸ್ಟೋರ್ಸ್ ಲಿ., ಮಂಗಳೂರು | ೧೯೬೩ |
| ೮೮ | ಫಾದರ್ ಮುಲ್ಲರ್ ಚೆರಿಟೆಬಲ್ ಇನ್ಸ್‌ಟಟ್ಯೂಟ್ ಸಹಕಾರಿ ಸ್ಟೋರ್ಸ್ ಲಿ., ಕಂಕನಾಡಿ, ಮಂಗಳೂರು | ೧೯೪೩ |
| ೮೯ | ಕೊಡಿಯಾಲಬೈಲು ಕನ್ಸ್ಯೂಮರ್ಸ್ ಸಹಕಾರಿ ಸ್ಟೋರ್ಸ್ ಲಿ., ಕೊಡಿಯಾಲಬೈಲು, ಮಂಗಳೂರು | ೧೯೬೩ |
| ೯೦ | ಶ್ರೀರಾಮಕೃಷ್ಣ ಕನ್ಸ್ಯೂಮರ್ಸ್ ಸಹಕಾರಿ ಸ್ಟೋರ್ಸ್ ಲಿ., ಮಂಗಳೂರು | ೧೯೬೪ |
| ೯೧ | ಕೋಣಾಜೆ ಕನ್ಸ್ಯೂಮರ್ಸ್ ಸಹಕಾರಿ ಸ್ಟೋರ್ಸ್ ಲಿ., ಕೋಣಾಜೆ, ಮಂಗಳೂರು | ೧೯೭೩ |
| ೯೨ | ಮಂಗಳೂರು ಚಾರಿಟೇಬಲ್ ಸೊಶಿಯಲ್ ಎಂಡ್ ಎಡ್ಯುಕೇಶನ್ ಇನ್ಸ್‌ಟಟ್ಯೂಶನ್ ಸಹಕಾರಿ ಸ್ಟೋರ್ಸ್ ಲಿ., ಮಂಗಳೂರು | ೧೯೬೪ |
| ೯೩ | ಬೆಂದೂರು ಕನ್‌ಸ್ಯೂಮರ್ಸ್ ಸಹಕಾರಿ ಸ್ಟೋರ್ಸ್ ಲಿ., ಮಂಗಳೂರು | ೧೯೬೪ |
| ೯೪ | ಕೆನರಾ ವರ್ಕ್‌ಶೋಪ್ ಎಂಪ್ಲೋಯಿಸ್ ಸಹಕಾರಿ ಸ್ಟೋರ್ಸ್ ಲಿ., ಮಂಗಳೂರು | ೧೯೬೪ |
| ೯೫ | ಕುದ್ರೋಳಿ ಸಹಕಾರಿ ಸ್ಟೋರ್ಸ್ ಲಿ., ಮಂಗಳೂರು | ೧೯೬೪ |
| ೯೬ | ಮಂಗಳೂರು ಹಾರ್ಬರ್ ಪ್ರೊಜೆಕ್ಟ್ ಕನ್‌ಸ್ಯೂ ಸ್ಟೋ. ಲಿ., ಪಣಂಬೂರು, ಮಂಗಳೂರು | ೧೯೬೪ |
| ೯೭ | ಅರ್ಕುಳ ಕನ್‌ಸ್ಯೂ ಕೋ. ಸೊಸ್ಯಾಟಿ ಲಿ., ಅರ್ಕುಳ, ಮಂಗಳೂರು | ೧೯೬೪ |
| ೯೮ | ಕರ್ಣಾಟಕ ಕೋ. ಸೊಸ್ಯಾಟಿ ಲಿ., ಮಂಗಳೂರು | ೧೯೬೩ |
| ೯೯ | ಗಾಂಧಿನಗರ ಕೋ. ಸೊಸ್ಯಾಟಿ ಲಿ., ಮಂಗಳೂರು | ೧೯೬೪ |
| ೧೦೦ | ಮಾರ್ನಮಿಕಟ್ಟೆ ಕೋ. ಸೊಸ್ಯಾಟಿ ಲಿ., ಮಂಗಳೂರು | ೧೯೬೪ |
| ೧೦೧ | ಜನಸೇವ ಕೋ. ಸೊಸ್ಯಾಟಿ ಲಿ., ಮಂಗಳೂರು | ೧೯೬೪ |
| ೧೦೨ | ಗವರ್ನಮೆಂಟ್ ಒಫಿಶಿಯಲ್ ಕೋ. ಸೊಸ್ಯಾಟಿ ಲಿ., ಮಂಗಳೂರು | ೧೯೬೪ |
| ೧೦೩ | ಕೆಂಟೋನ್‌ಮೆಂಟ್ & ಪೋರ್ಟ್ ವ. ಕೋ. ಸೊಸ್ಯಾಟಿ ಲಿ., ಮಂಗಳೂರು | ೧೯೬೫ |
| ೧೦೪ | ಮೂಲ್ಕಿ ಸರ್ಕಲ್ ಪಬ್ಲಿಕ್ ಸರ್ವೆಂಟ್ಸ್ ಕೋ. ಸೊಸ್ಯಾಟಿ ಲಿ., ಮೂಲ್ಕಿ, ಮಂಗಳೂರು | ೧೯೬೫ |
| ೧೦೫ | ದೇರೆಬೈಲು ಕಾವೂರು ಕೋ. ಸೊಸ್ಯಾಟಿ ಲಿ., ಮಂಗಳೂರು | ೧೯೬೫ |
| ೧೦೬ | ಶರಾವತಿ ರಿಸೀವಿಂಗ್ ಸ್ಟೇಶನ್ ಎಂಪ್ಲೊಯಿಸ್ ಕನ್‌ಸ್ಯೂ. ಕೋ. ಸೊಸ್ಯಾಟಿ, ಮಂಗಳೂರು | ೧೯೭೩ |
| ೧೦೭ | ಬಿ.ಇ.ಯಂ. ಹೈಸ್ಕೂಲ್ ಸ್ಟೂಡೆಂಟ್ ಸ್ಟೇಶನರಿ ಸ. ಸಂ., ಮಂಗಳೂರು | ೧೯೪೪ |
| ೧೦೮ | ಗಣಪತಿ ಹೈಸ್ಕೂಲ್, ಸ್ಟೇಶನರಿ ಸ. ಸಂ., ಮಂಗಳೂರು | ೧೯೪೩ |
| ೧೦೯ | ಗವರ್ನಮೆಂಟ್ ಕಾಲೇಜ್ ಸ್ಟೇಶನರಿ ಸ. ಸಂ., ಮಂಗಳೂರು | ೧೯೩೬ |
| ೧೧೦ | ಕೋಟೆಕಾರ್ ಹಾಯರ್ ಎಲಿಮೆಂಟರಿ ಸ್ಟೇಶನರಿ ಸ. ಸಂ., ಕೋಟೆಕಾರ್, ಮಂಗಳೂರು | ೧೯೫೬ |
| ೧೧೧ | ಮೂಲ್ಕಿ ಗವರ್ನಮೆಂಟ್ ಹೈಸ್ಕೂಲ್ ಸ್ಟೇಶನರಿ ಸಹಕಾರಿ ಸಂಘ ಲಿ., ಮೂಲ್ಕಿ, ಮಂಗಳೂರು | ೧೯೪೦ |
| ೧೧೨ | ವಿದ್ಯಾದಾಯಿನಿ ಹೈಸ್ಕೂಲ್ ಸ್ಟೂಡೆಂಟ್ಸ್, ಸಹಕಾರಿ ಸಂಘ ಲಿ., ಸುರತ್ಕಲ್, ಮಂಗಳೂರು | ೧೯೫೩ |
| ೧೧೩ | ಉಚ್ಚಿಲ ಬೋವಿಸ್ ಸ್ಕೂಲ್ ಸಹಕಾರಿ ಸಂಘ ಲಿ., ಸುರತ್ಕಲ್, ಮಂಗಳೂರು | ೧೯೫೩ |
| ೧೧೪ | ಪೊಂಪಿ ಹಾಯರ್‌ಸೆಕೆಂಡರಿ ಸ್ಕೂಲ್ ಸಹಕಾರಿ ಸಂಘ ಲಿ., ಮಂಗಳೂರು | ೧೯೭೦ |
| ೧೧೫ | ಕರ್ನಾಟಕ ರೀಜನಲ್ ಇಂಜಿ. ಕಾಲೇಜು ಸಹಕಾರಿ ಸಂಘ ಲಿ., ಸುರತ್ಕಲ್,ಮಂಗಳೂರು | ೧೯೬೦ |
| ೧೧೬ | ಸೈಂಟ್ ಎಲೋಶಿಯಸ್ ಕಾ. ಸಹಕಾರಿ ಸಂಘ ಲಿ., ಮಂಗಳೂರು | ೧೯೬೧ |
| ೧೧೭ | ವಿಜಯ ಕಾಲೇಜ್, ಸಹಕಾರಿ ಸಂಘ ಲಿ., ಮೂಲ್ಕಿ, ಮಂಗಳೂರು | ೧೯೬೪ |
| ೧೧೮ | ಇಂಡಸ್ಟ್ರಿಯಲ್ ಟ್ರೈನಿಂಗ್ ಇನ್‌ಸ್ಟಿಟ್ಯೂಟ್ ಸಹಕಾರಿ ಸಂಘ ಲಿ., ಮಂಗಳೂರು | ೧೯೬೬ |
| ೧೧೯ | ಗವ. ಕಾಲೇಜು ಆಫ್ ಎಜ್ಯುಕೇಶನ್ ಸಹಕಾರಿ ಸಂಘ ಲಿ., ಮಂಗಳೂರು | ೧೯೭೨ |
| ೧೨೦ | <u>ಕ್ಯಾಂಟೀನ್</u> | |
| | ಮಂಗಳೂರು ಹಾರ್ಬರ್ ಪ್ರೊಜೆಕ್ಟ್ ಸಹ. ಟಿಫಿನ್ ರೂಂ, ಪಣಂಬೂರು, ಮಂಗಳೂರು | ೧೯೭೨ |
| ೧೨೧ | ಕರ್ನಾಟಕ ರೀಜನಲ್ ಇಂಜಿ. ಕಾಲೇಜ್ ಸ. ಕೇಂಟಿನ್, ಸುರತ್ಕಲ್, ಮಂಗಳೂರು | ೧೯೬೪ |
| ೧೨೨ | ಬಿಲ್ಡಿಂಗ್ ಸೊಸ್ಯಾಟಿಗಳು | |
| | **ಮಂಗಳೂರು ಗಣೇಶ ಬೀಡಿ ವರ್ಕ್ಸ್ ಸ. ಬಿಲ್ಡಿಂಗ್ ಸಂ., ಮಂಗಳೂರು** | ೧೯೬೮ |
| ೧೨೩ | ಆನಂದಾಶ್ರಮ ಸಹಕಾರಿ ಹೌಸಿಂಗ್ ಸೊಸೈಟಿ ಲಿ., ಕೋಟೆಕಾರ್, ಮಂಗಳೂರು | ೧೯೨೮ |
| ೧೨೪ | ಮಂಗಳೂರು ಸಹಕಾರಿ ಬಿಲ್ಡಿಂಗ್ ಸಂಘ ಲಿ., ಮಂಗಳೂರು | ೧೯೩೮ |
| ೧೨೫ | ಪಣಂಬೂರು ವಿವಿಧೋದ್ದೇಶಿ ಸಂಘ ಲಿ., ಪಣಂಬೂರು, ಮಂಗಳೂರು | ೧೯೬೪ |
| ೧೨೬ | ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಹೌಸಿಂಗ್ ಕೋ. ಸಂ. ಲಿ., ಮಂಗಳೂರು | ೧೯೬೪ |

೧೨೭ ಮೂಲ್ಕಿ ಸಹಕಾರಿ ಬಿಲ್ಡಿಂಗ್ ಸೊಸೈಟಿ ಲಿ., ಮೂಲ್ಕಿ, ಮಂಗಳೂರು ೧೯೬೬

೧೨೮ ಸುರತ್ಕಲ್ ಸಹಕಾರಿ ಬಿಲ್ಡಿಂಗ್ ಸೊಸೈಟಿ ಲಿ., ಸುರತ್ಕಲ್, ಮಂಗಳೂರು ೧೯೬೭

೧೨೯ ಶ್ರೀನಿವಾಸ ನಗರ ಸಹಕಾರಿ ಹೌಸಿಂಗ್ ಸೊಸೈಟಿ ಲಿ., ಶ್ರೀನಿವಾಸನಗರ, ಮಂಗಳೂರು ೧೯೭೨

೧೩೦ ಮಂಗಳೂರು ಶೆಡ್ಯೂಲ್ಡ್ ಕಾಸ್ಟ್ ವ, ಶೆಡ್ಯೂಲ್ಡ್, ಟ್ರೈಬ್ಸ್–ಹೌಸ್ ಬಿಲ್ಡಿಂಗ್ ಕೋ. ಓಪ. ಸೊಸೈಟಿ, ಮಂಗಳೂರು ೧೯೬೨

**ವೀವರ್ಸ್ ಸೊಸೈಟಿಗಳು**

೧೩೧ ಜೆಪ್ಪು ವೀವರ್ಸ್ ಸಹಕಾರಿ ಪ್ರೊಡಕ್ಷನ್ & ಸೇಲ್ಸ್ ಸೊಸೈಟಿ ಲಿ., ಮಂಗಳೂರು ೧೯೬೪

೧೩೨ ಕಂಕನಾಡಿ ಸೇಲ್ಸ್ ಸೊಸೈಟಿ ಲಿ., ಕಂಕನಾಡಿ, ಮಂಗಳೂರು ೧೯೬೪

೧೩೩ ಮಂಗಳೂರು ಸೇಲ್ಸ್ ಸೊಸೈಟಿ ಲಿ., ಮಂಗಳೂರು ೧೯೫೫

೧೩೪ ಮೂಲ್ಕಿ ಸೇಲ್ಸ್ ಸೊಸೈಟಿ ಲಿ., ಮೂಲ್ಕಿ, ಮಂಗಳೂರು ೧೯೫೫

೧೩೫ ಪಡುಪಣಂಬೂರು ಸೇಲ್ಸ್ ಸೊಸೈಟಿ ಲಿ., ಹಳೆಅಂಗಡಿ, ಮಂಗಳೂರು ೧೯೪೩

೧೩೬ ತಾಳಿಪಾಡಿ ಸೇಲ್ಸ್ ಸೊಸೈಟಿ ಲಿ., ತಾಳಿಪಾಡಿ, ಮಂಗಳೂರು ೧೯೫೧

೧೩೭ ಸುರತ್ಕಲ್ ಇಡ್ಯ ಸೇಲ್ಸ್ ಸೊಸೈಟಿ ಲಿ., ಸುರತ್ಕಲ್, ಮಂಗಳೂರು ೧೯೫೧

**ಮಡಕೆ ತಯಾರಕರ ಸಂಘಗಳು**

೧೩೮ ತೋಕೂರು ಮಡಕೆ ಕೆಲಸಗಾರರ ಇಂಡಸ್ಟ್ರೀಯಲ್ ಸಹಕಾರೀ ಸಂಘ ಲಿ., ಕೆಮ್ರಾಲ್,ಮಂಗಳೂರು ೧೯೫೮

೧೩೯ ಕುಳಾಯಿ ಹೊಸಬೆಟ್ಟು ಸಹಕಾರಿ ಸಂಘ ಲಿ., ಕುಳಾಯಿ, ಮಂಗಳೂರು ೧೯೬೮

**ಕೈಗಾರಿಕಾ ಸಹಕಾರಿ ಸಂಘಗಳು**

೧೪೦ ಮಣೇಲ್ ಇಂಡಸ್ಟ್ರಿಯಲ್ ಸಹಕಾರಿ ಸಂಘ, ಕಿನ್ನಿಕಂಬಳ, ಮಂಗಳೂರು ೧೯೫೮

೧೪೧ ಮಂಗಳೂರು ಅಟೋಮೊಬೈಲ್ ಇಂಜನಿಯರಿಂಗ್ ವರ್ಕರ್ಸ್ ಪ್ರೊಡಕ್ಷನ್ ಎಂಡ್ ಸೇಲ್ ಕೋಪರೇಟಿವ್ ಸೊಸೈಟಿ ಲಿ., ಮಂಗಳೂರು ೧೯೬೩

೧೪೨ ಮಂಗಳೂರು ಶೆಡ್ಯೂಲ್ಡ್ ಜಾತಿ ಮತ್ತು ಶೆಡ್ಯೂಲ್ಡ್ ತರಗತಿಯವರ ಹುರಿಹಗ್ಗ ಕೈಗಾರಿಕೆ ಸಹಕಾರಿ ಸಂಘ ಲಿ., ಮಂಗಳೂರು ೧೯೭೨

೧೪೩ ಮೂಲ್ಕಿ ಹುರಿಹಗ್ಗ ತಯಾರಕರ ಗುಡಿ ಕೈಗಾರಿಕಾ ಸಹಕಾರಿ ಸಂಘ ಲಿ., ಮೂಲ್ಕಿ, ಮಂಗಳೂರು ೧೯೫೮

**ಬೆಲ್ಲ ತಯಾರಕರ ಸಂಘ**

೧೪೪ ಬಜ್ಪೆ ತಾಳೆಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಬಜ್ಪೆ, ಮಂಗಳೂರು ೧೯೪೮

೧೪೫ ಗಂಜಿಮಠ ತಾಳೆಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಗಂಜಿಮಠ, ಮಂಗಳೂರು ೧೯೪೮

೧೪೬ ಗುರುಪುರ ತಾಳೆಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಗುರುಪುರ, ಮಂಗಳೂರು ೧೯೪೭

೧೪೭ ದೇರಳೆಕಟ್ಟೆ ತಾಳೆಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ದೇರಳಕಟ್ಟೆ, ಮಂಗಳೂರು ೧೯೫೮

೧೪೮ ಕಿನ್ನಿಗೋಳಿ ತಾಳೆಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಕಿನ್ನಿಗೋಳಿ, ಮಂಗಳೂರು ೧೯೪೮

೧೪೯ ಕ್ಯೊಕುಡೆ ತಾಳೆಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಕ್ಯೊಕುಡೆ, ಮಂಗಳೂರು ೧೯೪೮

೧೫೦ ಕೊಳಂಬೆ ತಾಳೆಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಕೊಳಂಬೆ, ಮಂಗಳೂರು ೧೯೪೮

೧೫೧ ಕುಡುಪು ತಾಳೆಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಕುಡುಪು, ಮಂಗಳೂರು ೧೯೪೮

೧೫೨ ಅಡ್ಯಾರ ತಾಳೆಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಅಡ್ಯಾರ, ಮಂಗಳೂರು ೧೯೪೫

೧೫೩ ಕುಕ್ಕಿಕಟ್ಟೆ ತಾಳೆಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಕುಕ್ಕೆಕಟ್ಟೆ, ಮಂಗಳೂರು ೧೯೪೮

೧೫೪ ಕುಪ್ಪೆ ಪದವು ತಾಳೆಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಕುಪ್ಪೆಪದವು, ಮಂಗಳೂರು ೧೯೪೮

೧೫೫ ಮರ್ಕಡ ತಾಳೆಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಮರ್ಕಡ, ಮಂಗಳೂರು ೧೯೪೮

೧೫೬ ಮೂಲ್ಕಿ ತಾಳೆಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಮೂಲ್ಕಿ, ಮಂಗಳೂರು ೧೯೪೯

೧೫೭ ಪಣಂಬೂರು ತಾಳೆಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಪಣಂಬೂರು, ಮಂಗಳೂರು ೧೯೪೮

೧೫೮ ಪಾವೂರು ತಾಳೆಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಪಾವೂರು, ಮಂಗಳೂರು ೧೯೪೮

೧೫೯ ಸುರತ್ಕಲ್ ತಾಳೆಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಸುರತ್ಕಲ್, ಮಂಗಳೂರು ೧೯೪೮

೧೬೦ ಯೆಕ್ಕಾರ್ ತಾಳೆಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಯೆಕ್ಕಾರು, ಮಂಗಳೂರು ೧೯೪೮

೧೬೧ ಹೊಸಬೆಟ್ಟು ತಾಳೆಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಹೊಸಬೆಟ್ಟು, ಮಂಗಳೂರು ೧೯೪೮

**ಇತರ ಕೈಗಾರಿಕಾ ಸಂಘಗಳು**

೧೬೨ ಬಲ್ಮಠ ಇಂಡಸ್ಟ್ರಿಯಲ್ ವರ್ಕರ್ಸ್ ಸಪ್ಲೈ ಸಹಕಾರಿ ಸಂಘ ಲಿ., ಮಂಗಳೂರು

೧೬೩ ಉಚ್ಚಿಲ ಕೈಗಾರಿಕಾ ಸೇವಾ ಸಹಕಾರಿ ಸಂಘ ಲಿ., ಉಚ್ಚಿಲ, ಮಂಗಳೂರು ೧೯೬೨

೧೬೪ ಮಂಗಳೂರು ತಾಲೂಕು ರೂರಲ್ ಇಂಡಸ್ಟ್ರಿಯಲ್ ಸಿ. ಎಸ್. ಲಿ., ಮಂಗಳೂರು ೧೯೬೫

೧೬೫ ಮಂಗಳೂರು ಮಹಿಳಾ ಗುಡಿ ಕೈಗಾರಿಕಾ ಸಹಕಾರಿ ಸಂಘ ಲಿ., ಮಂಗಳೂರು ೧೯೬೮

೧೬೬ ರಿಹೆಬಿಟೇಶನ್ ಇಂಡಸ್ಟ್ರಿಯಲ್ ಸಿ. ಎಸ್. ಲಿ., ಕಾಟೀಪಳ್ಳ, ಮಂಗಳೂರು ೧೯೭೨

**ಮೀನುಗಾರಿಕೆ**

೧೬೭ ಬೈಕಂಪಾಡಿ ಫಿಶರೀಸ್ ಸಿ. ಎಸ್. ಲಿ., ಬೈಕಂಪಾಡಿ, ಮಂಗಳೂರು ೧೯೫೧

೧೬೮ ಹೊಸಬೆಟ್ಟು ಫಿಶರ್ಮೆಶನ್ ಸಿ. ಎಸ್. ಲಿ., ಹೊಸಬೆಟ್ಟು, ಮಂಗಳೂರು ೧೯೫೧

| | | |
|---|---|---|
| ೧೬೯ | ಇಡ್ಯ ಫಿಶರ್ಮೆಶನ್ ಸಿ. ಎಸ್. ಲಿ., ಇಡ್ಯ, ಮಂಗಳೂರು | ೧೯೧೮ |
| ೧೨೦ | ಮಂಗಳೂರು ಫಿಶರ್ಮೆಶನ್ ಸಿ. ಎಸ್. ಲಿ., ಮಂಗಳೂರು | ೧೯೪೨ |
| ೧೨೧ | ಮಂಗಳೂರು ಬೆಂಗರೆ ಫಿಶರ್ಮೆಶನ್ ಸಿ. ಎಸ್. ಲಿ., ಮಂಗಳೂರು | ೧೯೫೧ |
| ೧೨೨ | ಮೂಲ್ಕಿ ಫಿಶರ್ಮೆಶನ್ ಸಿ. ಎಸ್. ಲಿ., ಮೂಲ್ಕಿ, ಮಂಗಳೂರು | ೧೯೧೮ |
| ೧೨೩ | ಸಸಿಹಿತ್ಲು ಸಹಕಾರೀ ಸಂಘ ಲಿ., ಸಸಿಹಿತ್ಲು, ಮಂಗಳುರು | ೧೯೫೨ |
| ೧೨೪ | ತಣ್ಣೀರುಭಾವಿ ಫಿಶರ್ಮೆಶನ್ ಸಿ. ಎಸ್. ಲಿ., ತಣ್ಣೀರುಬಾವಿ, ಮಂಗಳೂರು | ೧೯೫೧ |
| ೧೨೫ | ಉಚ್ಚಿಲ ಫಿಶರ್ಮೆಶನ್ ಸಿ. ಎಸ್. ಲಿ., ಉಚ್ಚಿಲ, ಮಂಗಳೂರು | ೧೯೪೨ |
| ೧೨೬ | ಉಳ್ಳಾಲ ಫಿಶರ್ಮೆಶನ್ ಸಿ. ಎಸ್. ಲಿ., ಉಳ್ಳಾಲು, ಮಂಗಳೂರು | ೧೯೪೨ |
| | <u>ಯೂನಿಯನ್</u> | |
| ೧೨೭ | ಮಂಗಳೂರು ಸ್ಥಳೀಯ ಸಹಕಾರಿ ಯೂನಿಯನ್ ಲಿ., ಮಂಗಳೂರು | ೧೯೧೯ |
| | <u>ಕಾರ್ಕಳ</u> | |
| | <u>ಸಹಕಾರಿ ವ್ಯವಸಾಯಿಕ ಬ್ಯಾಂಕ್ ಲಿ.</u> | |
| ೧. | ಅಜೆಕಾರ್ ಸಿ. ಎ. ಬ್ಯಾಂಕ್ ಲಿ., ಅಜೆಕಾರು, ಕಾರ್ಕಳ | ೧೯೫೬ |
| ೨. | ಬೆಳ್ವಾಯಿ ಸಿ. ಎ. ಬ್ಯಾಂಕ್ ಲಿ., ಬೆಳ್ವಾಯಿ, ಕಾರ್ಕಳ | ೧೯೫೬ |
| ೩. | ಹೆಬ್ರಿ ಸಿ. ಎ. ಬ್ಯಾಂಕ್ ಲಿ., ಹೆಬ್ರಿ, ಕಾರ್ಕಳ | ೧೯೫೮ |
| ೪. | ವಾರಂಗ ಸಿ. ಎ. ಬ್ಯಾಂಕ್ ಲಿ., ವಾರಂಗ, ಕಾರ್ಕಳ | ೧೯೫೬ |
| | ಸಹಕಾರೀ ಸೇವಾ ಬ್ಯಾಂಕ್‌ಗಳು | |
| ೫. | ಕಾರ್ಕಳ ಸೇವಾ ಸಹಕಾರೀ ಬ್ಯಾಂಕ್ ಲಿ., ಕಾರ್ಕಳ | ೧೯೧೪ |
| ೬. | ಮೂಡಬಿದ್ರೆ ಸಿ. ಎ. ಬ್ಯಾಂಕ್ ಲಿ., ಮೂಡಬಿದ್ರೆ, ಕಾರ್ಕಳ | ೧೯೧೫ |
| | ಆದಿದ್ರಾವಿಡ ಸಹಕಾರೀ ಸಂಘ | |
| ೭. | ಕಾರ್ಕಳ ಆದಿದ್ರಾವಡಿ ಸಹಕಾರೀ ಸಂಘ ಲಿ., ಕಾರ್ಕಳ | ೧೯೨೫ |
| | <u>ಸೇವಾ ಸಹಕಾರಿ ಸಂಘಗಳು</u> | |
| ೮. | ಬೋಳ ಸೇವಾ ಸಹಕಾರಿ ಸಂಘ ಲಿ., ಬೋಳ, ಕಾರ್ಕಳ | ೧೯೫೫ |
| ೯. | ಬೆಳ್ಮಣ್ಣು ಸೇವಾ ಸಹಕಾರಿ ಸಂಘ ಲಿ., ಬೆಳ್ಮಣ್ಣು, ಕಾರ್ಕಳ | ೧೯೧೬ |
| ೧೦. | ದುರ್ಗಾ ಸೇವಾ ಸಹಕಾರಿ ಸಂಘ ಲಿ., ದುರ್ಗಾ, ಕಾರ್ಕಳ | ೧೯೫೪ |
| ೧೧. | ಹಿರ್ಗಾನ ಸೇವಾ ಸಹಕಾರಿ ಸಂಘ ಲಿ., ಹಿರ್ಗಾನ, ಕಾರ್ಕಳ | ೧೯೨೦ |
| ೧೨. | ಇದು ಸೇವಾ ಸಹಕಾರಿ ಸಂಘ ಲಿ., ಇದು, ಕಾರ್ಕಳ | ೧೯೨೨ |
| ೧೩. | ಇನ್ನ ಸೇವಾ ಸಹಕಾರಿ ಸಂಘ ಲಿ., ಇನ್ನ, ಕಾರ್ಕಳ | ೧೯೫೬ |
| ೧೪. | ಕಲ್ಲಮುಂಡ್ಕೂರು ಸೇವಾ ಸಹಕಾರಿ ಸಂಘ ಲಿ., ಕಲ್ಲಮುಂಡ್ಕೂರು, ಕಾರ್ಕಳ | ೧೯೨೨ |
| ೧೫. | ಕುಕ್ಕುಂದೂರು ಸೇವಾ ಸಹಕಾರಿ ಸಂಘ ಲಿ., ಕುಕ್ಕುಂದೂರು, ಕಾರ್ಕಳ | ೧೯೫೪ |
| ೧೬. | ಕಳ್ಯ ಸೇವಾ ಸಹಕಾರಿ ಸಂಘ ಲಿ., ಕಳ್ಯ, ಕಾರ್ಕಳ | ೧೯೬೦ |
| ೧೭. | ಮಾಳಕೆರ್ವಾಶೆ ಸೇವಾ ಸಹಕಾರಿ ಸಂಘ ಲಿ., ಮಾಳಕೆರ್ವಾಶೆ, ಕಾರ್ಕಳ | ೧೯೬೦ |
| ೧೮. | ಮೂಡಬಿದಿರೆ ಪುತ್ತಿಗೆ ಸೇವಾ ಸಹಕಾರಿ ಸಂಘ ಲಿ., ಮೂಡಬಿದಿರೆ, ಕಾರ್ಕಳ | ೧೯೨೦ |
| ೧೯. | ಮುಂಡ್ಕೂರು ಸೇವಾ ಸಹಕಾರಿ ಸಂಘ ಲಿ., ಮುಂಡ್ಕೂರು, ಕಾರ್ಕಳ | ೧೯೧೫ |
| ೨೦. | ನಿಟ್ಟೆ ಸೇವಾ ಸಹಕಾರಿ ಸಂಘ ಲಿ., ನಿಟ್ಟೆ, ಕಾರ್ಕಳ | ೧೯೨೬ |
| ೨೧. | ನಿಡ್ಡೋಡಿ ಸೇವಾ ಸಹಕಾರಿ ಸಂಘ ಲಿ., ನಿಡ್ಡೋಡಿ, ಕಾರ್ಕಳ | ೧೯೫೩ |
| ೨೨. | ಪಾಲಡ್ಕ ಸೇವಾ ಸಹಕಾರಿ ಸಂಘ ಲಿ., ಪಾಲಡ್ಕ, ಕಾರ್ಕಳ | ೧೯೫೩ |
| ೨೩. | ಪಳ್ಳಿನಿಂಜೂರು ಸೇವಾ ಸಹಕಾರಿ ಸಂಘ ಲಿ., ಪಳ್ಳಿ, ಕಾರ್ಕಳ | ೧೯೬೮ |
| ೨೪. | ಶಿರ್ತಾಡಿ ಸೇವಾ ಸಹಕಾರಿ ಸಂಘ ಲಿ., ಶಿರ್ತಾಡಿ, ಕಾರ್ಕಳ | ೧೯೪೭ |
| ೨೫. | ಸೂಡ ಸೇವಾ ಸಹಕಾರಿ ಸಂಘ ಲಿ., ಸೂಡ, ಕಾರ್ಕಳ | ೧೯೨೬ |
| ೨೬. | ತೆಂಕಮಿಜಾರ್ ಸೇವಾ ಸಹಕಾರಿ ಸಂಘ ಲಿ., ಮಿಜಾರ್, ಕಾರ್ಕಳ | ೧೯೨೨ |
| ೨೭. | ವಾಲ್‌ಪಾಡಿ ಸೇವಾ ಸಹಕಾರಿ ಸಂಘ ಲಿ., ವಾಲ್ಪಾಡಿ, ಕಾರ್ಕಳ | ೧೯೪೮ |
| ೨೮. | ಕೌಡೂರು ಸೇವಾ ಸಹಕಾರಿ ಸಂಘ ಲಿ., ಕೌಡೂರು, ಕಾರ್ಕಳ | ೧೯೬೨ |
| ೨೯. | ಹೊಸಬೆಟ್ಟು ಸೇವಾ ಸಹಕಾರಿ ಸಂಘ ಲಿ., ಹೊಸಬೆಟ್ಟು, ಕಾರ್ಕಳ | ೧೯೨೦ |
| ೩೦. | ಕಾರಂಜೆ ಸೇವಾ ಸಹಕಾರಿ ಸಂಘ ಲಿ., ಕಾರಂಜೆ, ಕಾರ್ಕಳ | ೧೯೨೧ |
| ೩೧. | ಬಜೆಗೋಳಿ ಸೇವಾ ಸಹಕಾರಿ ಸಂಘ ಲಿ., ಬಜೆಗೋಳಿ, ಕಾರ್ಕಳ | ೧೯೫೩ |
| ೩೨. | ಕಲ್ಲಬೆಟ್ಟು ಸೇವಾ ಸಹಕಾರಿ ಸಂಘ ಲಿ., ಕಲ್ಲಬೆಟ್ಟು, ಕಾರ್ಕಳ | ೧೯೨೦ |
| ೩೩. | ಮಿಯಾರ್ ಸೇವಾ ಸಹಕಾರಿ ಸಂಘ ಲಿ., ಮಿಯಾರ್, ಕಾರ್ಕಳ | ೧೯೫೯ |
| ೩೪. | ನಂದಳಿಕೆ ಸೇವಾ ಸಹಕಾರಿ ಸಂಘ ಲಿ., ನಂದಳಿಕೆ, ಕಾರ್ಕಳ | ೧೯೨೧ |
| ೩೫. | ನೆಲ್ಲಿಕಾರ್ ಸೇವಾ ಸಹಕಾರಿ ಸಂಘ ಲಿ., ನೆಲ್ಲಿಕಾರ್, ಕಾರ್ಕಳ | ೧೯೨೨ |
| ೩೬. | ನೀರೆಬೈಲೂರು ಸೇವಾ ಸಹಕಾರಿ ಸಂಘ ಲಿ., ಬೈಲೂರು, ಕಾರ್ಕಳ | ೧೯೧೭ |

| | | |
|---|---|---|
| ೩೭. | ಸಾಣೂರು ಸೇವಾ ಸಹಕಾರಿ ಸಂಘ ಲಿ., ಸಾಣೂರು, ಕಾರ್ಕಳ | ೧೯೫೫ |
| | **ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕ್ ಲಿ.** | |
| ೩೮. | ಕಾರ್ಕಳ ಸಹಕಾರಿ ಭೂ ಅಭಿವೃದ್ಧಿ ಬ್ಯಾಂಕ್ ಲಿ., ಕಾರ್ಕಳ | --- |
| | **ನೌಕರರ ಪತ್ತಿನ ಸಂಘಗಳು** | |
| ೩೯. | ಕಾರ್ಕಳ ಲೋಕಲ್ ಬೋರ್ಡ್ ನೌಕರರ ಸಹಕಾರಿ ಸಂಘ, ಕಾರ್ಕಳ | ೧೯೧೯ |
| | **ಇತರ ಪತ್ತಿನ ಸಂಘಗಳು** | |
| ೪೦. | ಅಶ್ವತ್ಥಪುರ ಕಲಾನಿಧಿ ಸಹಕಾರಿ ಸಂಘ, ಅಶ್ವತ್ಥಪುರ, ಕಾರ್ಕಳ | ೧೯೨೩ |
| | **ಮಾರಾಟ ಸಂಘಗಳು** | |
| ೪೧. | ಕಾರ್ಕಳ ತಾಲೂಕು ಕೃಷಿ ಉತ್ಪನ್ನ ಮಾರಾಟ ಸಹಕಾರಿ ಸಂಘ ಲಿ., ಕಾರ್ಕಳ | ೧೯೬೦ |
| | **ಹಾಲು ಸರಬರಾಜು ಸಂಘಗಳು** | |
| ೪೨. | ಬೆಳ್ವಾಯಿ ಕ್ಷೀರಸಾಗರ ಹಾಲು ಉತ್ಪಾದಕರ ಸಹಕಾರಿ ಸಂಘ ಲಿ., ಬೆಳ್ವಾಯಿ, ಕಾರ್ಕಳ | ೧೯೬೭ |
| ೪೩. | ಕಡಂದಲೆ ಪಾಲಡ್ಕ ಹಾಲು ಉತ್ಪಾದಕರ ಸಹಕಾರಿ ಸಂಘ ಲಿ., ಪಾಲಡ್ಕ, ಕಾರ್ಕಳ | ೧೯೬೭ |
| ೪೪. | ನೀರುದೆ ಹಾಲು ಉತ್ಪಾದಕರ ಸಹಕಾರಿ ಸಂಘ ಲಿ., ನೀರುದೆ, ಕಾರ್ಕಳ | ೧೯೬೯ |
| ೪೫. | ಸಂಪಿಗೆ ಕಾಮದೇನು ಹಾಲು ಉತ್ಪಾದಕರ ಸಹಕಾರಿ ಸಂಘ ಲಿ., ಸಂಪಿಗೆ, ಕಾರ್ಕಳ | ೧೯೬೭ |
| ೪೬. | ಬೆಳ್ಮಣ್ಣು ಹಾಲು ಉತ್ಪಾದಕರ ಸಹಕಾರಿ ಸಂಘ ಲಿ., ಬೆಳ್ಮಣ್ಣು, ಕಾರ್ಕಳ | ೧೯೭೨ |
| ೪೭. | ಕಾರ್ಕಳ ಹಾಲು ಉತ್ಪಾದಕರ ಸಹಕಾರಿ ಸಂಘ ಲಿ., ಕಾರ್ಕಳ | ೧೯೫೨ |
| ೪೮. | ಮೂಡಬಿದಿರೆ ಹಾಲು ಉತ್ಪಾದಕರ ಸಹಕಾರಿ ಸಂಘ ಲಿ., ಮೂಡಬಿದಿರೆ, ಕಾರ್ಕಳ | ೧೯೫೧ |
| ೪೯. | ಸಾಣೂರು ಹಾಲು ಉತ್ಪಾದಕರ ಸಹಕಾರಿ ಸಂಘ ಲಿ., ಸಾಣೂರು, ಕಾರ್ಕಳ | ೧೯೬೭ |
| ೫೦. | ಕಲ್ಲಮುಂಡ್ಕೂರು ಹಾಲು ಉತ್ಪಾದಕರ ಸಹಕಾರಿ ಸಂಘ ಲಿ., ಕಲ್ಲಮುಂಡ್ಕೂರು, ಕಾರ್ಕಳ | ೧೯೫೬ |
| ೫೧. | ಮಿಜಾರು ಹಾಲು ಉತ್ಪಾದಕರ ಸಹಕಾರಿ ಸಂಘ ಲಿ., ಮಿಜಾರು, ಕಾರ್ಕಳ | ೧೯೭೨ |
| | **ಪ್ರಾಥಮಿಕ ಸ್ಟೋರ್ಸ್** | |
| ೫೨. | ಅಜೆಕಾರು ಸಹಕಾರಿ ಸ್ಟೋರ್ಸ್ ಲಿ., ಅಜೆಕಾರು, ಕಾರ್ಕಳ | ೧೯೪೭ |
| ೫೩. | ಕಲ್ಲಮುಂಡ್ಕೂರು ಸಹಕಾರಿ ಸ್ಟೋರ್ಸ್ ಲಿ., ಕಲ್ಲಮುಂಡ್ಕೂರ, ಕಾರ್ಕಳ | ೧೯೪೭ |
| ೫೪. | ಕಾರ್ಕಳ ಸಹಕಾರಿ ಸ್ಟೋರ್ಸ್ ಲಿ., ಕಾರ್ಕಳ | ೧೯೬೭ |
| ೫೫. | ಕಾರ್ಕಳ ಪಬ್ಲಿಕ್ ನೌಕರರ ಸಹಕಾರಿ ಸ್ಟೋರ್ಸ್, ಕಾರ್ಕಳ | ೧೯೬೭ |
| | **ವಿದ್ಯಾರ್ಥಿಗಳ ಸ್ಟೇಶನರಿ ಸ್ಟೋರ್ಸ್** | |
| ೫೬. | ಬೈಲೂರು ಬೋರ್ಡು ಹೈಸ್ಕೂಲ್ ವಿದ್ಯಾರ್ಥಿಗಳ ಸ್ಟೇಶನರಿ ಸಹಕಾರಿ ಸ್ಟೋರ್ಸ್, ಬೈಲೂರು, ಕಾರ್ಕಳ | ೧೯೫೬ |
| ೫೭. | ಜೈನ ಹೈಸ್ಕೂಲ್ ವಿದ್ಯಾರ್ಥಿಗಳ ಸ್ಟೇಶನರಿ ಸಹಕಾರಿ ಸ್ಟೋರ್ಸ್, ಮೂಡಬಿದಿರೆ, ಕಾರ್ಕಳ | ೧೯೫೦ |
| ೫೮. | ಶ್ರೀ ಮಹಾವೀರ ಕಾಲೇಜು ವಿದ್ಯಾರ್ಥಿಗಳ ಸ್ಟೇಶನರಿ ಸಹಕಾರಿ ಸ್ಟೋರ್ಸ್, ಮೂಡಬಿದಿರೆ, ಕಾರ್ಕಳ | ೧೯೬೭ |
| ೫೯. | ನಿಟ್ಟೆ ಬೋರ್ಡ್ ಹೈಸ್ಕೂಲ್ ವಿದ್ಯಾರ್ಥಿಗಳ ಸ್ಟೇಶನರಿ ಸಹಕಾರಿ ಸ್ಟೋರ್ಸ್, ನಿಟ್ಟೆ, ಕಾರ್ಕಳ | ೧೯೫೫ |
| ೬೦. | ಕಾರ್ಕಳ ಬೋರ್ಡ್ ವಿದ್ಯಾರ್ಥಿಗಳ ಸ್ಟೇಶನರಿ ಸಹಕಾರಿ ಸ್ಟೋರ್ಸ್, ಕಾರ್ಕಳ | ೧೯೫೮ |
| ೬೧. | ಶ್ರೀ ಭುವನೇಂದ್ರ ಕಾಲೇಜು ವಿದ್ಯಾರ್ಥಿಗಳ ಸ್ಟೇಶನರಿ ಸಹಕಾರಿ ಸ್ಟೋರ್ಸ್, ಕಾರ್ಕಳ | ೧೯೭೨ |
| | **ಗೃಹ ನಿರ್ಮಾಣ ಸಂಘಗಳು** | |
| ೬೨. | ಕಾರ್ಕಳ ಬಿಲ್ಡಿಂಗ್ ಸಹಕಾರಿ ಸೊಸ್ಯಾಟಿ ಲಿ., ಕಾರ್ಕಳ | ೧೯೪೮ |
| ೬೩. | ಮೂಡಬಿದಿರೆ ಸಹಕಾರಿ ಸೊಸ್ಯಾಟಿ ಲಿ., ಮೂಡಬಿದಿರೆ, ಕಾರ್ಕಳ | ೧೯೫೪ |
| ೬೪. | ನೀರೆಬೈಲೂರು ಸಹಕಾರಿ ಸೊಸ್ಯಾಟಿ ಲಿ., ಬೈಲೂರು, ಕಾರ್ಕಳ | ೧೯೫೬ |
| ೬೫. | ಶಿರ್ತಾಡಿ ಸಹಕಾರಿ ಗ್ರಾಮೀಣ ಗೃಹ ನಿರ್ಮಾಣ ಸಂ. ಲಿ., ಶಿರ್ತಾಡಿ, ಕಾರ್ಕಳ | ೧೯೫೬ |
| ೬೬. | ಕಾರ್ಕಳ ಶೆಡ್ಯೂಲ್ಡ್ ಜಾತಿ ವ ತರಗತಿ ಸಂಘ ಲಿ., ಕಾರ್ಕಳ | ೧೯೬೪ |
| | **ನೇಕಾರರ ಸಂಘಗಳು** | |
| ೬೭. | ಮಿಜಾರು ನೇಕಾರರ ಸಹಕಾರಿ ಉತ್ಪನ್ನ ವ ಮಾರಾಟ ಸಂಘ ಲಿ., ಮಿಜಾರು, ಕಾರ್ಕಳ | ೧೯೬೮ |
| | **ತಾಳಿಬೆಲ್ಲ ತಯಾರಿ ಸಂಘ** | |
| ೬೮. | ಹೊಸ್ಮಾರು ತಾಳಿಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಹೊಸ್ಮಾರು, ಕಾರ್ಕಳ | ೧೯೫೨ |
| ೬೯. | ಮಂಜರಪಲ್ಕೆ ತಾಳಿಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಮಂಜರಪಲ್ಕೆ, ಕಾರ್ಕಳ | ೧೯೪೯ |
| ೭೦. | ಮೂಡಬಿದಿರೆ ತಾಳಿಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಮೂಡಬಿದಿರೆ, ಕಾರ್ಕಳ | ೧೯೪೮ |
| ೭೧. | ನಿಡ್ಡೋಡಿ ತಾಳಿಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ನಿಡ್ಡೋಡಿ, ಕಾರ್ಕಳ | ೧೯೪೫ |
| ೭೨. | ಕಾರ್ಕಳ ತಾಳಿಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಕಾರ್ಕಳ | ೧೯೫೯ |
| | **ಇತರ ಗ್ರಾಮ ಕೈಗಾರಿಕಾರ ಸಂಘಗಳು** | |
| ೭೩. | ಶ್ರೀ ಭವಾನಿ ಮರಕೆಲಸದ ಕುಶಲ ಕೈಗಾರಿಕಾ ಸಹಕಾರಿ ಸಂಘ ಲಿ., ಸೋಮೇಶ್ವರ, ಕಾರ್ಕಳ | ೧೯೬೨ |
| ೭೪. | ಅನುಸೂಚಿತ ವರ್ಗದವರ ಗ್ರಾಮೋದ್ಯೋಗ ಸಹಕಾರಿ ಸಂಘ, ಹೆಬ್ರಿ, ಕಾರ್ಕಳ | ೧೯೬೨ |
| ೭೫. | ಬೈಲೂರು ಜೇನು ವ್ಯವಸಾಯ ಮತ್ತು ಮಾರಾಟ ಸಹಕಾರಿ ಸಂಘ, ಬೈಲೂರು, ಕಾರ್ಕಳ | ೧೯೫೫ |

೨೬. ಸಂಪಿಗೆ ಜೇನು ವ್ಯವಸಾಯ ಮತ್ತು ಮಾರಾಟ ಸಹಕಾರಿ ಸಂಘ, ಕಾರ್ಕಳ ೧೯೫೫
೨೭. ಕಾರ್ಕಳ ಜೇನು ವ್ಯವಸಾಯ ಮತ್ತು ಮಾರಾಟ ಸಹಕಾರಿ ಸಂಘ, ಕಾರ್ಕಳ ೧೯೫೫
೨೮. ಕಾರ್ಕಳ ಗ್ರಾಮೋದ್ಯೋಗ ಸಹಕಾರಿ ಸಂಘ ಲಿ., ಕಾರ್ಕಳ ೧೯೬೧
೨೯. ಮುದ್ರಾಡಿ ಗ್ರಾಮ ಕೈಗಾರಿಕಾ ಸಹಕಾರಿ ಸಂಘ ಲಿ. ಮುದ್ರಾಡಿ, ಕಾರ್ಕಳ ೧೯೬೧
೩೦. ಮುನಿಯಾಳ ಬೆಂಕಿಪೆಟ್ಟಿಗೆ ಕಾರ್ಮಿಕರ ಗುಡಿ ಕೈಗಾರಿಕೆ ಸಹಕಾರಿ ಸಂಘ ಲಿ., ಮುನಿಯಾಲು, ಕಾರ್ಕಳ ೧೯೫೫
೩೧. ಕಲ್ಯ ಗ್ರಾಮ ಜೇನು ವ್ಯವಸಾಯ ಮತ್ತು ಮಾರಾಟ ಸಹಕಾರಿ ಸಂಘ, ಕಲ್ಯ, ಕಾರ್ಕಳ ೧೯೬೨
೩೨. ಕಾರ್ಕಳ ಭುವನೇಂದ್ರ ಶಿಲ್ಪ ಕಲಾ ಕುಶಲ ಸಹಕಾರಿ ಸಂಘ ಲಿ., ಕಾರ್ಕಳ ೧೯೫೮
೩೩. ಅಜೆಕಾರ್ ಬುಟ್ಟಿ ತಯಾರಕರ ಗುಡಿ ಕೈಗಾರಿಕೆ ಸಹಕಾರಿ ಸಂಘ ಲಿ., ಮುನಿಯಾಲ, ಕಾರ್ಕಳ ೧೯೫೬
೩೪. ನಡ್ಪಾಲ ಬುಟ್ಟಿ ತಯಾರಕರ ಗುಡಿ ಕೈಗಾರಿಕೆ ಸಹಕಾರಿ ಸಂಘ ಲಿ., ಸೋಮೇಶ್ವರ, ಕಾರ್ಕಳ ೧೯೬೨
೩೫. ಮೂಡುಬಿದಿರೆ ಚರ್ಮ ಕೈಗಾರಿಕಾ ತಯಾರಕರ ಗುಡಿ ಕೈಗಾರಿಕೆ ಸಹಕಾರಿ ಸಂಘ ಲಿ., ಮೂಡಬಿದಿರೆ, ಕಾರ್ಕಳ ೧೯೫೭

**ಇತರ ಕೈಗಾರಿಕೆ ಸಂಘ**

೩೬. ಕಾರ್ಕಳ ತಾಲೂಕು ಗ್ರಾಮಾಂತರ ಕೈಗಾರಿಕೆ ಸಹಕಾರಿ ಸಂಘ ಲಿ., ಕಾರ್ಕಳ ೧೯೫೮
೩೭. ಹೆಬ್ರಿ ಮಹಿಳೆಯರ ಗುಡಿ ಕೈಗಾರಿಕೆ ಸಹಕಾರಿ ಸಂಘ ಲಿ., ಹೆಬ್ರಿ, ಕಾರ್ಕಳ ೧೯೬೨
೩೮. ಕಾರ್ಕಳ ಟೌನು ಕೈಗಾರಿಕೆ ಸಹಕಾರಿ ಸಂಘ ಲಿ., ಕಾರ್ಕಳ ೧೯೫೮

**ಯೂನಿಯನ್**

೩೯. ಕಾರ್ಕಳ ಲೋಕಲ್ ಸಹಕಾರಿ ಯೂನಿಯನ್ ಲಿ., ಕಾರ್ಕಳ ೧೯೨೦

**ಬಂಟ್ವಾಳ**

೧. ಕರೋಪಾಡಿ ಸಹಕಾರಿ ವ್ಯವಸಾಯಿಕ ಬ್ಯಾಂಕ್ ಲಿ., ಕರೋಪಾಡಿ, ಬಂಟ್ವಾಳ ೧೯೫೯
೨. ನೇರಳಕಟ್ಟೆ ಸಹಕಾರಿ ವ್ಯವಸಾಯಿಕ ಬ್ಯಾಂಕ್ ಲಿ., ಕರೋಪಾಡಿ, ನೇರಳಕಟ್ಟೆ, ಬಂಟ್ವಾಳ ೧೯೧೮
೩. ಸಿದ್ಧಕಟ್ಟೆ ಸಹಕಾರಿ ವ್ಯವಸಾಯಿಕ ಬ್ಯಾಂಕ್ ಲಿ., ಕರೋಪಾಡಿ, ಸಿದ್ಧಕಟ್ಟೆ, ಬಂಟ್ವಾಳ ೧೯೪೭

**ರೂರಲ್ ಬ್ಯಾಂಕ್**

೪. ವಿಟ್ಲ ಸಹಕಾರಿ ರೂರಲ್ ಬ್ಯಾಂಕ್ ಲಿ., ವಿಟ್ಲ, ಬಂಟ್ವಾಳ ೧೯೫೫

**ಸಹಕಾರೀ ಸೇವಾ ಬ್ಯಾಂಕ್‌ಗಳು**

೫. ಪಾಣೆಮಂಗಳೂರು ಸೇವಾ ಸಹಕಾರಿ ಬ್ಯಾಂಕ್, ಪಾಣೆಮಂಗಳೂರು, ಬಂಟ್ವಾಳ ೧೯೭೨
೬. ಬಂಟ್ವಾಳ ಸೇವಾ ಸಹಕಾರಿ ಬ್ಯಾಂಕ್, ಬಂಟ್ವಾಳ ೧೯೫೫
೭. ಮೊಳಲಿ ಸೇವಾ ಸಹಕಾರಿ ಬ್ಯಾಂಕ್, ಮೊಳಲಿ, ಬಂಟ್ವಾಳ ೧೯೬೦

**ಸೇವಾ ಸಹಕಾರೀ ಸಂಘಗಳು**

೮. ಅಜ್ಜಿಬೆಟ್ಟು ಸೇವಾ ಸಹಕಾರಿ ಸಂಘ ಲಿ., ಅಜ್ಜಿಬೆಟ್ಟು, ಬಂಟ್ವಾಳ ೧೯೬೦
೯. ಅಮ್ಮಾಡಿ ಸೇವಾ ಸಹಕಾರಿ ಸಂಘ ಲಿ., ಅಮ್ಮಾಡಿ, ಬಂಟ್ವಾಳ ೧೯೬೦
೧೦. ಅಳಿಕೆ ಸೇವಾ ಸಹಕಾರಿ ಸಂಘ ಲಿ., ಅಳಿಕೆ, ಬಂಟ್ವಾಳ ೧೯೧೯
೧೧. ಬಾಳ್ತಿಲ ಸೇವಾ ಸಹಕಾರಿ ಸಂಘ ಲಿ., ಬಾಳ್ತಿಲ, ಬಂಟ್ವಾಳ ೧೯೫೨
೧೨. ಬಾಳೆಪುಣಿ ಸೇವಾ ಸಹಕಾರಿ ಸಂಘ ಲಿ., ಬಾಳೆಪುಣಿ, ಬಂಟ್ವಾಳ ೧೯೫೨
೧೩. ಬಂಟ್ವಾಳ ಮೂಡ ಸೇವಾ ಸಹಕಾರಿ ಸಂಘ ಲಿ., ಬಿ.ಸಿ.ರೋಡ್, ಬಂಟ್ವಾಳ ೧೯೧೭
೧೪. ಬೆಳ್ಳೂರು ಸೇವಾ ಸಹಕಾರಿ ಸಂಘ ಲಿ., ಬೆಳ್ಳೂರು, ಬಂಟ್ವಾಳ ೧೯೫೬
೧೫. ಬಿಳಿಯೂರು ಸೇವಾ ಸಹಕಾರಿ ಸಂಘ ಲಿ., ಬಿಳಿಯೂರು, ಬಂಟ್ವಾಳ ೧೯೬೦
೧೬. ಚೇಳೂರು ಸೇವಾ ಸಹಕಾರಿ ಸಂಘ ಲಿ., ಚೇಳೂರು, ಬಂಟ್ವಾಳ ೧೯೫೩
೧೭. ಫಜೀರ್ ಸೇವಾ ಸಹಕಾರಿ ಸಂಘ ಲಿ., ಫಜೀರ್, ಬಂಟ್ವಾಳ ೧೯೫೫
೧೮. ಇಡ್ಕಿದು ಸೇವಾ ಸಹಕಾರಿ ಸಂಘ ಲಿ., ಕಬಕ, ಬಂಟ್ವಾಳ ೧೯೧೯
೧೯. ಕಡೇಶಿವಾಲ್ಯ ಸೇವಾ ಸಹಕಾರಿ ಸಂಘ ಲಿ., ಕಡೇಶಿವಾಲ್ಯ, ಬಂಟ್ವಾಳ ೧೯೫೫
೨೦. ಕಲ್ಲಡ್ಕ ಸೇವಾ ಸಹಕಾರಿ ಸಂಘ ಲಿ., ಕಲ್ಲಡ್ಕ, ಬಂಟ್ವಾಳ ೧೯೬೦
೨೧. ಕಳ್ಳಿಗೆ ಸೇವಾ ಸಹಕಾರಿ ಸಂಘ ಲಿ., ಕಳ್ಳಿಗೆ, ಬಂಟ್ವಾಳ ೧೯೨೦
೨೨. ಕಜೆಕಾರು ಸೇವಾ ಸಹಕಾರಿ ಸಂಘ ಲಿ., ಕಜೆಕಾರು, ಬಂಟ್ವಾಳ ೧೯೫೪
೨೩. ಕಾವಳಮೂಡೂರು ಸೇವಾ ಸಹಕಾರಿ ಸಂಘ ಲಿ., ಕಾವಳಕಟ್ಟ, ಬಂಟ್ವಾಳ ೧೯೧೯
೨೪. ಕಾವಳಪಡೂರು ಸೇವಾ ಸಹಕಾರಿ ಸಂಘ ಲಿ., ವಗ್ಗ, ಬಂಟ್ವಾಳ ೧೯೬೦
೨೫. ಕೈರಂಗ ಸೇವಾ ಸಹಕಾರಿ ಸಂಘ ಲಿ., ಕೈರಂಗಳ, ಬಂಟ್ವಾಳ ೧೯೫೫
೨೬. ಕುರಿಯಾಳ ಸೇವಾ ಸಹಕಾರಿ ಸಂಘ ಲಿ., ಕುರಿಯಾಳ, ಬಂಟ್ವಾಳ ೧೯೬೦
೨೭. ಕುರ್ನಾಡು ಸೇವಾ ಸಹಕಾರಿ ಸಂಘ ಲಿ., ಕುರ್ನಾಡು, ಬಂಟ್ವಾಳ ೧೯೫೩
೨೮. ಕೇಪು ಸೇವಾ ಸಹಕಾರಿ ಸಂಘ ಲಿ., ಕೇಪು, ಬಂಟ್ವಾಳ ೧೯೫೫
೨೯. ಕೆದಿಲ ಸೇವಾ ಸಹಕಾರಿ ಸಂಘ ಲಿ., ಕೆದಿಲ, ಬಂಟ್ವಾಳ ೧೯೧೯

೩೦. ಕುಂಡಡ್ಕ ಸೇವಾ ಸಹಕಾರಿ ಸಂಘ ಲಿ., ಕುಂಡಡ್ಕ, ಬಂಟ್ವಾಳ ೧೯೨೧
೩೧. ಕೊಲ್ನಾಡು ಸೇವಾ ಸಹಕಾರಿ ಸಂಘ ಲಿ., ಕೊಲ್ನಾಡು, ಬಂಟ್ವಾಳ ೧೯೬೦
೩೨. ಮಂಚಿ ಸೇವಾ ಸಹಕಾರಿ ಸಂಘ ಲಿ., ಮಂಚಿ, ಬಂಟ್ವಾಳ ೧೯೫೩
೩೩. ಮಣಿನಾಲ್ಕೂರು ಸೇವಾ ಸಹಕಾರಿ ಸಂಘ ಲಿ., ಮಣಿನಾಲ್ಕೂರು, ಬಂಟ್ವಾಳ ೧೯೫೮
೩೪. ಮೇರಮಜ್ಲು ಸೇವಾ ಸಹಕಾರಿ ಸಂಘ ಲಿ., ಮೇರಮಜ್ಲು, ಬಂಟ್ವಾಳ ೧೯೬೦
೩೫. ಮೂಡನಡುಗೋಡು ಸೇವಾ ಸಹಕಾರಿ ಸಂಘ ಲಿ., ಮೂಡನಡುಗೋಡು, ಬಂಟ್ವಾಳ ೧೯೫೬
೩೬. ಮಾಣಿಲ ಸೇವಾ ಸಹಕಾರಿ ಸಂಘ ಲಿ., ಮಾಣಿಲ, ಬಂಟ್ವಾಳ ೧೯೩೭
೩೭. ನರಿಂಗಾನ ಸೇವಾ ಸಹಕಾರಿ ಸಂಘ ಲಿ., ನರಿಂಗಾನ, ಬಂಟ್ವಾಳ ೧೯೬೦
೩೮. ನಾವೂರು ಸೇವಾ ಸಹಕಾರಿ ಸಂಘ ಲಿ., ನಾವೂರು, ಬಂಟ್ವಾಳ ೧೯೨೧
೩೯. ಪಂಜಿಕಲ್ಲು ಸೇವಾ ಸಹಕಾರಿ ಸಂಘ ಲಿ., ಪಂಜಿಕಲ್ಲು, ಬಂಟ್ವಾಳ ೧೯೬೦
೪೦. ಪಿಲಾತಬೆಟ್ಟು ಸೇವಾ ಸಹಕಾರಿ ಸಂಘ ಲಿ., ಪಿಲಾತಬೆಟ್ಟು, ಬಂಟ್ವಾಳ ೧೯೧೭
೪೧. ಫರಂಗಿಪೇಟೆ ಸೇವಾ ಸಹಕಾರಿ ಸಂಘ ಲಿ., ಫರಂಗಿಪೇಟೆ, ಬಂಟ್ವಾಳ ೧೯೫೩
೪೨. ಪೆರುವಾಯಿ ಸೇವಾ ಸಹಕಾರಿ ಸಂಘ ಲಿ., ಅಡ್ಯನಡ್ಕ, ಬಂಟ್ವಾಳ ೧೯೪೧
೪೩. ಮಣಚ ಸೇವಾ ಸಹಕಾರಿ ಸಂಘ ಲಿ., ಮಣಚ, ಬಂಟ್ವಾಳ ೧೯೬೨
೪೪. ವೀರಕಂಭ ಸೇವಾ ಸಹಕಾರಿ ಸಂಘ ಲಿ., ವೀರಖಂಬ, ಬಂಟ್ವಾಳ ೧೯೪೪
೪೫. ವಿಟ್ಲ ಸೇವಾ ಸಹಕಾರಿ ಸಂಘ ಲಿ., ವಿಟ್ಲ, ಬಂಟ್ವಾಳ ೧೯೧೦
೪೬. ವಿಟ್ಲಪಡ್ನೂರು ಸೇವಾ ಸಹಕಾರಿ ಸಂಘ ಲಿ., ವಿಟ್ಲ, ಬಂಟ್ವಾಳ ೧೯೬೦

**ಭೂ ಅಭಿವೃದ್ಧಿ ಬ್ಯಾಂಕ್**

೪೭. ಬಂಟ್ವಾಳ ಸಹಕಾರಿ ಭೂ ಅಭಿವೃದ್ಧಿ ಬ್ಯಾಂಕ್ ಲಿ., ಬಂಟ್ವಾಳ ೧೯೬೨

**ಮಾರಾಟ ಸಂಘ**

೪೮. ಬಂಟ್ವಾಳ ತಾಲೂಕು ಕೃಷಿ ಉತ್ಪನ್ನ ಸಹಕಾರಿ ಮಾರಾಟ ಸಂಘ ಲಿ., ಬಂಟ್ವಾಳ ೧೯೬೦

**ಹಾಲು ಸರಬರಾಜು ಸಂಘ**

೪೯. ಬಂಟ್ವಾಳ ಸಹಕಾರಿ ಹಾಲು ಸರಬರಾಜು ಸಂಘ ಲಿ., ಬಂಟ್ವಾಳ ೧೯೫೬
೫೦. ಫರಂಗಿಪೇಟೆ ಸಹಕಾರಿ ಹಾಲು ಸರಬರಾಜು ಸಂಘ ಲಿ., ಫರಂಗಿಪೇಟೆ, ಬಂಟ್ವಾಳ ೧೯೬೫
೫೧. ಮಾಣಿ ಸಹಕಾರಿ ಹಾಲು ಸರಬರಾಜು ಸಂಘ ಲಿ., ಮಾಣಿ, ಬಂಟ್ವಾಳ ೧೯೫೫
೫೨. ವಿಟ್ಲ ಸಹಕಾರಿ ಹಾಲು ಸರಬರಾಜು ಸಂಘ ಲಿ., ವಿಟ್ಲ, ಬಂಟ್ವಾಳ ೧೯೫೯
೫೩. ಪಾಣೆಮಂಗಳೂರು ಸಹಕಾರಿ ಹಾಲು ಸರಬರಾಜು ಸಂಘ ಲಿ., ಪಾಣೆಮಂಗಳೂರು, ಬಂಟ್ವಾಳ ೧೯೬೭

**ಸ್ಟೋರ್ಸ್**

೫೪. ಸೆಂಟ್ರಲ್ ಅಡಿಕೆ ಪರಿಶೋಧಕರ ಕೇಂದ್ರ ನೌಕರ ಕನ್ಸೂಮರ್ ಸ್ಟೋರ್ಸ್ ಲಿ., ವಿಟ್ಲ, ಬಂಟ್ವಾಳ ೧೯೬೫
೫೫. ವಿಟ್ಲ ಪಬ್ಲಿಕ್ ಎಂಪ್ಲೋಯೀಸ್ ಕೋಪರೇಟಿವ್ ಸ್ಟೋರ್ಸ್ ಲಿ., ವಿಟ್ಲ, ಬಂಟ್ವಾಳ ೧೯೬೫
೫೬. ಬಂಟ್ವಾಳ ಪಬ್ಲಿಕ್ ಎಂಪ್ಲೋಯೀಸ್ ಕೋಪರೇಟಿವ್ ಸ್ಟೋರ್ಸ್ ಲಿ., ಬಂಟ್ವಾಳ ೧೯೬೮

**ವಿದ್ಯಾರ್ಥಿಗಳ ಸ್ಟೇಶನರಿ ಸ್ಟೋರ್ಸ್**

೫೭. ವಿಟ್ಲ ಬೋರ್ಡು ಹೈಸ್ಕೂಲ್ ವಿದ್ಯಾರ್ಥಿ ಸ್ಟೇಶನರಿ, ಸಹಕಾರಿ ಸಂಘ ಲಿ., ವಿಟ್ಲ, ಬಂಟ್ವಾಳ ೧೯೫೮
೫೮. **ಅಧ್ಯಾಪಕರ ಸಹಕಾರಿ ಸಂಘ ಲಿ., ವಿಟ್ಲ, ಬಂಟ್ವಾಳ** ೧೯೮೩

**ಗೃಹ ನಿರ್ಮಾಣ ಸಂಘ**

೫೯. ವಿಟ್ಲ ರೂರಲ್ ಹೌಸಿಂಗ್ ಸಹಕಾರಿ ಸಂಘ ಲಿ., ವಿಟ್ಲ, ಬಂಟ್ವಾಳ ೧೯೫೬
೬೦. ಬಂಟ್ವಾಳ ಶೆಡ್ಯೂಲ್ಡ್ ಜಾತಿ ಮತ್ತು ತರಗತಿ ಬಿಲ್ಡಿಂಗ್ ಸಹಕಾರಿ ಸಂಘ ಲಿ., ಬಂಟ್ವಾಳ ೧೯೬೩
೬೧. ಪಾಣೆಮಂಗಳೂರು ರೂರಲ್ ಹೌಸಿಂಗ್ ಸಹಕಾರಿ ಸಂಘ ಲಿ., ಪಾಣೆಮಂಗಳೂರು, ಬಂಟ್ವಾಳ ೧೯೫೬

**ಬೆಲ್ಲ ತಯಾರಿ ಸಂಘ**

೬೨. ಅಮ್ಟಾಡಿ ತಾಳೀ ಬೆಲ್ಲ ತಯಾರಕರ ಸಹಕಾರಿ ಸಂಘ ಲಿ.. ಅಮ್ಟಾಡಿ ಬಂಟ್ವಾಳ ೧೯೪೭
೬೩. ಬಂಟ್ವಾಳ ತಾಳೀಬೆಲ್ಲ ತಯಾರಕರ ಸಹಕಾರಿ ಸಂಘ ಲಿ.. ಬಂಟ್ವಾಳ ೧೯೪೭
೬೪. ಬರಿಮಾರು ತಾಳೀಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಕಡೇಶಿವಾಲಯ, ಬಂಟ್ವಾಳ ೧೯೪೭
೬೫. ಬಿಳಿಯೂರು ತಾಳೀಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಬಿಳಿಯೂರು, ಬಂಟ್ವಾಳ ೧೯೫೮
೬೬. ಫರಂಗಿಪೇಟೆ ತಾಳೀಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಫರಂಗಿಪೇಟೆ, ಬಂಟ್ವಾಳ ೧೯೪೭
೬೭. ಕಳ್ಳಿಗೆ ತಾಳೀಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಕಳ್ಳಿಗೆ, ಬಂಟ್ವಾಳ ೧೯೪೭
೬೮. ಕಲ್ಲಡ್ಕ ತಾಳೀಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಕಲ್ಲಡ್ಕ, ಬಂಟ್ವಾಳ ೧೯೪೭
೬೯. ಕುರ್ನಾಡು ತಾಳೀಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಕುರ್ನಾಡು, ಬಂಟ್ವಾಳ ೧೯೪೮
೭೦. ಕೊಲ್ನಾಡು ತಾಳೀಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಕೊಲ್ನಾಡು, ಬಂಟ್ವಾಳ ೧೯೪೮
೭೧. ಮಂಚಿ ತಾಳೀಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಮಂಚಿ, ಬಂಟ್ವಾಳ ೧೯೪೭
೭೨. ಮಣಿನಾಲ್ಕೂರು ತಾಳೀಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಮಣಿನಾಲ್ಕೂರು, ಬಂಟ್ವಾಳ ೧೯೪೭

| | | |
|---|---|---|
| ೭೩. | ನಾವೂರು ತಾಳೀಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ನಾವೂರು, ಬಂಟ್ವಾಳ | ೧೯೪೮ |
| ೭೪. | ನೇರಳಕಟ್ಟೆ ತಾಳೀಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ನೇರಳಕಟ್ಟೆ, ಬಂಟ್ವಾಳ | ೧೯೪೮ |
| ೭೫. | ಪಾಣೆಮಂಗಳೂರು ತಾಳೀಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಪಾಣೆಮಂಗಳೂರು, ಬಂಟ್ವಾಳ | ೧೯೪೭ |
| ೭೬. | ಪುಣಚ ತಾಳೀಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಪುಣಚ, ಬಂಟ್ವಾಳ | ೧೯೪೭ |
| ೭೭. | ಪೆರುವಾಯಿ ತಾಳೀಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಅಡ್ಯನಡ್ಕ, ಬಂಟ್ವಾಳ | ೧೯೪೮ |
| ೭೮. | ರಾಯಿ ತಾಳೀಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ರಾಯಿ, ಬಂಟ್ವಾಳ | ೧೯೪೭ |
| ೭೯. | ಶಂಬೂರು ತಾಳೀಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಶಂಬೂರು, ಬಂಟ್ವಾಳ | ೧೯೪೭ |
| ೮೦. | ಸಜಿಪಪಡು ತಾಳೀಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಪಾಣೆಮಂಗಳೂರು, ಬಂಟ್ವಾಳ | ೧೯೪೭ |
| ೮೧. | ಸಜಿಪಮೂಡ ತಾಳೀಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಪಾಣೆಮಂಗಳೂರು, ಬಂಟ್ವಾಳ | ೧೯೪೮ |
| ೮೨. | ಸಂಗಬೆಟ್ಟು ತಾಳೀಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ಸಂಗಬೆಟ್ಟು, ಬಂಟ್ವಾಳ | ೧೯೪೭ |
| ೮೩. | ತೆಂಕಬೆಳ್ಳೂರು ತಾಳೀಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ತೆಂಕಬೆಳ್ಳೂರು, ಬಂಟ್ವಾಳ | ೧೯೪೭ |
| ೮೪. | ವಗ್ಗ ತಾಳೀಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ವಗ್ಗ, ಬಂಟ್ವಾಳ | ೧೯೪೮ |
| ೮೫. | ವಿಟ್ಲ ತಾಳೀಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ವಿಟ್ಲ, ಬಂಟ್ವಾಳ | ೧೯೪೭ |
| ೮೬. | ವಿಟ್ಲಮುಡ್ನೂರು ತಾಳೀಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ವಿಟ್ಲ, ಬಂಟ್ವಾಳ | ೧೯೪೮ |
| ೮೭. | ವೀರಖಂಭ ತಾಳೀಬೆಲ್ಲ ತಯಾರಕರ ಸಹಕಾರಿ ಸಂಘ ಲಿ., ವೀರಖಂಭ, ಬಂಟ್ವಾಳ | ೧೯೪೮ |
| | **ಇತರ ಗ್ರಾಮ ಕೈಗಾರಿಕಾ ಸಂಘಗಳು** | |
| ೮೮. | ಬಂಟ್ವಾಳ ಗ್ರಾಮಾಂತರ ಕೈಗಾರಿಕಾ ಸಹಕಾರಿ ಸಂಘ, ಬಂಟ್ವಾಳ | ೧೯೬೨ |
| ೮೯. | ಬಂಟ್ವಾಳ ಕಂಚುಲೋಹ ಕಾಮಗಾರಿಕರ ಸಹಕಾರಿ ಸಂಘ, ಬಂಟ್ವಾಳ | ೧೯೫೮ |
| ೯೦. | ಪಾಣೆಮಂಗಳೂರು ಗುಡಿ ಕೈಗಾರಿಕಾ ಕಾಮಗಾರಿಕರ ಸಹಕಾರಿ ಸಂಘ, ಪಾಣೆಮಂಗಳೂರು, ಬಂಟ್ವಾಳ | ೧೯೫೮ |
| ೯೧. | ಪಾಣೆಮಂಗಳೂರು ಹೊರ್ನ್‌ಕೂಮ್ ವರ್ಕ್ಸ್ ಕೊಟೇಜ್ ಇಂಡಸ್ಟ್ರಿಯಲ್ ಸಹಕಾರಿ ಸಂಘ, ಪಾಣೆಮಂಗಳೂರು, ಬಂಟ್ವಾಳ | ೧೯೫೬ |
| ೯೨. | ವಿಟ್ಲ ಕೈಗಾರಿಕಾ ಕಾಮಗಾರಿಕರ ಸಹಕಾರಿ ಸಂಘ, ವಿಟ್ಲ, ಬಂಟ್ವಾಳ | ೧೯೬೫ |
| | **ಯೂನಿಯನ್** | |
| ೯೩. | ಬಂಟ್ವಾಳ ಸ್ಥಳೀಯ ಸಹಕಾರಿ ಯೂನಿಯನ್ ಲಿ., ಬಂಟ್ವಾಳ | ೧೯೫೬ |
| | **ಬೆಳ್ತಂಗಡಿ** | |
| | **ಸಹಕಾರಿ ವ್ಯವಸಾಯಿಕ ಬ್ಯಾಂಕ್** | |
| ೧. | ಬೆಳ್ತಂಗಡಿ ಸಹಕಾರಿ ವ್ಯವಸಾಯಿಕ ಬ್ಯಾಂಕ್ ಲಿ., ಬೆಳ್ತಂಗಡಿ | ೧೯೫೮ |
| ೨. | ಹತ್ಯಡ್ಕ ಸಹಕಾರಿ ವ್ಯವಸಾಯಿಕ ಬ್ಯಾಂಕ್ ಲಿ., ಅರಸಿನಮಕ್ಕಿ, ಬೆಳ್ತಂಗಡಿ | ೧೯೬೮ |
| ೩. | ಮುಂಡಾಜೆ ಸಹಕಾರಿ ವ್ಯವಸಾಯಿಕ ಬ್ಯಾಂಕ್ ಲಿ., ಮುಂಡಾಜೆ, ಬೆಳ್ತಂಗಡಿ | ೧೯೫೯ |
| ೪. | ವೇಣೂರು ಸಹಕಾರಿ ವ್ಯವಸಾಯಿಕ ಬ್ಯಾಂಕ್ ಲಿ., ವೇಣೂರು, ಬೆಳ್ತಂಗಡಿ | ೧೯೫೯ |
| | **ಸರ್ವೀಸ್ ಬ್ಯಾಂಕ್‌ಗಳು** | |
| ೫. | ತಣ್ಣೀರುಪಂತ ಸೇವಾ ಸಹಕಾರಿ ಬ್ಯಾಂಕ್ ಲಿ., ಕರಾಯ, ಬೆಳ್ತಂಗಡಿ | ೧೯೭೩ |
| ೬. | ಉಜ್ರೆ ಸೇವಾ ಸಹಕಾರಿ ಬ್ಯಾಂಕ್ ಲಿ., ಉಜ್ರೆ, ಬೆಳ್ತಂಗಡಿ | ೧೯೬೯ |
| ೭. | ಮೊಡಂತ್ಯಾರು ಸೇವಾ ಸಹಕಾರಿ ಬ್ಯಾಂಕ್ ಲಿ., ಮೊಡಂತ್ಯಾರು, ಬೆಳ್ತಂಗಡಿ | ೧೯೬೯ |
| | **ಸೇವಾ ಸಹಕಾರಿ ಸಂಘಗಳು** | |
| ೮. | ಅಳದಂಗಡಿ ಸೇವಾ ಸಹಕಾರಿ ಸಂಘ ಲಿ., ಅಳದಂಗಡಿ, ಬೆಳ್ತಂಗಡಿ | ೧೯೨೯ |
| ೯. | ಬೆಳಾಲ ಸೇವಾ ಸಹಕಾರಿ ಬ್ಯಾಂಕ್ ಲಿ., ಬೆಳಾಲ, ಬೆಳ್ತಂಗಡಿ | ೧೯೫೩ |
| ೧೦. | ಬಂಗಾಡಿ ಸೇವಾ ಸಹಕಾರಿ ಬ್ಯಾಂಕ್ ಲಿ., ಬಂಗಾಡಿ, ಬೆಳ್ತಂಗಡಿ | ೧೯೬೦ |
| ೧೧. | ಬಂದಾರು ಸೇವಾ ಸಹಕಾರಿ ಬ್ಯಾಂಕ್ ಲಿ., ಬಂದಾರು, ಬೆಳ್ತಂಗಡಿ | ೧೯೨೦ |
| ೧೨. | ಶ್ರೀ ಧರ್ಮಸ್ಥಳ ಸೇವಾ ಸಹಕಾರಿ ಬ್ಯಾಂಕ್ ಲಿ., ಧರ್ಮಸ್ಥಳ, ಬೆಳ್ತಂಗಡಿ | ೧೯೩೬ |
| ೧೩. | ಕೊಕ್ರಾಡಿ ಸೇವಾ ಸಹಕಾರಿ ಬ್ಯಾಂಕ್ ಲಿ., ಕೊಕ್ರಾಡಿ, ಬೆಳ್ತಂಗಡಿ | ೧೯೨೫ |
| ೧೪. | ಕಳಿಯ ಸೇವಾ ಸಹಕಾರಿ ಬ್ಯಾಂಕ್ ಲಿ., ಗೇರುಕಟ್ಟೆ, ಬೆಳ್ತಂಗಡಿ | ೧೯೨೪ |
| ೧೫. | ಕೊಯ್ಯೂರು ಸೇವಾ ಸಹಕಾರಿ ಬ್ಯಾಂಕ್ ಲಿ., ಕೊಯ್ಯೂರು, ಬೆಳ್ತಂಗಡಿ | ೧೯೬೦ |
| ೧೬. | ಕಣಿಯೂರು ಸೇವಾ ಸಹಕಾರಿ ಬ್ಯಾಂಕ್ ಲಿ., ಕಾಣಿಯೂರು, ಬೆಳ್ತಂಗಡಿ | ೧೯೬೦ |
| ೧೭. | ಕೊಕ್ಕಡ ಸೇವಾ ಸಹಕಾರಿ ಬ್ಯಾಂಕ್ ಲಿ., ಕೊಕ್ಕಡ, ಬೆಳ್ತಂಗಡಿ | ೧೯೧೯ |
| ೧೮. | ಮಳವಂತಿಗೆ ಸೇವಾ ಸಹಕಾರಿ ಬ್ಯಾಂಕ್ ಲಿ., ಕಿಲ್ಲೂರು, ಬೆಳ್ತಂಗಡಿ | ೧೯೬೦ |
| ೧೯. | ಮಚ್ಚಿನ ಸೇವಾ ಸಹಕಾರಿ ಬ್ಯಾಂಕ್ ಲಿ., ಮಚ್ಚಿನ, ಬೆಳ್ತಂಗಡಿ | ೧೯೬೦ |
| ೨೦. | ನಲ್ಲೂರು ಸೇವಾ ಸಹಕಾರಿ ಬ್ಯಾಂಕ್ ಲಿ., ನಲ್ಲೂರು, ಬೆಳ್ತಂಗಡಿ | ೧೯೨೪ |
| ೨೧. | ನಾರಾವಿ ಸೇವಾ ಸಹಕಾರಿ ಬ್ಯಾಂಕ್ ಲಿ., ನಾರಾವಿ, ಬೆಳ್ತಂಗಡಿ | ೧೯೫೫ |
| ೨೨. | ನಿಡ್ಲೆ ಸೇವಾ ಸಹಕಾರಿ ಬ್ಯಾಂಕ್ ಲಿ., ನಿಡ್ಲೆ, ಬೆಳ್ತಂಗಡಿ | ೧೯೨೧ |

